# ಕೊಡಗಿನ ಜಾತ್ರೆಗಳ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

ಚಲುವರಾಜು

ಮಾರ್ಗದರ್ಶಕರು

ಡಾ. ಸಿ.ಟಿ. ಗುರುಪ್ರಸಾದ್

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ





ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೨೦

# ಕೊಡಗಿನ ಜಾತ್ರೆಗಳ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ ಮಹಾಪ್ರಬಂಧ

ಸಂಶೋಧಕರು

**ಚಲುವರಾಜು**

ಮಾರ್ಗದರ್ಶಕರು

**ಡಾ.ಸಿ.ಟಿ.ಗುರುಪ್ರಸಾದ್**

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ




**ಜಾನಪದ ಅಧ್ಯಯನ ವಿಭಾಗ**

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩೨೭೬

೨೦೨೦

# ಮಾರ್ಗದರ್ಶಕ ದೃಢೀಕರಣ ಪತ್ರ

**ಚಲುವರಾಜು** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ **"ಕೊಡಗಿನ ಜಾತ್ರೆಗಳ ಅಧ್ಯಯನ"** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಜಾನಪದ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ :

ಸ್ಥಳ : ವಿದ್ಯಾರಣ್ಯ

**ಡಾ.ಸಿ.ಟಿ.ಗುರುಪ್ರಸಾದ್**
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬

# ಸಂಶೋಧಕರ ದೃಢೀಕರಣ ಪತ್ರ

**"ಕೊಡಗಿನ ಜಾತ್ರೆಗಳ ಅಧ್ಯಯನ"** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ **ಜಾನಪದ ಅಧ್ಯಯನ ವಿಭಾಗದ** ಪ್ರಾಧ್ಯಾಪಕರಾದ **ಡಾ. ಸಿ.ಟಿ. ಗುರುಪ್ರಸಾದ್** ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

Ch——

**ಚಲುವರಾಜು**
ಸಂಶೋಧನಾ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

ದಿನಾಂಕ : 05/03/2020
ಸ್ಥಳ : ವಿದ್ಯಾರಣ್ಯ

# ಪರಿವಿಡಿ

ಅಧ್ಯಾಯ–೧

# ಅಧ್ಯಯನದ ಉದ್ದೇಶ ಮತ್ತು ಪ್ರಾಮುಖ್ಯತೆ, ವ್ಯಾಪ್ತಿ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

೧.೧ ಪ್ರಸ್ತಾವನೆ

೧.೨ ಅಧ್ಯಯನದ ಉದ್ದೇಶ ಮತ್ತು ಪ್ರಾಮುಖ್ಯತೆ

೧.೩ ಅಧ್ಯಯನದ ವ್ಯಾಪ್ತಿ

೧.೪ ಸಂಶೋಧನಾ ವಿಧಾನ

೧.೫ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ-೧

# ಅಧ್ಯಯನದ ಉದ್ದೇಶ ಮತ್ತು ಪ್ರಾಮುಖ್ಯತೆ, ವ್ಯಾಪ್ತಿ, ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

## ೧.೧ ಪ್ರಸ್ತಾವನೆ

ಭಾರತವು ಹಲವು ಶ್ರೇಣೀಕೃತ ವ್ಯವಸ್ಥೆಗಳ ತವರೂರು. ವಿಶ್ವವಿಖ್ಯಾತವಾಗಿರುವ ಕೆಲವು ಮತಗಳು, ಜನ್ಮತಳೆದುದು ಭಾರತದಲ್ಲಿಯೇ. ಇಲ್ಲಿ ಮತವು ಜೀವನದ ಒಂದು ಭಾಗ. ಮಾನವ ಬಹು ಹಿಂದಿನಿಂದ ಏನೆಲ್ಲವನ್ನು ಕಂಡುಕೊಂಡನೋ, ಅನುಸರಿಸಿದನೋ, ಅಭಿವ್ಯಕ್ತಿಸಿದನೋ ಅಂತಹ ಜೀವಾನಾನುಭವದ ಭಂಡಾರವೇ ಸಂಸ್ಕೃತಿ. ವಾಸ್ತವದಲ್ಲಿ ತನ್ನ ಕ್ರಿಯೆ, ಪ್ರತಿಕ್ರಿಯೆ, ಅನಿಸಿಕೆ-ಅನುಭವ ನೋವು-ನಲಿವು, ಕನಸು-ಕಲ್ಪನೆ ಇತ್ಯಾದಿಗಳನ್ನು ವ್ಯಕ್ತಪಡಿಸುವ ಸಾಧನವಾಗಿ ಸಂಸ್ಕೃತಿಯು ಜೀವನದಲ್ಲಿ ಹಾಸುಹೊಕ್ಕಾಗಿರುವುದನ್ನು ನಾವು ಕಾಣುತ್ತೇವೆ. ಈ ಸಾಧನದ ಹೊರತಾಗಿ ಯಾವುದೇ ವ್ಯಕ್ತಿಯ ಜೀವನ ಸತ್ವಯುತ ಅಸ್ತಿತ್ವ ಪಡೆಯಲಾರದು. ಭಾರತೀಯ ಮತೀಯ ನಂಬಿಕೆಗಳಲ್ಲಿ ಕುರುಡು ಎನ್ನಲಾದ ಹಾಗೂ ವರ್ಜ್ಯವಾಗಿರುವಂತದ್ದು ಬಹಳವಿದೆ. ಆದರೆ ಎಲ್ಲ ನಂಬಿಕೆಗಳೂ ಅವೈಜ್ಞಾನಿಕವಾದವುಗಳಲ್ಲ.

ಭಾರತೀಯ ಸಮಾಜವು ವೃತ್ತಿ ಆಧಾರಿತ ಸಾಂಪ್ರದಾಯಿಕ ವ್ಯವಸ್ಥೆಗಳಿಂದ ಹೆಣೆಯಲ್ಪಟ್ಟಿದೆ ಹಾಗೂ ಹಲವಾರು ಜಾತಿ ಮತಗಳಿಂದ ಕೂಡಿದ ಸಾಮಾಜಿಕ ವ್ಯವಸ್ಥೆ ಕಂಡುಬರುತ್ತದೆ. ಇಂತಹ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರತಿಯೊಂದು ಜಾತಿಯೂ ತನ್ನದೇ ಆದಂತಹ ಸಂಪ್ರದಾಯ, ನಂಬಿಕೆ, ಆಚಾರ, ವಿಚಾರಗಳಿಗೆ ಸಂಬಂಧಿಸಿದಂತೆ ಸಾಂಸ್ಕೃತಿಕ ಹಿನ್ನೆಲೆಗಳನ್ನು ಒಳಗೊಂಡಿರುವುದು ಬಹುಮುಖಿ ಸಂಸ್ಕೃತಿಯ ಲಕ್ಷಣ. ಮಾನವನ ಉತ್ಸಾಹಕ್ಕೆ ಕಾರಣವಾಗುವ ಹಲವು ಸನ್ನಿವೇಶಗಳಲ್ಲಿ ಆಚರಣೆಗಳು ಪ್ರಧಾನವಾಗಿದ್ದು, ಇವು ಜನರನ್ನು ಒಂದೂಗೂಡಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ.

ಆಚರಣೆಗಳು ಆಯಾಯ ಮತಗಳಿಂದ ಪ್ರಭಾವಿತವಾಗಿರುತ್ತವೆ. ವರ್ಷಕ್ಕೊಮ್ಮೆ ಆಚರಿಸುವ ಇಂತಹ ಆಚರಣೆಗಾಗಿ ಮತಗಳ ವಿಧಿ ವಿಧಾನಗಳನ್ನು ಅನುಸರಣೆ ಮಾಡುವುದಕ್ಕಾಗಿ ಅಸಂಖ್ಯಾತ ಜನರು ಒಂದೆಡೆ ಸೇರುತ್ತಾರೆ. ಇಂತಹ ಆಚರಣೆಗಳೇ ಜಾತ್ರೆಗಳೆನಿಸಿವೆ. ಜನರೇ ಜಾತ್ರೆಗೆ ಬಂಡವಾಳ ಜನಸೇರಿದರೆ ಜಾತ್ರೆ ನಡೆಯುತ್ತದೆ, ಹಬ್ಬದ ಊಟ ಜಾತ್ರೆಯ ನೋಟ ಇತ್ಯಾದಿ ಸಾಮಾಜಿಕ ನುಡಿಗಟ್ಟುಗಳು ಇದನ್ನು ದೃಢಪಡಿಸುತ್ತವೆ. ಜಾತ್ರೆಗಳು ಭಾರತಕ್ಕೆ ಮಾತ್ರ ಸೀಮಿತವಾಗಿಲ್ಲ. ಬದಲಾಗಿ

ವಿಶ್ವದ ಎಲ್ಲಾ ಸಮುದಾಯಗಳು ಸುಖ, ದುಃಖ, ನೆಮ್ಮದಿ ನಾಳೆಯ ಕನಸುಗಳು ನನಸಾಗಲು ಇತ್ಯಾದಿ ಒಂದಿಲ್ಲೊಂದು ಬೇಡಿಕೆಗಳ ಈಡೇರಿಕೆಗಾಗಿ ದೈವದ ಮೊರೆಹೋಗುತ್ತಿರುವ ಕಾರಣದಿಂದಾಗಿ ಜಗತ್ತಿನೆಲ್ಲೆಡೆ ಜಾತ್ರೆಗಳು ನಡೆಯುತ್ತವೆ. ಅರೇಬಿಯ, ಮೆಸಪಟೋಮಿಯ ಪ್ಯಾಲಸ್ತೈನ್, ಸಿರಿಯಾ, ಈಜಿಪ್ಟ್ ಮುಂತಾದ ದೇಶಗಳಲ್ಲಿಯೂ ಜಾತ್ರೆಗಳು ನಡೆಯುತ್ತಿವೆ. ಇಂತಹ ಜಾತ್ರೆಯ ಆಚರಣೆಗಳಿಂದ ಭಾರತವೂ ಹೊರತಾಗಿಲ್ಲ.

"ಭಾರತೀಯ ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆ ಶ್ರೀಮಂತವಾಗಿರುವುದು ಜಾತ್ರೆ, ಹಬ್ಬ, ಉತ್ಸವಗಳ ಮೂಲಕ. ಧಾರ್ಮಿಕ ನೆಲೆಗಿಂತ ಜೀವನಾಧಾರಿತ ಮತ್ತು ವೃತ್ತಿ ಆಧಾರಿತ ನೆಲೆಗಳು ಇಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಬಹುಶಃ ಭಾರತದಂತಹ ಬಹುಮುಖಿ ಸಂಸ್ಕೃತಿ ರಾಷ್ಟ್ರದಲ್ಲಿ ಮಾತ್ರ ಕಾಣದೊರೆಯುವ ಈ ಬಗೆಯ ಜೀವನ ವಿಧಾನಕ್ಕೆ ಪಾರಂಪರಿಕ ದೇಣಿಗೆಗಳು ಅಪಾರ."[೧] ಎಂಬುದನ್ನು ನಾವು ಇಲ್ಲಿ ಗಮನಿಸಬಹುದು. ಜಾತ್ರೆಯ ಆಚರಣೆಗಳನ್ನು ಪ್ರಧಾನವಾಗಿ ಎರಡು ವಿಧಗಳಾಗಿ ಬೇರ್ಪಡಿಸಿ ಅಭ್ಯಸಿಸುವುದು ಹೆಚ್ಚು ಔಚಿತ್ಯಪೂರ್ಣವೆನಿಸುವುದು. ಮೊದಲನೆಯದು ಮತಗಳ ಆಚರಣೆ. ಇದು ಮಾನವರು ದೇವರನ್ನು ನಿಷ್ಠೆಯಿಂದ ಪೂಜಿಸಿ ಆರಾಧಿಸಿದ್ದಕ್ಕಾಗಿ ಅವನು ಪಡೆದ ಅಭಿವೃದ್ಧಿಯನ್ನು ನಿರಂತರವಾಗಿ ಮುಂದುವರಿಸಿಕೊಂಡು ಹೋಗಲು ಅವನು ದೇವರೊಂದಿಗೆ ಉಳಿಸಿಕೊಂಡು ಬಂದ ಅಪಾರ ನಂಬಿಕೆ ಮತಾಚರಣೆಯ ಹಬ್ಬಗಳು ಮತ್ತು ವಿಧಿ ಸಂಸ್ಕಾರಗಳ ಅನುಕರಣೆಯನ್ನು ಸೂಚಿಸುತ್ತದೆ. ಎರಡನೆಯದು ಮತಾತೀತ. ಆಚರಣೆಗಳಲ್ಲಿ ಅಸಾದ್ಯವಾದದ್ದು ಸಾಧ್ಯವಾದಾಗ, ಅನಿರೀಕ್ಷಿತವಾದದ್ದು ನಿರೀಕ್ಷೆಗೂ ಮೀರಿ ಸುಲಭ ಸಾದ್ಯವಾದಾಗ ಜನರ ಜೀವನದಲ್ಲಿ ದೊರಕುವ ಯಶಸ್ಸು, ಮನಸ್ಸಿನ ಸಿಹಿ–ಕಹಿ ನೆನೆಪುಗಳನ್ನು ಸ್ಮರಿಸಲು ಅವಕಾಶ ಕಲ್ಪಿಸುವ ಯಾವುದೇ ರೀತಿಯ ಆಚರಣೆಗಳು ಮತಾತೀತ ಆಚರಣೆಗಳು ಎನಿಸಿಕೊಳ್ಳುತ್ತವೆ, ಇಂತಹ ಎರಡೂ ಬಗೆಯ ಆಚರಣೆಗಳು ಭಾವ ಸಂಗಮಗಳಾಗಿ ಸಾಮಾಜಿಕ ವ್ಯವಸ್ಥೆಯ ಭಾಗವಾಗಿ ಜಾತ್ರೆಗಳು ನಡೆಯುತ್ತಿವೆ.

ಸಮಾಜವು ವಿಭಿನ್ನ ಸಾಂಸ್ಕೃತಿಕ ಮತ್ತು ಸಾಮಾಜಿಕ ಅಂತಸ್ತುಗಳು ಹಾಗೂ ಸಾಮಾಜಿಕ ನಿಯಮಗಳಿಂದ ಹೆಣೆಯಲ್ಪಟ್ಟ ಒಂದು ವ್ಯವಸ್ಥೆಯಾಗಿದೆ. ಆದರೆ ಅದು ಜಡ ವ್ಯವಸ್ಥೆಯಾಗಿರದೆ ಕ್ರಿಯಾಶೀಲತೆಯಿಂದ ಕೂಡಿರುವ ಗತಿಶೀಲ ವ್ಯವಸ್ಥೆಯಾಗಿದೆ. ಈ ನಿಟ್ಟಿನಲ್ಲಿ ಜಾತ್ರೆಗಳು ಜನರನ್ನು ಸಕ್ರಿಯವಾಗಿ ಸಾಮಾಜಿಕ ಪ್ರಕ್ರಿಯೆಗೆ ಒಳಪಡಿಸಿ, ಆ ಮೂಲಕ ಕ್ರಿಯಾಶೀಲ ಸಾಮಾಜಿಕ ವ್ಯವಸ್ಥೆಯ ಹುಟ್ಟಿಗೆ ಕಾರಣವಾಗುತ್ತದೆ. ಜಾತ್ರೆಗಳಲ್ಲಿ ಸೇರಿದ ಜನರು ಇತರರೊಂದಿಗೆ ಬೆರೆಯುತ್ತಾರೆಂದರೆ ಅವರು ಪರಸ್ಪರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ವಿಚಾರಗಳಿಂದ ಕೂಡಿದ್ದಾಗಿರುತ್ತದೆ. ಇಂತಹ ಸಂದರ್ಭಗಳಲ್ಲಿ ಜನರ ನಡುವೆ ಏರ್ಪಡುವ ಸಾಮಾಜಿಕ ನಿಯಮಗಳು ಮತ್ತು ಸಾಮಾಜಿಕ ಅಂತಸ್ತುಗಳು ಸಮಾಜದ ಸ್ಥಿರ ರೂಪವನ್ನು ಪ್ರತಿಬಿಂಬಿಸುವವು. ಜಾತ್ರೆಯ ಆಚರಣೆಯಲ್ಲಿ ಭಾಗವಹಿಸುವ ಸದಸ್ಯರೆಲ್ಲರೂ ಸಮಾನರೆಂದಾಗಲಿ ಅಥವಾ ಸಮಾನವಾಗಿ

ಅಂತಃಕ್ರಿಯೆಯಲ್ಲಿ ನಿರತರಾಗಿರುತ್ತಾರೆಂದು ಭಾವಿಸಲಾಗದು ಏಕೆಂದರೆ ಪ್ರಭೇದಗಳನ್ನು ಒಳಗೊಂಡಿರುವ ಸಮಾಜದಲ್ಲಿ ನಡೆಯುವ ಜಾತ್ರೆಯಲ್ಲಿ ಸೇರುವ ಎಲ್ಲಾ ವ್ಯಕ್ತಿಗಳೂ ಸರಿಸಮಾನರು ಎಂದಾಗಲೀ, ಸಮಾನ ಅಂತಸ್ತು ಮತ್ತು ಪಾತ್ರಗಳನ್ನು ಹೊಂದಿರುವುದು ಅಸಂಭವ.

ಎಲ್ಲಾ ಸಮಾಜಗಳಲ್ಲೂ ವಯಸ್ಸು, ಲಿಂಗ, ವೃತ್ತಿ, ಹಾಗೂ ವೈಯಕ್ತಿಕ ಗುಣಗಳ ಆಧಾರದ ಮೇಲೆ ಜನರು ವಿಭಿನ್ನ ಅಂತಸ್ತು ಮತ್ತು ಪಾತ್ರಗಳನ್ನು ಪಡೆದಿರುತ್ತಾರೆ. ಜಾತ್ರೆಯಲ್ಲಿ ಸೇರಿದ ಜನರ ನಡುವೆ ಏರ್ಪಡುವ ಸಾಮಾಜಿಕ ಅಂತಃಕ್ರಿಯೆ ಬಹಳ ಸಂಕೀರ್ಣ, ಸೂಕ್ಷ್ಮ, ನಿಗೂಢ ಹಾಗೂ ಗತಿಶೀಲವಾದುದಾಗಿರುತ್ತದೆ. ಜಾತ್ರೆಯ ಸಮಯದಲ್ಲಿ ಜನರ ಮಧ್ಯೆ ಪರಸ್ಪರ ಉಂಟಾಗುವ ಸಹಕಾರ, ಸ್ಪರ್ಧೆ, ಸಂಘರ್ಷ, ಹೊಂದಾಣಿಕೆ, ಸ್ವಾಂಗೀಕರಣ ಇವೆಲ್ಲವೂ ಸಹ ಸಾಮಾಜಿಕ ಅಂತಃಕ್ರಿಯೆಯ ಮೂಲಭೂತ ರೂಪಗಳೇ ಆಗಿವೆ.

ಆರಂಭದಿಂದಲೂ ಮನುಷ್ಯ ಹಲವಾರು ಆಚರಣಾ ಪದ್ಧತಿಗಳನ್ನು ನಡೆಸುತ್ತಾ ಬಂದಿದ್ದಾನೆ. ನಮ್ಮ ಬದುಕಿನ ಭಾಗವಾಗಿ ನಡೆಯುವ ಪ್ರತಿ ಆಚರಣೆ, ಸಂಪ್ರದಾಯಗಳಲ್ಲೂ ಮತದ ಭಾವನೆಗಳಿವೆ. ಭಾರತೀಯ ಸಮಾಜದಲ್ಲಿ ಮತವು ಜನರ ಜೀವನವನ್ನು ಪ್ರತಿನಿಧಿಸುವ ಸಾಧನದಂತಿದ್ದು ಮತದ ವಿವಿಧ ಮುಖಗಳಾದ ಸಂಪ್ರದಾಯ, ಸಂಸ್ಕಾರ, ಆಚರಣೆ, ಆರಾಧನೆ, ನಂಬಿಕೆ ಇತ್ಯಾದಿ ವಿಧಿವಿಧಾನಗಳು ಜನಸಮುದಾಯವೊಂದರಲ್ಲಿ ಸಂಕೀರ್ಣ ರೂಪದಲ್ಲಿ ಬಳಕೆಗೊಂಡಿದ್ದು ಖಚಿತವಾದ ವಿವರಣೆಯನ್ನು ಒದಗಿಸುವುದು ಕಷ್ಟಸಾಧ್ಯ.

ಆಚರಣೆ ಎಂದರೆ ಸಾಮಾನ್ಯವಾಗಿ ಸಮುದಾಯದ ಒಪ್ಪಿಗೆ ಪಡೆದು ಪರಂಪರಾಗತವಾಗಿ ಅನುಸರಿಸಲಾಗುತ್ತಿರುವ ನಡಾವಳಿ. ನಂಬಿಕೆಯೇ ಈ ಆಚರಣೆಗಳ ಮೂಲಧಾತುವಾಗಿರುತ್ತದೆ. ಭಾರತೀಯರು ಮತಗಳಲ್ಲಿ ನಂಬಿಕೆ ಉಳ್ಳವರಾಗಿದ್ದು ಈ ಮತಗಳ ಆಚರಣೆಯ ಒಂದು ಭಾಗವಾಗಿ ಜಾತ್ರೆಗಳು ಆಚರಣೆಗೆ ಬಂದಿವೆ. ಜಾತ್ರೆಗಳು ಪ್ರಪಂಚದ ಬಹುತೇಕ ಸಮುದಾಯಗಳಲ್ಲಿ ಇಂದಿಗೂ ಆಚರಣೆಯಲ್ಲಿದ್ದು, ಸಾಂಸ್ಕೃತಿಕ ಮೌಲ್ಯಗಳ ಪುನರುಜ್ಜೀವನಕ್ಕೆ ಅವಕಾಶ ಮಾಡಿಕೊಡುತ್ತವೆ. ಈ ಸಮಯದಲ್ಲಿ ಜರುಗುವ "ಅಗತ್ಯ ಆರಾಧನೆಯ ನಡುವೆ ಮನುಷ್ಯ ಸಂಸ್ಕೃತಿಯ ಸಂಬಂಧ ಬೆಸೆದುಕೊಂಡಿವೆ"[೨] ಎಂಬುದು ನಮಗೆ ತಿಳಿದುಬರುತ್ತದೆ. ಶ್ರಮಜೀವಿಯಾದ ಮಾನವ ತನ್ನ ಬದುಕಿನ ಬವಣೆಯಿಂದ ದಣಿದು ತನಗಾದ ಬೇಸರ, ಆಯಾಸಗಳಿಂದ ಬಿಡುವು ಪಡೆಯಲು ಪ್ರಯತ್ನಿಸಿದ. ಬಿಡುವಿನ ಸಮಯವನ್ನು ಸಂತೋಷವಾಗಿ ಕಳೆಯಲು ತಾನು ನಂಬಿ ನೆಚ್ಚಿಕೊಂಡಿದ್ದ ದೇವರ ಹೆಸರಿನಲ್ಲಿ ಹಬ್ಬ, ಉತ್ಸವ, ಜಾತ್ರೆ ಮೊದಲಾದ ಆಚರಣೆಗಳತ್ತ ಗಮನ ಹರಿಸಿದ. ಆಚರಣೆಗಳೆಲ್ಲವೂ ಜನ ಜೀವನದ ಒಂದು ಭಾಗವಾಗಿ ಒಡಮೂಡಿ ಬಂದಿದ್ದರಿಂದ ವ್ಯಕ್ತಿಯ ಹಿತಕ್ಕಿಂತ ಸಮಷ್ಟಿಯ ಹಿತಾಶಕ್ತಿಯೇ ಪ್ರಮುಖವಾಗಿರುತ್ತದೆ. ತಾವು ವಾಸಮಾಡುವ ಪರಿಸರದ ಹಿತರಕ್ಷಣೆಯೇ ಆಚರಣೆಗಳ ಪ್ರಮುಖ ಉದ್ದೇಶವಾಗಿರುತ್ತದೆ.

ಸಮಷ್ಠಿಯ ಹಿತರಕ್ಷಣೆಯನ್ನು ಬಯಸುವ ಆಚರಣೆಗಳಲ್ಲಿ ಜಾತ್ರೆಗಳು ಅತಿ ಮುಖ್ಯವಾದವುಗಳಾಗಿವೆ. ಜಾತ್ರೆಗಳು ಸಾಮಾನ್ಯವಾಗಿ ಊರಿನ ಹೆಸರಿನಿಂದ ಅಥವಾ ಅಲ್ಲಿಯ ದೇವರ ಹೆಸರಿನಿಂದ ಕರೆಯಲ್ಪಡುತ್ತವೆ. ವಿಜೃಂಬಣೆಯಿಂದ ಆಚರಿಸಲ್ಪಟ್ಟು ಜನಪ್ರಿಯತೆಯನ್ನುಗಳಿಸಿರುತ್ತವೆ. ಪರಂಪರಾನುಗತ ಆಚರಣೆಯ ಜಾತ್ರೆಗಳು ಹಲವಾರು ಆಶಯಗಳನ್ನು ಒಳಗೊಂಡಿರುತ್ತವೆ. ಜಾತ್ರೆಗಳು ಜನರ ಸಾಮಾಜಿಕ, ಆರ್ಥಿಕ, ಮತೀಯ ಉದ್ದೇಶಗಳನ್ನು ಈಡೇರಿಸುವುದರ ಜೊತೆಗೆ ಗ್ರಾಮಗಳಲ್ಲಿ ವಾಸವಾಗಿರುವ ಗ್ರಾಮೀಣ ಸಂಸ್ಕೃತಿಯನ್ನು ಮತ್ತು ಗ್ರಾಮೀಣ ಜನರ ಸತ್ವಯುತ ಜೀವನವನ್ನು ಪ್ರತಿಬಿಂಬಿಸುತ್ತವೆ. ಗ್ರಾಮೀಣ ಕಲಾವಿದರ ಕಲಾಪ್ರದರ್ಶನಕ್ಕೆ ಅವಕಾಶವನ್ನು ಮಾಡಿಕೊಟ್ಟು ಅಂತಹ ಕಲಾವಿದರ ಉಪಜೀವನಕ್ಕೆ ದಾರಿಯನ್ನು ಮಾಡಿಕೊಡುವ ಜಾತ್ರೆಗಳು ವೈವಿಧ್ಯಮಯ ಸಾಂಸ್ಕೃತಿಕ ತಾಣಗಳಾಗಿವೆ.

ಜಾತ್ರೆಗಳು ಸಮಾಜದ ಸರ್ವ ಸದಸ್ಯರ ಹಾಗೂ ಎಲ್ಲಾ ವಯೋಮಾನದವರ ಸಹಜವಾದ ಸಾಮಾಜಿಕ ಬಯಕೆಗಳನ್ನು ಈಡೇರಿಸುತ್ತವೆ. ಮಕ್ಕಳಿಗೆ ಮನರಂಜನೆ, ಸಿಹಿತಿಂಡಿ, ಆಟಿಕೆಗಳನ್ನು, ಪ್ರೇಮಿಗಳಿಗೆ ಉಲ್ಲಾಸದ ಸಂಭ್ರಮವನ್ನು, ವೃದ್ಧರಿಗೆ ದೇವರ ದರ್ಶನದಿಂದ ಪುಣ್ಯಪ್ರಾಪ್ತಿಯ ಸಂತೃಪ್ತಿಯನ್ನು ನೀಡುತ್ತವೆ. ಜಾತ್ರೆಯ ನೆಪದಿಂದ ಬಂಧು–ಬಾಂಧವರು, ಮಿತ್ರರು ಒಂದೆಡೆ ಸೇರಿ ಪರಸ್ಪರ ಕಷ್ಟ–ಸುಖಗಳ ವಿಚಾರ ವಿನಿಮಯ ಮಾಡಿಕೊಳ್ಳಲು, ಹೊಸಬರ ಜೊತೆಯಲ್ಲಿ ಸ್ನೇಹ–ಸೌಹಾರ್ದ ಬೆಸೆಯಲು ಹಾಗೂ ಕೆಲವೊಮ್ಮೆ ವಧು–ವರರ ಆಯ್ಕೆಯ ವೇದಿಕೆಗಳಾಗಿಯೂ ಕಾರ್ಯನಿರ್ವಹಿಸುತ್ತವೆ. ಸಾಮಾಜಿಕ ಅವಶ್ಯಕತೆಗಳನ್ನು ಪೂರೈಸುವ ಕೆಲಸವನ್ನು ಜಾತ್ರೆಗಳು ಸಮರ್ಪಕವಾಗಿ ನಿರ್ವಹಿಸಿಕೊಂಡು ಬಂದಿವೆ. ಮಾನವನ ಸಾಮಾಜಿಕ ಜೀವನಕ್ಕೆ ಸ್ಥಿರತೆಯನ್ನು ಮತ್ತು ಮನುಕುಲದ ವಿಕಾಸಕ್ಕೆ ಅವಕಾಶವನ್ನು ಜಾತ್ರೆಗಳು ಕಲ್ಪಿಸಿಕೊಡುತ್ತವೆ. ಜಾತ್ರೆಗಳು ಜನಸಮುದಾಯದ ಬೇಸರವನ್ನು, ಜಡತ್ವವನ್ನು ಹೋಗಲಾಡಿಸುವ ಚೈತನ್ಯಶೀಲತೆಯ ಸಾಧನಗಳಾಗಿದ್ದು ಸಮಾಜದ ಸಾಂಸ್ಕೃತಿಕ ವಿಕಾಸಕ್ಕೆ ರಹದಾರಿಗಳಾಗಿವೆ.

ಇಂದಿನ ಆಧುನಿಕ ಯುಗದಲ್ಲಿ ಆಧುನಿಕರಣ, ಕೈಗಾರಿಕರಣ, ನಗರಿಕರಣ, ಆಧುನಿಕ ಶಿಕ್ಷಣ, ಪಾಶ್ಚಾತೀಕರಣಗಳ ಪ್ರಭಾವದಿಂದ ಬದಲಾಗಿರುವ ಹಾಗೂ ಬದಲಾಗುತ್ತಿರುವ ಜೀವನ ಶೈಲಿಗಳಿಂದಾಗಿ ಇಂದು ಜಾತ್ರೆಗಳ ಸ್ವರೂಪದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಜಾತ್ರೆ ನಡೆಯುವ ಸ್ಥಳಗಳಲ್ಲಿ ರಾಜಕೀಯ ಪ್ರೇರಿತ ಸಮಾರಂಭಗಳು ಸೇರಿಕೊಳ್ಳುತ್ತಿವೆ. ಶಬ್ದಮಾಲಿನ್ಯ ಮತ್ತು ಪರಿಸರ ಮಾಲಿನ್ಯಕ್ಕೆ ಎಡೆಮಾಡಿಕೊಡುತ್ತವೆ. ಸರಳವಾಗಿ ನೆರವೇರುತ್ತಿದ್ದ ಜಾತ್ರೆಗಳು ದುಂದು ವೆಚ್ಚದವುಗಳಾಗಿವೆ, ಜನರನ್ನು ಸಾಲಗಾರರನ್ನಾಗಿಸುತ್ತಿವೆ. ಕೆಲವೊಮ್ಮೆ ಮಹಿಳೆಯರನ್ನು ಶೋಷಣೆಗೆ ಬಲಿಪಶುಗಳನ್ನಾಗಿ ಮಾಡುವ ಘಟನೆಗಳು ನಡೆಯುವುದುಂಟು. ಇಂತಹ ಕೆಲವು ಸನ್ನಿವೇಶಗಳನ್ನು ಸಂಪೂರ್ಣವಾಗಿ ನಿಷೇಧಿಸಲಾಗದಿದ್ದರೂ ಅವುಗಳನ್ನು ಸರಿಪಡಿಸಿಕೊಳ್ಳದಿದ್ದರೆ ನಷ್ಟವಾಗುವುದು ಮಾನವ ಸಮೂಹಕ್ಕೆ.

ಇಂತಹ ಕೆಲವು ಅಂಶಗಳ ಹೊರತಾಗಿ ಜಾತ್ರೆಗಳು ತನ್ನ ಮೂಲಸತ್ವವನ್ನು ಕಳೆದುಕೊಳ್ಳದೆ ಹೊಸತನ ಮೈಗೂಡಿಸಿಕೊಂಡು ಬರಲು ಪ್ರಯತ್ನಿಸುವ ಮೂಲಕ ಮುಂದಿನ ಜನಾಂಗಕ್ಕೆ ತನ್ನ ಸಂದೇಶವನ್ನು ಸಾರಲು ಪ್ರಯತ್ನಿಸುತ್ತಿವೆ. ಪ್ರಾಚೀನದಿಂದ ಪ್ರಸ್ತುತದವರೆಗೆ ಅನೇಕ ವಿದ್ವಾಂಸರು ಜಾತ್ರೆಗಳ ಕುರಿತು ತಮ್ಮದೇ ಆದ ಅಭಿಪ್ರಾಯವನ್ನು ಮಂಡಿಸುತ್ತಾ ಬಂದಿದ್ದಾರೆ. ಜಾತ್ರೆಗಳು ಸಮಾಜದ ಅವಿಭಾಜ್ಯ ಅಂಗಗಳಾದ ರೂಡಿ, ಸಂಪ್ರದಾಯ, ಪದ್ಧತಿ, ಆಚಾರ–ವಿಚಾರಗಳನ್ನು ಒಳಗೊಂಡಿರುತ್ತವೆ, ಆದರೂ ಜಾತ್ರೆಗಳ ಕುರಿತಾದ ಅದೆಷ್ಟೋ ರಹಸ್ಯಗಳು ಚಿಂತನೆಗೆ ಒಳಪಡದೆ ಅಗೋಚರವಾಗಿಯೇ ಉಳಿದಿರುವುದು ವಿಸ್ಮಯದ ಸಂಗತಿ. ಈ ಕಾರಣದಿಂದಾಗಿ ಪ್ರಸ್ತುತ ಅಧ್ಯಯನಕ್ಕೆ ಪ್ರಯತ್ನಿಸಲಾಗಿದೆ.

## ೧.೨ ಅಧ್ಯಯನದ ಉದ್ದೇಶ ಮತ್ತು ಪ್ರಾಮುಖ್ಯತೆ

ಪ್ರಸ್ತುತ ಅಧ್ಯಯನವು ಕೊಡಗಿನ ಜಾತ್ರೆಗಳ ಅಧ್ಯಯನವಾಗಿದ್ದು ಇಂತಹ ಅಧ್ಯಯನದಲ್ಲಿ ಸಾಂಸ್ಕೃತಿಕ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳುವದು ಅಗತ್ಯವೂ, ಅನಿವಾರ್ಯವೂ ಆಗಿದ್ದು ಕೊಡಗು ಜಿಲ್ಲೆಯ ಜಾತ್ರೆಗಳೊಂದು ಸಾಂಸ್ಕೃತಿಕ ಅಧ್ಯಯನ ಮಾಡುವ ಪ್ರಸ್ತುತ ಈ ಸಂಶೋಧನಾ ಅಧ್ಯಯನವು ಈ ಕೆಳಕಂಡ ಪ್ರಮುಖ ಧ್ಯೇಯೋದ್ದೇಶಗಳನ್ನು ಒಳಗೊಂಡಿದೆ.

•ಮನುಷ್ಯನ ಸಂಬಂಧಗಳ ವೈವಿಧ್ಯಮಯ ಮುಖಗಳ, ಸಂಕೀರ್ಣತೆಯ ಸಾಂಸ್ಕೃತಿಕ ಅಧ್ಯಯನಕ್ಕೆ ಪ್ರಯತ್ನಿಸಲಾಗುವುದು.

•ಜಾತ್ರೆಗಳ ಪ್ರಾಚೀನತೆ, ಪರಂಪರೆ ಇವುಗಳ ಉದ್ದೇಶ ಮತ್ತು ಮಹತ್ವವನ್ನು ತಿಳಿಯುವುದು, ಹಾಗೂ ಇವತ್ತಿನ ಆಧುನಿಕ ಸಂದರ್ಭದ ಸ್ಥಿತ್ಯಂತರಗಳ ಬಗ್ಗೆ ಅಧ್ಯಯನಕ್ಕೊಳಪಡಿಸುವುದು. ಮತ್ತು ಮಹಿಳೆಯರಿಗೆ ನೀಡಿರುವ ಸ್ಥಾನಮಾನವನ್ನು ಕುರಿತು ಅಧ್ಯಯನ ಮಾಡುವುದು.

•ಜಾತ್ರೆಗಳ ಆಚರಣೆಯ ಸಮಯದಲ್ಲಿ ಒಂದು ಕೋಮಿನ ಜನರು ಹಾಗೂ ಸಾರ್ವಜನಿಕ ಭಕ್ತ ಸಮುದಾಯದ ಜೊತೆಗಿನ ಅವರ ಸಂಬಂಧಗಳ ಸ್ವರೂಪಗಳ ವಿವರಣೆ, ಜಾತ್ರೆಗಳ ಸಮನ್ವಯತೆ ಕುರಿತು ಚರ್ಚಿಸುವುದು.

•ಹಿಂದೆ ಜಾತ್ರೆಗಳು ಹೇಗಿದ್ದವು? ಈಗ ಹೇಗೆ ಪರಿವರ್ತನೆಗೊಂಡಿವೆ? ಎಂಬುದನ್ನು ತಿಳಿಸುವುದು

•ಪ್ರಾಚೀನ ಮತ್ತು ಆಧುನಿಕ ಜಾತ್ರೆಗಳ ನಡುವಿನ ಸಾಂಸ್ಕೃತಿಕ ವ್ಯತ್ಯಾಸಗಳನ್ನು ದಾಖಲಿಸುವುದು ಜಾತ್ರೆಗಳ ಮೇಲೆ ಆಗಿರುವ ಆಧುನೀಕರಣ ಪ್ರಭಾವವನ್ನು ಕುರಿತು ಅಧ್ಯಯನ ಮಾಡುವುದು.

•ಪ್ರಸ್ತುತ ಸಮಾಜಕ್ಕೆ ಅವಶ್ಯಕತೆ? ಎಂಬುದನ್ನು ಸಾಂಸ್ಕೃತಿಕ ನೆಲೆಗಟ್ಟಿನ ಹಿನ್ನೆಲೆಯಲ್ಲಿ ನಿರೂಪಿಸುವುದು, ಹಾಗೂ ಅರ್ಥೈಸುವುದು ಪ್ರಾಮುಖ್ಯವೆನಿಸುತ್ತದೆ.

**ಅಧ್ಯಯನದ ಪ್ರಾಮುಖ್ಯತೆ**

ಭಾರತೀಯ ಸಮಾಜವು ಪ್ರಸ್ತುತ ದಿನಗಳಲ್ಲಿ ಗಮನಾರ್ಹವಾದ ಬದಲಾವಣೆಗೆ ಒಳಪಟ್ಟಿದೆ. ಇಂತಹ ಬದಲಾವಣೆಗೆ ಕಾರಣಗಳು ಹಲವಾರು. ಅವುಗಳಲ್ಲಿ ಆಧುನಿಕ ಶಿಕ್ಷಣ, ಕೈಗಾರಿಕರಣ, ನಗರೀಕರಣ, ಆಧುನೀಕರಣ, ಪಾಶ್ಚಿಮಾತ್ಯೀಕರಣ, ಸಮೂಹ ಮಾಧ್ಯಮಗಳು ಮೊದಲಾದ ಅಂಶಗಳು ವಿಶೇಷವಾಗಿ ಕಾರಣಗಳಾಗಿವೆ. ಇವುಗಳ ಪ್ರಭಾವದಿಂದಾಗಿ ಜಾತ್ರೆಗಳ ಆಚರಣೆಯಲ್ಲಿಯೂ ಗಮನಾರ್ಹ ಬದಲಾವಣೆಗಳು ಉಂಟಾಗಿವೆ. ಪ್ರಸ್ತುತ ಈ ಅಧ್ಯಯನವು ಸಾಂಸ್ಕೃತಿಕವಾಗಿ ಜಾತ್ರೆಗಳನ್ನು ತೌಲನಿಕ ಚೌಕಟ್ಟಿನಲ್ಲಿ ಅಧ್ಯಯನ ಮಾಡುವಂತಹದ್ದಾಗಿದ್ದು, ಜನರ ಸಾಮಾಜಿಕ ಆಚರಣೆಗಳು, ನಂಬಿಕೆಗಳು, ಕ್ರಿಯಾವಿಧಿಗಳೂ, ಸಂಪ್ರದಾಯಗಳನ್ನು ಸಾಮಾಜಿಕ ದೃಷ್ಟಿಕೋನವನ್ನು ತಿಳಿಯಲು ಜಾತ್ರೆಗಳ ಐತಿಹಾಸಿಕ ಹಿನ್ನೆಲೆ, ಸಾಮಾಜಿಕ, ಸಾಂಸ್ಕೃತಿಕ ಜೀವನಕ್ರಮವನ್ನು ತಿಳಿಯಲು ಸಹಾಯಕವಾಗುತ್ತದೆ.

ಆಧುನಿಕ ಜಾತ್ರೆಗಳು ತನ್ನ ಮೂಲ ಆಚರಣಾ ಸ್ವರೂಪವನ್ನು ಕಳೆದುಕೊಳ್ಳುತ್ತಿವೆ ಎಂಬ ಕೂಗು ಕೇಳಿ ಬರುತ್ತಿರುವ ಸಮಯದಲ್ಲಿ ಜಾತ್ರೆಗಳು ಬದಲಾವಣೆಗಳಿಗೆ ಒಳಗಾಗಿವೆಯಾದರೂ ಅವು ತಮ್ಮ ಮೂಲ ಸತ್ವವನ್ನು ಕಳೆದುಕೊಳ್ಳದೆ ಹೊಸತನಗಳನ್ನು ಮೈಗೂಡಿಸಿಕೊಂಡು ಆಚರಣೆಗೆ ತರಲು ಪ್ರಯತ್ನಿಸುತ್ತಿವೆ ಎಂಬಂಶವನ್ನು ಅಧ್ಯಯನ ಮಾಡುವುದು ಸಹ ಪ್ರಧಾನಾಂಶಗಳಲ್ಲಿ ಒಂದಾಗಿದೆ.

## ೧.೩ ಅಧ್ಯಯನದ ವ್ಯಾಪ್ತಿ

ಕೊಡಗು ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಮಡಿಕೇರಿ, ವಿರಾಜಪೇಟೆ ಹಾಗು ಸೋಮವಾರಪೇಟೆ ಎಂಬ ಮೂರು ತಾಲೂಕುಗಳಲ್ಲಿ ಆಚರಣೆಯಲ್ಲಿರುವ ಪ್ರಮುಖ ಜಾತ್ರೆಗಳನ್ನು ಪ್ರಾತಿನಿಧಿಕವಾಗಿ ಅಧ್ಯಯನಕ್ಕೆ (ಸಂಶೋಧನೆಗೆ) ಆಯ್ದುಕೊಳ್ಳಲಾಗಿದೆ.

- ಮಡಿಕೇರಿ ತಾಲೂಕು ಜಾತ್ರೆಗಳು
- ವಿರಾಜಪೇಟೆ ತಾಲೂಕು ಜಾತ್ರೆಗಳು
- ಸೋಮವಾರಪೇಟೆ ತಾಲೂಕು ಜಾತ್ರೆಗಳು

ಈ ಮೇಲೆ ತಿಳಿಸಿರುವ ತಾಲೂಕುಗಳ ಜಾತ್ರೆಯನ್ನು ಪ್ರಾತಿನಿಧಿಕವಾಗಿ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದ್ದು, ಪ್ರತಿ ತಾಲೂಕಿನ ಜಾತ್ರೆಗಳನ್ನು ಪ್ರತ್ಯೇಕ ಅಧ್ಯಯನ ಮಾಡಿ ಆ ಜಾತ್ರೆಗಳ ವಿಶೇಷತೆಗಳ ಸಮಗ್ರ ವಿವರಣೆಯನ್ನು ಸಂಶೋಧನಾ ವರದಿಯಲ್ಲಿ ವಿವರವಾಗಿ ವಿಶ್ಲೇಷಿಸಲಾಗಿದೆ.

## ಪ್ರಾದೇಶಿಕ ಗುಣಲಕ್ಷಣಗಳು

**ಅ.ವಿಸ್ತೀರ್ಣ**

ಮೂರು ತಾಲೂಕುಗಳನ್ನು ಒಳಗೊಂಡಿರುವ ಜಿಲ್ಲೆಯ ಒಟ್ಟು ವಿಸ್ತೀರ್ಣವು ೪೧೦೨ ಚ.ಕಿ.ಮೀಗಳಿದ್ದು ೧೬ ಹೋಬಳಿಗಳಾಗಿ ವಿಂಗಡಿಸಲಾಗಿದೆ. ಆಡಳಿತ ವಿಕೇಂದ್ರೀಕರಣವಾದ ಮೇಲೆ ೨೯೬ ಗ್ರಾಮ ಪಂಚಾಯಿತಿಗಳು ಅಸ್ತಿತ್ವಕ್ಕೆ ಬಂದಿವೆ. ಈ ಜಿಲ್ಲೆಯ ಎಲ್ಲಾ ಗ್ರಾಮಗಳು ಗ್ರಾಮ ಪಂಚಾಯಿತಿಗಳ ಆಡಳಿತಕ್ಕೆ ಒಳಪಟ್ಟಿವೆ. ಮೂರು ತಾಲೂಕು ಪಂಚಾಯ್ತಿ, ಒಂದು ನಗರ ಸಭೆ ಇದ್ದು ಜಿಲ್ಲೆಯ ಕೇಂದ್ರಸ್ಥಾನ ಮಡಿಕೇರಿಯಾಗಿದೆ.

**ಆ. ಜನಸಂಖ್ಯಾ ಲಕ್ಷಣಗಳು**

೨೦೦೧ರ ಜನಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೫,೪೮,೫೬೧ ಲಕ್ಷವಿದ್ದು ೨,೭೪,೮೩೧ ಪುರುಷರು, ೨,೭೭,೭೩೦ ಮಹಿಳೆಯರೂ ಸೇರಿದ್ದಾರೆ. ಜಿಲ್ಲೆಯ ಸಾಕ್ಷರತೆಯ ಪ್ರಮಾಣ ೭೮.೦% ರಷ್ಟಿದೆ. ಇದರಲ್ಲಿ ೮೩.೭% ಪುರುಷರು, ೭೨.೩೧% ರಷ್ಟು ಸ್ತ್ರೀಯರು ಸಾಕ್ಷರರಾಗಿರುತ್ತಾರೆ.

**ಇ. ಮುಖ್ಯ ಬೆಳೆಗಳು**

ವಾಣಿಜ್ಯ ಬೆಳೆಗಳಾಗಿ ಕಾಫಿ, ಏಲಕ್ಕಿ, ಶುಂಠಿ, ಕಾಳುಮೆಣಸು, ರಬ್ಬರ್, ಅಡಿಕೆ ಬೆಳೆಯುತ್ತಾರೆ. ಭತ್ತ ಕೊಡಗಿನ ಪ್ರಮುಖ ಆಹಾರ ಉತ್ಪನ್ನವಾಗಿದೆ. ಕಿತ್ತಳೆ, ಸಪೋಟ, ಜಂಬುನೇರಳೆ, ಬಾಳೆಹಣ್ಣು, ಕಾಡು ಮಾವು ಇಲ್ಲಿನ ಪ್ರಮುಖ ಫಲವೃಕ್ಷಗಳಾಗಿವೆ.

**ಈ. ಹವಾಗುಣ**

ಈ ಪ್ರದೇಶದಲ್ಲಿ ಬೇಸಿಗೆಯ ತಾಪ ಕಡಿಮೆ ಇದ್ದು ಮಳೆಯ ಪ್ರಮಾಣ ತುಂಬಾ ಹೆಚ್ಚಾಗಿ ಇದ್ದು, ಕರ್ನಾಟಕ ರಾಜ್ಯದಲ್ಲಿ ಅತಿ ಸುಂದರ ಜಿಲ್ಲೆ ಎನಿಸಿಕೊಂಡಿದೆ.

## ೧.೪ ಸಂಶೋಧನಾ ವಿಧಾನ

ಪ್ರಸ್ತುತ ಅಧ್ಯಯನಕ್ಕೆ ಸಾಂಸ್ಕೃತಿಕ ದೃಷ್ಟಿಕೋನವನ್ನು ಅಳವಡಿಸಿಕೊಳ್ಳಲಾಗಿದೆ. ಕ್ಷೇತ್ರ ಕಾರ್ಯಕ್ಕಾಗಿ ಸಂದರ್ಶನಾ ಕೈಪಿಡಿಯನ್ನು ರೂಪಿಸಿ ಜಾತ್ರೆಗಳಿಗೆ ನೇರ ಸಂಬಂಧ ಹೊಂದಿದ ಕೋಮುಗಳ ಜನ ಸಮುದಾಯಗಳಿಗೆ ವೈಯಕ್ತಿಕ ಭೇಟಿ, ಸಂದರ್ಶನ ಅವಲೋಕನ, ಪ್ರಶ್ನಾವಳಿ ವಿಧಾನಗಳ ಸಹಾಯದಿಂದ ಪ್ರಾಥಮಿಕ ಮಾಹಿತಿಯನ್ನು ಸಂಗ್ರಹಿಸಿ ವಿವಿಧ ದೃಷ್ಟಿಕೋನಗಳಿಂದ ಈ ವಿಷಯವನ್ನು ಅಧ್ಯಯನಕ್ಕೊಳಪಡಿಸಲಾಗಿದೆ.

**ಮಾದರಿ ಆಯ್ಕೆ**

ಸರಳ ಯಾದೃಚ್ಛಿ (Simple Random sampling) ಮಾದರಿಯನ್ನು ಅನುಸರಿಸಿ ಸೂಚನಾದಾರರಿಂದ ಸಂದರ್ಶನ ಕೈಪಿಡಿಯ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಕೊಡಗು ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಮೂರು ತಾಲೂಕುಗಳಲ್ಲಿ ಪ್ರಮುಖವಾಗಿ ಮಡಿಕೇರಿ , ವಿರಾಜಪೇಟೆ, ಹಾಗೂ ಸೋಮವಾರಪೇಟೆ ತಾಲೂಕುಗಳಲ್ಲಿ ಆಚರಣೆಯಲ್ಲಿರುವ ಪ್ರಮುಖ ಜಾತ್ರೆಗಳಲ್ಲಿ ಪ್ರತಿ ಜಾತ್ರೆಗಳಿಂದ ಸೂಚನಾದಾರರನ್ನು ಪ್ರಾತಿನಿಧಿಕವಾಗಿ ಈ ಸಂಶೋಧನಾ ಕಾರ್ಯಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ.

**ಮಾಹಿತಿ ಸಂಗ್ರಹಣ ವಿಧಾನ**

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರಮುಖವಾಗಿ ಎರಡು ರೀತಿಯ ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**ವಸ್ತುಮೂಲ ಮಾಹಿತಿ (Secondary data)**

ವ್ಯಕ್ತಿಮೂಲಗಳ ಸಹಾಯದಿಂದ ಅಷ್ಟೆ ಅಲ್ಲದೆ ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಯನ್ನು ವಸ್ತುಮೂಲ ಮಾಹಿತಿಯ ಮೂಲಗಳಾದ ಸರ್ಕಾರಿ ಇಲಾಖಾ ದಾಖಲಾತಿಗಳು, ಸಂಖ್ಯಾಶಾಸ್ತ್ರೀಯ ದಾಖಲೆಗಳು, ಸಮೀಕ್ಷಾ ವರದಿಗಳು, ವಿಶ್ವಕೋಶಗಳು, ಸಂಶೋಧನಾ ಲೇಖನಗಳು, ಗ್ರಂಥಗಳು, ಪತ್ರಿಕೆಗಳು, ಪುಸ್ತಕಗಳು, ಕಾಲೇಜಿನ ವಾರ್ಷಿಕ ಸಂಚಿಕೆಯ ಲೇಖನಗಳು ಮುಂತಾದುವುಗಳ ಸಹಾಯದಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**ಮಾಹಿತಿ ವಿಶ್ಲೇಷಣೆ**

ಪ್ರತಿ ಜಾತ್ರೆಯ ಸಂದರ್ಭದಲ್ಲಿ ಕೆಲವು ವಕ್ತೃಗಳನ್ನು ಸಂದರ್ಶಿಸಿ ಮಾಹಿತಿಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ಅಲ್ಲದೆ ವ್ಯಕ್ತಿಮೂಲ ಹಾಗೂ ವಸ್ತುಮೂಲ ಮಾಹಿತಿ ಮೂಲಗಳಿಂದ ಸಂಗ್ರಹಿಸಿದ ಸಂಶೋಧನಾ ಮಾಹಿತಿಯನ್ನು ಪರಿಷ್ಕರಿಸಿ, ವರ್ಗೀಕರಿಸಿ, ಅಗತ್ಯವಿರುವಷ್ಟು ಪಟ್ಟಿಗಳನ್ನು, ಬಳಸಿಕೊಂಡು ಸಂಶೋಧನಾ ಮಾಹಿತಿಯನ್ನು ಸಾಂಸ್ಕೃತಿಕ ಚೌಕಟ್ಟಿನಲ್ಲಿ ವಿಶ್ಲೇಷಿಸಿ ಸಂಶೋಧನಾ ಅಧ್ಯಯನ ವಸ್ತುವಿನ ಸಮಗ್ರ ಚಿತ್ರಣಕ್ಕೆ ಪ್ರಯತ್ನಿಸಲಾಗಿದೆ.

**ಅಧ್ಯಯನದ ಸ್ವರೂಪ**

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ ಮತ್ತು ಪ್ರಾಮುಖ್ಯತೆ, ಅಧ್ಯಯನದ ವ್ಯಾಪ್ತಿ, ಸಂಶೋಧನ ವಿಧಾನ, ಇದುವರೆಗೆ ನಡೆದ ಅಧ್ಯಯನಗಳ ಬಗ್ಗೆ ವಿವರಣೆಗಳನ್ನು ವಿಶ್ಲೇಷಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕೊಡಗು ಜಿಲ್ಲೆಯ ಸಾಂಸ್ಕೃತಿಕ ಹಿನ್ನೆಲೆ, ಪೌರಾಣಿಕ ಹಿನ್ನೆಲೆ, ಇತಿಹಾಸ ಪೂರ್ವ, ಇತಿಹಾಸಕಾಲ, ಜಾನಪದ ಉಲ್ಲೇಖಗಳು, ಕೊಡಗಿನ ಭಾಷೆ, ಕೊಡಗಿನ ಧಾರ್ಮಿಕ ಆಚರಣೆಗಳು, ಕೊಡಗಿನ ದೈವಗಳ ಬಗ್ಗೆ ವಿವರಿಸಿ ವಿಶ್ಲೇಷಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಜಾತ್ರೆಯ ಐತಿಹಾಸಿಕ ಹಿನ್ನೆಲೆ, ಸ್ವರೂಪ, ಹುಟ್ಟು ಮತ್ತು ಬೆಳವಣಿಗೆ, ಅರ್ಥ ಮತ್ತು ವ್ಯಾಖ್ಯೆ, ಜಾತ್ರೆ ಮತ್ತು ಹಬ್ಬ ಹಾಗೂ ಜಾತ್ರೆ ವಿವಿಧ ಹೆಸರುಗಳ ಬಗ್ಗೆ ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಕೊಡಗಿನ ಮಡಿಕೇರಿ, ವಿರಾಜಪೇಟೆ ಮತ್ತು ಸೋಮವಾರಪೇಟೆ ತಾಲ್ಲೂಕಿನ ಜಾತ್ರೆಗಳ ಬಗ್ಗೆ ವಿವರಿಸಿ ವಿಶ್ಲೇಷಿಸಲಾಗಿದೆ, ಕೊಡಗಿನ ಭೂತಾರಾಧನೆ, ಜಾತ್ರೆಗಳ ಸಾಂಸ್ಕೃತಿಕ ಸ್ಥಿತ್ಯಂತರ, ಕೊಡಗಿನ ಜಾತ್ರೆಗಳ ಸ್ವರೂಪ ಹಾಗೂ ಜಾತ್ರೆಗಳ ಕ್ಷೇತ್ರಾಧ್ಯಯನದ ಪ್ರಾಥಮಿಕ ಮಾಹಿತಿ ವಿಶ್ಲೇಷಣೆಯನ್ನು ಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ಮೋಜಿನ ಜಾತ್ರೆಗಳು, ವಸ್ತುಪ್ರದರ್ಶನದ ಜಾತ್ರೆಗಳು, ದನದ ಜಾತ್ರೆಗಳು, ದೇವ-ದೇವತೆಗಳ ಆರಾಧನಾ ಜಾತ್ರೆಗಳು, ಶಿಷ್ಟದೇವರ ಜಾತ್ರೆಗಳು, ಗ್ರಾಮೀಣ ದೇವರ ಜಾತ್ರೆತಗಳು, ಮುಸ್ಲಿಮರ ಉರುಸ್ ಜಾತ್ರೆಗಳ ಬಗ್ಗೆ ವಿವರಿಸಿ ವಿಶ್ಲೇಷಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಸಾಂಪ್ರದಾಯಿಕ ವಿಧಿ ಆಚರಣೆಗಳು, ಮತಾಚರಣೆಗಳು, ಸಂಘಟನಾ ಕಾರ್ಯ, ಸಮಷ್ಟಿಯ ಹಿತರಕ್ಷಣಾ ಪ್ರವೃತ್ತಿ, ಸಾಮಾಜಿಕ ಹೊಣೆಗಾರಿಕೆ, ನೈತಿಕ ಪ್ರಜ್ಞೆ ಮೂಡಿಸುವುದು, ಸಾಂಸ್ಕೃತಿಕತೆ, ಆರ್ಥಿಕತೆ, ರಾಜಕೀಯತೆ, ಮನರಂಜನೆ ಈ ವಿಚಾರಗಳ ಬಗ್ಗೆ ವಿವರಿಸಿ ವಿಶ್ಲೇಷಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಉಪಸಂಹಾರ, ಅಧ್ಯಯನದ ಫಲಿತಗಳು, ಅಧ್ಯಯನದ ಸಾಧ್ಯತೆಗಳು, ಸಲಹೆಗಳ ಬಗ್ಗೆ ವಿವರಿಸಲಾಗಿದೆ.

## ೧.೫ ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಭಾರತವು ವೈವಿಧ್ಯತೆಗಳ ನಾಡು. ಈ ಕಾರಣಕ್ಕಾಗಿ ಭಾರತದ ಮೊದಲ ಸಮಾಜಶಾಸ್ತ್ರಜ್ಞೆ ಇರಾವತಿ ಕರ್ವೆ ಅವರು 'ಭಾರತದ ಜಗತ್ತಿನ ಸೂಕ್ಷ್ಮರೂಪ' ಎಂದು ಹೇಳಿದ್ದಾರೆ. ವಿವಿಧ ಬಗೆಯ ಹೂವುಗಳು ಸೇರಿ ಒಂದು ಸುಂದರ ಹೂಮಾಲೆಯಾಗುವಂತೆ ವಿವಿಧ ಸಂಸ್ಕೃತಿಗಳಿಂದ ನವಭಾರತೀಯ ಸಮಾಜ ರೂಪುಗೊಂಡಿದೆ. ಸಮಾಜ ಜಡವಾದುದಲ್ಲ ಅದು ಚಲನಶೀಲವಾದುದು. ಇದಕ್ಕೆ ಪ್ರಮುಖ ಕಾರಣ ಸಂಸ್ಕೃತಿ. ಇದು ಗತಿಶೀಲವಾದುದು. ಇದರ ಒಂದು ಭಾಗವಾಗಿ ಜಾತ್ರೆಗಳು ಆಚರಣೆಯಲ್ಲಿವೆ. ನದಿಗಳು ಸಮುದ್ರದಲ್ಲಿ ಲೀನವಾಗುವಂತೆ ಜಾತ್ರೆಗಳು ಸಂಸ್ಕೃತಿಯ ಆಚರಣೆಯಲ್ಲಿ ಐಕ್ಯಗೊಂಡಿವೆ. ಜಾತ್ರೆ ಮತ್ತು ಸಂಸ್ಕೃತಿಯ ಸಂಬಂಧ ಹಾಲು ಮತ್ತು ಸಕ್ಕರೆಯ ಸಂಬಂಧದಂತೆ.

ಭಾರತೀಯ ಸಮಾಜವು ಗ್ರಾಮಗಳಿಂದ ರೂಪಗೊಂಡಿದೆ. ಪ್ರತಿ ಗ್ರಾಮೀಣ ಸಮುದಾಯಗಳು ತನ್ನದೇ ಆದ ಸಂಸ್ಕೃತಿಯನ್ನು ಒಳಗೊಂಡು ವೈವಿಧ್ಯಮಯವಾಗಿವೆ. ಸಂಸ್ಕೃತಿಗಳು ಭಿನ್ನವಾಗಿದ್ದರೂ ಇವುಗಳ ಉದ್ದೇಶ ಒಂದೇ ಆಗಿರುತ್ತದೆ. ಅದೇ ಸಾರ್ಥಕ ಜೀವನ. ಸಂಸ್ಕೃತಿಯ ಸಾರ್ಥಕ ಜೀವನದ ಸಾಧನಗಳಾಗಿ ನಂಬಿಕೆ, ಆಚರಣೆ, ಉತ್ಸವ, ಜಾತ್ರೆಗಳು ಕಾರ್ಯನಿರ್ವಹಿಸುತ್ತಿವೆ. ಇವುಗಳು ಮತಕೇಂದ್ರಿತವಾಗಿವೆ. ಮತಗಳೆಂದರೆ ಜೀವನ ವಿಧಾನ. ಜೀವನ ಎಂದರೇನು? ಎಂಬ ಪ್ರಶ್ನೆಗೆ ಮತಾಚರಣೆಯ ಹಿನ್ನೆಲೆಯಲ್ಲಿ ಉತ್ತರ ಹುಡುಕಲು ಹೊರಟಾಗ ಸಿಗುವ ಸಾಹಿತ್ಯ ಆಧಾರಗಳು ಸಮೀಕ್ಷೆಯ ದೃಷ್ಟಿಯಿಂದ ವಿರಳವೆಂದೇ ಹೇಳುತ್ತೇವೆ. ಏಕೆಂದರೆ ಜೀವನದ ನಂಬಿಕೆಯೇ ಒಂದು ವಿಸ್ಮಯ ಮತ್ತು ನಿಗೂಢ. ಜೀವನದ ಭಾಗಗಳಾಗಿರುವ ಸಂಪ್ರದಾಯ, ರೀತಿ–ನೀತಿ, ಆಚಾರ–ವಿಚಾರ, ವಿಧಿ– ವಿಧಾನಗಳು, ಆಚರಣೆಗಳು, ಹಬ್ಬ, ಉತ್ಸವ, ಜಾತ್ರೆ ಇತ್ಯಾದಿ ಸಾಮಾಜಿಕ ಸಂಕೀರ್ಣತೆಗಳ ಬೆನ್ನು ಹತ್ತಿ ಉತ್ತರ ಹುಡುಕಲು ಹೊರಟಾಗ ಸಿಗುವ ಉತ್ತರ ಪ್ರಶ್ನೆಯೆ. ಈ ವಿಷಯ ಕುರಿತು ನಡೆದಿರುವ ಅಧ್ಯಯನಗಳು ಶೇಕಡ ಇಪ್ಪತ್ತು ಉಳಿದಿರುವುದು ಎಪ್ಪತ್ತರಷ್ಟು ಉಳಿದ ಹತ್ತರಷ್ಟು ಅನುಭವಾತೀತ. ವಾಸ್ತವ ಹೀಗಿದ್ದರೂ ಅಧ್ಯಯನ ಕೈಗೊಳ್ಳಲು ಮುಂದಾದಾಗ ಈ ವಿಷಯವನ್ನು ಕುರಿತು ನಡೆದಿರುವ ಕೆಲವು ಅಧ್ಯಯನಗಳನ್ನು ಪರಾಮರ್ಶಿಸುವುದು ಸೂಕ್ತವೆನಿಸುತ್ತದೆ.

- ಸಿದ್ದಲಿಂಗಯ್ಯ ಅವರ 'ಗ್ರಾಮದೇವತೆಗಳು' ಎಂಬ ಪಿಎಚ್.ಡಿ ಮಹಾಪ್ರಬಂಧ. ಪ್ರಸ್ತುತ ಜಾತ್ರೆಗಳನ್ನು ಕುರಿತಾಗಿ ಸಂಶೋಧನೆಯಲ್ಲಿ ತೊಡಗುವವರಿಗೆ ದಾರಿದೀಪವಾಗಿದೆ. ಈ ಮಹಾಪ್ರಬಂಧವು ೧೨ ಅಧ್ಯಾಯಗಳನ್ನು ಒಳಗೊಂಡಿದೆ. ಶಿಷ್ಟದೇವರ ಜಾತ್ರೆಗಳು ಮತ್ತು ಗ್ರಾಮ ದೇವರ ಜಾತ್ರೆಗಳ ನಡುವಿನ ವಿಶಿಷ್ಟ ವಿಧಿ ಆಚರಣೆಗಳನ್ನು ಸ್ಪಷ್ಟವಾಗಿ ನಿರೂಪಿಸಿದೆ. ಅಲ್ಲದೆ ಗ್ರಾಮೀಣ ಜಾತ್ರೆಗಳ ಆಚರಣೆಗಳ ಹಿಂದಿರುವ ನಂಬಿಕೆ, ಸಂಪ್ರದಾಯ, ರೂಢಿ, ಪದ್ಧತಿ, ಆಚಾರ, ವಿಚಾರ, ರೀತಿ ನೀತಿಗಳನ್ನು ವೈಚಾರಿಕ ನೆಲೆಯಲ್ಲಿ ಅಧ್ಯಯನ ಮಾಡುವ ಮೂಲಕ ಇವುಗಳನ್ನು ಕುರುಡು, ಅವೈಜ್ಞಾನಿಕ, ಕಂದಾಚಾರ ಪದ್ಧತಿಗಳು ಎಂದು ಹೇಳುವವರಿಗೆ ದಿಟ್ಟ ಉತ್ತರ ನೀಡಿರುವುದು ಈ ಸಂಶೋಧನೆಯ ವಿಶೇಷತೆ.

- ಚೆನ್ನಣ್ಣ ವಾಲೀಕಾರ ಅವರ 'ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ' ಎಂಬ ಪಿಎಚ್.ಡಿ ಮಹಾಪ್ರಬಂಧ ೧೯೯೮ರಲ್ಲಿ ಪ್ರಕಟಗೊಂಡಿತು. ಈ ಕೃತಿಯ ಹದಿನೈದು ಅಧ್ಯಾಯಗಳನ್ನು ಒಳಗೊಂಡಿದೆ. ಇದು ಸ್ತ್ರೀಪ್ರಾಧಾನ್ಯತೆಯ ಹಿನ್ನೆಲೆಯೊಂದಿದೆ. ಕರ್ನಾಟಕ ಮತ್ತು ಹೈದರಾಬಾದ್ ಪ್ರಾಂತ್ಯಗಳ ಗ್ರಾಮದೇವತೆಗಳ ಆಚರಣೆಯ ವಿಧಿವಿಧಾನಗಳನ್ನು ಪ್ರದರ್ಶನ ಸಿದ್ಧಾಂತದ ಹಿನ್ನೆಲೆಯಲ್ಲಿ ಸಾದರಪಡಿಸುತ್ತದೆ. ಭಿನ್ನಪ್ರಾಂತ್ಯ, ಭಿನ್ನಭಾಷೆಗಳ, ವಿಭಿನ್ನ ಜೀವನಾದರ್ಶಗಳ ಸಾಂಸ್ಕೃತಿಕ ಅಂಶಗಳನ್ನು ಒಂದೇ ನೆಲೆಗಟ್ಟಿನಲ್ಲಿ ತೌಲನಿಕ ಅಧ್ಯಯನ ಈ ಕೃತಿಯಿಂದ ಸಕಾರಗೊಂಡಿದೆ.

- ಎಂ.ಎನ್.ವೆಂಕಟೇಶ್ ಅವರು 'ಮೈಲಾರದ ಜಾತ್ರೆ ಪ್ರದರ್ಶನ ಅಧ್ಯಯನ' ಎಂಬ

ಸಂಶೋಧನಾ ಕೃತಿಯನ್ನು ೧೯೯೮ರಲ್ಲಿ ಪ್ರಕಟಿಸಿದ್ದಾರೆ. ಈ ಕೃತಿಯು ಮೈಲಾರದ ಜಾತ್ರೆಯ ವೈಶಿಷ್ಟ್ಯ ಮತ್ತು ಜಾತ್ರೆಯು ಸಮುದಾಯದ ಜನರ ಅವಶ್ಯಕತೆಗಳನ್ನು ಪೂರೈಸುವ ರೀತಿಯನ್ನು ಯಥಾವತ್ತಾಗಿ ಚಿತ್ರಿಸಿದ್ದಾರೆ. 'ಜಾತ್ರೆಯನ್ನು ವಿವಿಧ ಆಯಾಮಗಳಿಂದ ಅಧ್ಯಯನಕ್ಕೆ ಒಳಪಡಿಸಿರುವ ಈ ಸಂಶೋಧನ ಕೃತಿಯು ಈ ಕುರಿತು ಅಧ್ಯಯನ ಕೈಗೊಳ್ಳಲು ಇಚ್ಚಿಸುವ ಸಂಶೋಧಕರಿಗೆ ಉಪಯುಕ್ತ ಮಾರ್ಗದರ್ಶನ ನೀಡುತ್ತದೆ.

- ಗೋವಿಂದರೆಡ್ಡಿಯವರು 'ಕೋಲಾರ ಜಿಲ್ಲೆಯ ಜಾತ್ರೆಗಳು–ಒಂದು ಅಧ್ಯಯನ' ಎಂಬ ಸಂಶೋಧನಾ ಮಹಾಪ್ರಬಂಧಕ್ಕೆ ಮೈಸೂರು ವಿಶ್ವವಿದ್ಯಾನಿಲಯದಿಂದ ಪಿಎಚ್.ಡಿ ಪದವಿಯನ್ನು ೨೦೦೪ರಲ್ಲಿ ಪಡೆದಿರುತ್ತಾರೆ. ಈ ಕೃತಿಯಲ್ಲಿ ಜಾತ್ರೆಗಳ ವೈವಿಧ್ಯತೆ ಮತ್ತು ಜಾತ್ರೆಗಳ ವಿವಿಧ ಆಯಾಮಗಳನ್ನು ದಾಖಲಿಸಿದ್ದಾರೆ. ಅಲ್ಲದೆ ಜಾತ್ರೆಗಳನ್ನು ಪ್ರಧಾನವಾಗಿ ಐದು ವರ್ಗಗಳಾಗಿ ವಿಭಾಗಿಸಿ ಸ್ಪಷ್ಟ ವಿವರಣೆಯನ್ನು ನೀಡಿದ್ದಾರೆ. ಜಾತ್ರೆಗಳ ಮೇಲೆ ಮತ, ಸಮಾಜ, ಕಲೆ, ಸಾಹಿತ್ಯ, ನಂಬಿಕೆ ಮತ್ತು ಆಧುನಿಕತೆಗಳ ಸಕಾರಾತ್ಮಕ ಮತ್ತು ನಕಾರಾತ್ಮಕ ಪ್ರಭಾವಗಳನ್ನು ವಿಶ್ಲೇಷಿಸಿದ್ದಾರೆ.

- ಜಗನ್ನಾಥ ಹೆಬ್ಬಾಳೆ 'ಹೈದರಾಬಾದ್ ಕರ್ನಾಟಕದ ಜಾತ್ರೆಗಳು–ಒಂದು ಸಾಂಸ್ಕೃತಿಕ ಅಧ್ಯಯನ' ಇದು ಒಟ್ಟು ೭ ಅಧ್ಯಾಯಗಳನ್ನು ಒಳಗೊಂಡಿದೆ. ಈ ಕೃತಿಯಲ್ಲಿ ತನ್ನ ಉದ್ದೇಶ ವ್ಯಾಪ್ತಿಗೆ ಸಂಬಂಧಪಟ್ಟಂತೆ ಮಹತ್ವದ ಮಾಹಿತಿಗಳನ್ನು ಕಲೆಹಾಕಿದ್ದು, ಮೌಲ್ಯನಿಷ್ಠವಾಗಿ ವಿಶ್ಲೇಷಿಸಿ ವಿಮರ್ಶಿಸಲಾಗಿದೆ. ಜಾತ್ರೆಗಳ ಉಗಮ ಮತ್ತು ವಿಕಾಸಕ್ಕೆ ಸಂಬಂಧಿಸಿದಂತೆ ಮಹತ್ವದ ಮಾಹಿತಿಗಳನ್ನು ಒಳಗೊಂಡ ಕೃತಿಗಳಲ್ಲಿ ಒಂದಾಗಿದೆ. ಅಗತ್ಯಕ್ಕೆ ತಕ್ಕಂತೆ ಜಾತ್ರೆಗಳನ್ನು ವರ್ಗೀಕರಿಸಲಾಗಿದೆ. ಆಂಧ್ರ ಮತ್ತು ಕರ್ನಾಟಕದ ವಿಭಿನ್ನ ಸಂಸ್ಕೃತಿಗಳನ್ನು ಜಾತ್ರೆಗಳ ಹಿನ್ನೆಲೆಯಲ್ಲಿ ತೌಲನಿಕವಾಗಿ ಅಧ್ಯಯನ ಮಾಡಿರುವುದು ವಿಶೇಷ.

- ಅಶೋಕ್ ಕುಮಾರ್ ಸಂಗೇನಹಳ್ಳೀ ರವರ 'ಜಗಳೂರು ತಾಲ್ಲೂಕಿನ ಜಾತ್ರೆಗಳು' ಪಿಎಚ್.ಡಿ ಮಹಾಪ್ರಬಂಧ ಕುವೆಂಪು ವಿಶ್ವವಿದ್ಯಾನಿಲಯ ೨೦೧೦. ಈ ಮಹಾಪ್ರಬಂಧದಲ್ಲಿ ಕರ್ನಾಟಕದಲ್ಲಿ ೧೫೦೦ಕ್ಕೂ ಹೆಚ್ಚು ಜಾತ್ರೆಗಳು ವರ್ಷವೊಂದರಲ್ಲಿ ಆಚರಿಸಲ್ಪಡುತ್ತದೆ ಎಂದು ತಿಳಿಸಿದ್ದು, ಅಧ್ಯಯನಕ್ಷೇತ್ರದ ಜನಸಾಮಾನ್ಯರ ನುಡಿಗಟ್ಟುಗಳನ್ನು ಅವಶ್ಯಕತೆಗೆ ತಕ್ಕಂತೆ ಬಳಸಿ ಜಾತ್ರೆಯ ಸನ್ನಿವೇಶವನ್ನು ವಿವರಿಸಲಾಗಿದೆ. ಜಾತ್ರೆಗಳು ಸಮಾಜ, ದೇವರು, ರಾಸು ವಸ್ತುಪ್ರದರ್ಶನ, ವಿರೋಧಾಭಾಸಗಳೊಂದಿಗಿನ ಸಂಕೀರ್ಣ ಸಂಬಂಧಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ಅಲ್ಲದೇ ಆಧುನಿಕತೆಯ ಭರಾಟೆಯು ಜಾತ್ರೆಯ ಮೇಲೆ ತನ್ನ ಅಧಿಪತ್ಯವನ್ನು ಸಾಧಿಸುವಲ್ಲಿ ಸಫಲವಾಗಿದೆ ಎಂಬುದರ ನೈಜ ವಿವರಣೆಯನ್ನು ಮಹಾ ಪ್ರಬಂಧವು ಒಳಗೊಂಡಿದ್ದು, ಜಗಳೂರು ತಾಲ್ಲೂಕಿನ ಜಾತ್ರೆಗಳ ವಿಶೇಷವಾದ ವಿವರಣೆಯನ್ನು ನೀಡಲಾಗಿದೆ.

• ಹಂಪನಾಗರಾಜಯ್ಯ ಅವರು ೧೯೮೫ರಲ್ಲಿ ಪ್ರಕಟಿಸಿದ 'ಕರ್ನಾಟಕದ ಜಾತ್ರೆಗಳು' ಎಂಬ ಹೊತ್ತಗೆಯು ಜಾತ್ರೆಯ ಕುರಿತಾಗಿ ಮಹತ್ವದ ಮಾಹಿತಿಯನ್ನು ಒಳಗೊಂಡಿದೆ. ಜಾತ್ರೆಯ ಆಚರಣೆ ಕುರಿತಾದ ಜನರ ಒಲವು, ಜಾತ್ರೆ ಪದದ ನಿಷ್ಪತ್ತಿ, ಜಾತ್ರೆಯನ್ನು ಕುರಿತಂತೆ ವಿದ್ವಾಂಸರು ನೀಡಿದ ಅಭಿಪ್ರಾಯಗಳು, ಸಮುದಾಯವೊಂದರಲ್ಲಿ ಜಾತ್ರೆಯನ್ನು ಕುರಿತು ಜನಸಾಮಾನ್ಯರ ನಂಬಿಕೆಗೆ ಅನುಗುಣವಾದ ಸಾಮಾಜಿಕ ಮಹತ್ವದ ಮಾಹಿತಿಗಳ ಬಗ್ಗೆ ವಿವರಣೆಯನ್ನು ನೀಡಿದ್ದಾರೆ.

•ದಾಸೇಗೌಡ ಅವರು 'ಕೊಪ್ಪಳ ಜಿಲ್ಲೆಯ ಜಾತ್ರೆಗಳು' ಎಂಬ ಕೃತಿಯನ್ನು ೧೯೮೫ರಲ್ಲಿ ಹೊರತಂದಿದ್ದಾರೆ. ಇವರು ಕೊಪ್ಪಳ ಜಿಲ್ಲೆಯಾದ್ಯಂತ ಜನಮನ್ನಣೆಯ ಪ್ರೀತಿ, ಗೌರವಕ್ಕೆ ಪಾತ್ರವಾಗಿರುವ ಪ್ರಮುಖ ದೇವರುಗಳ ಕುರಿತಾಗಿ ಮಾಹಿತಿ ನೀಡಿದ್ದಾರೆ. ದೇವರು ಮತ್ತು ಜನಸಮುದಾಯದ ನಡುವಿನ ಸಂಬಂಧವನ್ನು ವಿವಿಧ ಆಯಾಮಗಳಲ್ಲಿ ಪ್ರಸ್ತುತಪಡಿಸಿದ್ದಾರೆ. ಪರಂಪರಾನುಗತವಾಗಿ ಸಾಗಿಬಂದ ಸಂಪ್ರದಾಯಗಳು ಹೇಗೆ ದೈವಿಕ ಆಚರಣೆಗಳೊಂದಿಗೆ ಸಮುದಾಯಗಳನ್ನು ಒಂದುಗೂಡಿಸುತ್ತವೆ, ತಪ್ಪು ನಡೆದಲ್ಲಿ ಜನರು ಎಂತಹ ಗಂಡಾಂತರಗಳನ್ನು ಎದುರಿಸಬೇಕಾಗುತ್ತದೆ ಎಂಬುದನ್ನು ತಿಳಿಸಿದ್ದಾರೆ. ಅಲ್ಲದೆ ಸಂಪ್ರದಾಯದಂತೆ ನಡೆಯುವ ಜಾತ್ರೆಯ ವಿಶಿಷ್ಟ ಆಚರಣೆಗಳನ್ನು ಅಲ್ಲಿನ ಸಾಮಾಜಿಕ ವ್ಯವಸ್ಥೆಯ ಹಿನ್ನೆಲೆಯಲ್ಲಿ ಖಚಿತಪಡಿಸಿದ್ದಾರೆ. ಕೊಪ್ಪಳ ಜಿಲ್ಲೆಯ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಅಂಶಗಳನ್ನು ತಿಳಿಯಲು ಇದು ಸಹಾಯಕವಾಗುತ್ತದೆ.

• ಸಿ.ಎಸ್.ಶಿವಕುಮಾರಸ್ವಾಮಿ ಅವರು 'ಕರ್ನಾಟಕದ ಜಾತ್ರೆಗಳು' ಎಂಬ ಕೃತಿಯನ್ನು ಸಂಪಾದಿಸಿದ್ದಾರೆ. ಇದು ಕರ್ನಾಟಕದ ಜಾತ್ರೆಗಳ ಕುರಿತಾದ ಮಹತ್ವದ ಮಾಹಿತಿಯನ್ನೊಳಗೊಂಡ ಕೃತಿಯಾಗಿದೆ. ವಿಚಾರ ಸಂಕೀರ್ಣದಲ್ಲಿ ನಡೆದ ಚರ್ಚೆ ಮತ್ತು ಸಂವಾದಗಳನ್ನು ಸಂಗ್ರಹಿಸಿ 'ಕರ್ನಾಟಕ ಜಾತ್ರೆಗಳು' ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ.

•ಎಂ.ಎಸ್.ನರಸಿಂಹಮೂರ್ತಿರವರ 'ಮಧುಗಿರಿಯ ದಂಡಿನಮಾರಮ್ಮ' ಎಂಬ ಕೃತಿಯಲ್ಲಿ ಮಾನವ ಸಮೂಹ-ಜಾತ್ರೆ ಮತ್ತು ಸಾಮಾಜಿಕ ವ್ಯವಸ್ಥೆ ಸಮಾಜ-ಜಾತ್ರೆ ಮತ್ತು ನಂಬಿಕೆಗಳಿಗೆ ಇರುವ ಸಂಬಂಧವನ್ನು ಮನಃಶಾಸ್ತ್ರ ಮತ್ತು ಮಾನವಶಾಸ್ತ್ರದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ.

•ಜಾತ್ರೆಗಳು ಸಾಮಾಜಿಕ ಅಭಿವೃದ್ಧಿಯ ಸಂಸ್ಕೃತಿ ಸೂಚಕಗಳು ಮಾತ್ರವಲ್ಲ ಅಭಿವೃದ್ಧಿಯ ಜೊತೆಗೆ ವ್ಯಕ್ತಿಯ ವ್ಯಕ್ತಿತ್ವ ಅಧಃಪತನದ ವೇದಿಕೆಗಳೂ ಕೂಡ. ಜಾತ್ರೆಯ ಸಮಯದಲ್ಲಿ ಸಮುದಾಯದ ಜನರಲ್ಲಿ ಮನೆಮಾಡಿರುವ ಭಯ, ಭಕ್ತಿಯ ಜೊತೆಗೆ ಅಜ್ಞಾನ, ಅಂಧಕಾರ, ಅನಿಷ್ಟ ಪದ್ಧತಿಗಳನ್ನು ಗುರುತಿಸಬಹುದು ಎಂಬುದನ್ನು ಎಚ್.ಎಸ್.ಮೋಹನ್ ಮತ್ತು ಬಳ್ಳೆಕೆರೆ ಹನುಮಂತಪ್ಪ ಅವರು 'ಚಂದ್ರಗುತ್ತಿಜಾತ್ರೆ' ಎಂಬ ತಮ್ಮ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಸಾಮಾಜಿಕ ಆಚರಣೆಗಳು ಸೌಮ್ಯಮುಖವನ್ನಷ್ಟೇ ಅಲ್ಲದೆ ಮತ್ತೊಂದು ಮುಖವನ್ನು ಒಳಗೊಂಡಿದೆ. ಅದರಂತೆ ಕ್ರೌರ್ಯದ ಅಮಾನವೀಯ ಆಚರಣೆಯಾದ ಬೆತ್ತಲೆ ಸೇವೆ ಮತ್ತು ಇಂತಹದೇ ಅನೇಕ ಅನಿಷ್ಟ ಪದ್ಧತಿಗಳನ್ನು

ಜಾತ್ರೆ ಸಮಯದಲ್ಲಿ ಅನುಸರಿಸಿಕೊಂಡು ಬಂದಿದ್ದು ಇದರ ಕಾರಣ, ಪರಿಣಾಮ ಮತ್ತು ಆ ವ್ಯಕ್ತಿಗಳ ಸಾಮಾಜಿಕ ಸ್ಥಾನಮಾನಗಳನ್ನು ಕುರಿತಾದ ವಿಶ್ಲೇಷಣೆಯನ್ನು 'ಚಂದ್ರಗುತ್ತಿಜಾತ್ರೆ' ಎಂಬ ಕೃತಿಯಲ್ಲಿ ವಿವರಿಸಿದ್ದಾರೆ.

•ಎಸ್.ಎಸ್.ಹಿರೇಮಠ ಅವರು ೧೯೯೩ರಲ್ಲಿ ಪ್ರಕಟಪಡಿಸಿದ ತಮ್ಮ ಗ್ರಂಥವಾದ 'ಜಾತ್ರೆಗಳು' ಭಾಗ-೨ರಲ್ಲಿ ಜಾತ್ರೆಗಳ ಹಿಂದಿರುವ ಸಾಮಾಜಿಕ ಉದ್ದೇಶವನ್ನು ತಿಳಿಯಲು ಪ್ರಯತ್ನಿಸಿದ್ದಾರೆ. ಈ ಕೃತಿಯು ದೇವರ ಆಚರಣೆಯ ಪ್ರಯುಕ್ತ ಪ್ರತಿ ಸಮುದಾಯದಲ್ಲಿ ಆಚರಣೆಯಲ್ಲಿರುವ ಹಬ್ಬ ಮತ್ತು ಜಾತ್ರೆಗಳ ಕುರಿತಾಗಿ ಉಪಯುಕ್ತ ಮಾಹಿತಿಯನ್ನು ಒಳಗೊಂಡಿದೆ. ಸಾಮಾಜಿಕ ವ್ಯವಸ್ಥೆಯ ಸ್ವರೂಪವನ್ನಾಧರಿಸಿ ಜಾತ್ರೆಗಳ ಸ್ವರೂಪದಲ್ಲಿನ ಸಂಕೀರ್ಣ ವ್ಯತ್ಯಾಸವನ್ನು ಎಳೆ ಎಳೆಯಾಗಿ ಬಿಡಿಸಿ ಚಿತ್ರಿಸಿರುವುದು ಈ ಕೃತಿಯ ವಿಶೇಷ. ಗ್ರಾಮೀಣ ಪ್ರದೇಶದ ಸಾಂಸ್ಕೃತಿಕ ಮತ್ತು ಧಾರ್ಮಿಕ ನಂಬಿಕೆಯ ಹಿನ್ನೆಲೆಯಲ್ಲಿ ಅನೇಕ ಹಬ್ಬ ಮತ್ತು ಜಾತ್ರೆಗಳನ್ನು ಪ್ರತ್ಯೇಕವಾಗಿ ಅವಲೋಕಿಸಿ, ತೌಲನಿಕ ಅಧ್ಯಯನಕ್ಕೆ ಒಳಪಡಿಸಿ, ಜಾತ್ರೆಗಳ ಸ್ವರೂಪವನ್ನು ಸ್ಪಷ್ಟವಾಗಿ ದಾಖಲಿಸಿವೆ.

• ಜಿ.ವಿ. ದಾಸೇಗೌಡ ಅವರ 'ಮಂಡ್ಯ ಜಿಲ್ಲೆಯ ಜಾತ್ರೆಗಳು' ಎಂಬ ಕೃತಿಯು ಮಂಡ್ಯ ಜಿಲ್ಲೆಯ ಜನರು ಆಚರಿಸುವ ಜಾತ್ರೆಗಳ ಹಿಂದಿರುವ ಜೀವಪರ ಮತ್ತು ಮಾನವಪರ ಧೋರಣೆಯನ್ನು ಎತ್ತಿಹಿಡಿದು ಅಲ್ಲಿನ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಪ್ರತಿಬಿಂಬಿಸುವಂತಿದೆ. ಈ ಕಾರಣಕ್ಕಾಗಿಯೇ ಈ ಕೃತಿಯು ೨೦೦೦ರಲ್ಲಿ ಗ್ರಾಮ ಸಂಸ್ಕೃತಿ ಮಾಲೆ-೦೬ ರಲ್ಲಿ ಪ್ರಕಟಣೆಗೊಂಡಿದೆ.

• ಚಿಕ್ಕಣ್ಣ ಯಣ್ಣೆಕಟ್ಟೆ ಅವರ 'ತುಮಕೂರು ಜಿಲ್ಲೆಯ ಜಾತ್ರೆಗಳು' ಎಂಬ ಕೃತಿಯು ೨೦೦೩ರಲ್ಲಿ ಪ್ರಕಟವಾಯಿತು. ಜಾತ್ರೆಗಳ ವಿವಿಧ ಮತ್ತು ವಿಶಿಷ್ಟ ಸಂಪ್ರದಾಯಿಕ ನಡಾವಳಿಗಳ ಚಿತ್ರಣ ಈ ಕೃತಿಯಲ್ಲಿ ದಟ್ಟವಾಗಿ ಮೇಳೈಸಿದೆ. ಜನರ ಮನಸ್ಸಿನ ಆಳಕ್ಕಿಳಿದು ಅವರ ಆಚರಣೆಯ ಹಿಂದಿರುವ ನಂಬಿಕೆಗಳನ್ನು ಯಥಾವತ್ತಾಗಿ ಚಿತ್ರಿಸುವಲ್ಲಿ ಈ ಕೃತಿಯ ರಚನಾಕಾರರು ಸಫಲರಾಗಿದ್ದಾರೆ. ಅಲ್ಲದೆ ಜೀವನ ಸಂಸ್ಕೃತಿಯ ಆಚರಣೆಯನ್ನು ಸುತ್ತುವರೆದಿರುವ ಇತರೆ ಕ್ಷೇತ್ರಗಳ ಸಂಬಂಧವನ್ನು ಸಂದರ್ಭಾನುಸಾರ ವ್ಯವಸ್ಥಿತವಾಗಿ ದಾಖಲಿಸಿರುವ ಇವರು ಸಂಸ್ಕೃತಿಯ ಬಹು ಮಹತ್ವದ ಆದರ್ಶಗಳನ್ನು ಎತ್ತಿ ಹಿಡಿದಿದ್ದಾರೆ.

## ಅಡಿ ಟಿಪ್ಪಣಿ

೧. ಪ್ರಜಾವಾಣಿ ದಿನಪತ್ರಿಕೆ- ಸಾಪ್ತಾಹಿಕ ಪುರವಣಿ – ೨೭-೦೯-೨೦೦೯ ಪುಟ -೧

೨. ಪ್ರಜಾವಾಣಿ ದಿನಪತ್ರಿಕೆ - ಸಾಪ್ತಾಹಿಕ ಪುರವಣಿ ೨-*೦೯-೨೦೦೯ ಪುಟ -೧

## ಅಧ್ಯಾಯ-೨
# ಕೊಡಗು ಜಿಲ್ಲೆಯ ಭೌಗೋಳಿಕ ಹಿನ್ನೆಲೆ

೨.೧ ಸಾಂಸ್ಕೃತಿಕ ಹಿನ್ನೆಲೆ

೨.೨ ಪೌರಾಣಿಕ ಹಿನ್ನೆಲೆ

೨.೩ ಇತಿಹಾಸ ಪೂರ್ವಕಾಲ

೨.೪ ಇತಿಹಾಸ ಕಾಲ

೨.೫ ಜಾನಪದ ಉಲ್ಲೇಖಗಳು

೨.೬ ಕೊಡಗಿನ ಭಾಷೆ

೨.೭ ಕೊಡಗಿನ ಧಾರ್ಮಿಕ ಆಚಾರ ವಿಚಾರಗಳು

೨.೮ ಕೊಡಗಿನ ದೈವಗಳು

ಅಧ್ಯಾಯ-೨

# ಕೊಡಗಿನ ಭೌಗೋಳಿಕ ಹಿನ್ನೆಲೆ

## ೨.೧ ಸಾಂಸ್ಕೃತಿಕ ಹಿನ್ನೆಲೆ:

ಕರ್ನಾಟಕದ ಭೌಗೋಳಿಕ ವ್ಯಾಪ್ತಿಯೊಳಗೆ ಕೊಡಗು ಬಹಳ ಕಿರಿದಾಗಿದ್ದರೂ ತನ್ನದೇ ಆದ ಹಲವಾರು ವಿಶಿಷ್ಟತೆಗಳನ್ನು ಹೊಂದಿದೆ. ಕನ್ನಡ, ಮಲಯಾಳ, ತುಳು ಪ್ರದೇಶಗಳಿಂದ ಸುತ್ತುವರಿದಿದೆ. ಕರ್ನಾಟಕದಲ್ಲೇ ಅತಿ ಕಡಿಮೆ ಜನಸಂಖ್ಯೆ ಹೊಂದಿರುವ ಈ ಜಿಲ್ಲೆಯ ಶೇಕಡ ೪೫ ರಷ್ಟು ಭಾಗ ಅರಣ್ಯವೇ ಆಗಿದೆ. ಪಶ್ಚಿಮ ಘಟ್ಟಗಳ ಸಾಲಿಗೆ ಸೇರಿದ ಈ ಜಿಲ್ಲೆ ಮನಮೋಹಕ ಗಿರಿಧಾಮಗಳು, ಝರಿ-ಜಲಪಾತಗಳು, ನದಿಗಳು, ಸದಾ ಹಸಿರು ಮೊಗೆಯುವ ಕಾಡುಗಳು, ಅಪೂರ್ವ ಪ್ರಾಣಿಪಕ್ಷಿಗಳಲ್ಲದೆ ಆಹ್ಲಾದಕರ ಹವಾಗುಣವನ್ನು ಹೊಂದಿದೆ.

ಕೊಡಗಿನ ಜೀವದ್ರವ್ಯವೆನಿಸಿಕೊಂಡಿರುವ 'ಕಾವೇರಿ' ನದಿ ಸಂಬಂಧಿಯಾಗಿ ಪುರಾಣಕಥೆ, ಐತಿಹ್ಯ, ಜಾತ್ರೆಗಳು, ಸಾಹಿತ್ಯ, ಅಣೆಕಟ್ಟು ಜಲಪಾತಗಳನ್ನು ಕಾಣಬಹುದಾಗಿದೆ. ಹಾರಂಗಿ, ಲಕ್ಷ್ಮಣತೀರ್ಥ, ಬರಪೊಳೆ, ನೊಜೆಕಲ್ಲುಹೊಳೆ, ಕುಮಾರಧಾರ ಮೊದಲಾದವುಗಳು ಕೊಡಗಿನ ಪ್ರಮುಖ ನದಿಗಳಾಗಿವೆ. ನದೀ ತೀರಗಳಲ್ಲಿ, ಬೆಟ್ಟಗುಡ್ಡಗಳಲ್ಲಿ ಈಗಲೂ ಕಂಡುಬರುವ ದಟ್ಟ ಅರಣ್ಯ ಭಾಗಗಳಿಗೆ ಕಾರಣ ಕೊಡಗಿನ ಸಂಸ್ಕೃತಿಯಲ್ಲಿರುವ ಅರಣದ್ಯ ರಕ್ಷಣಾ ವಿಚಾರ. ಪ್ರತಿಯೊಂದು ಊರಿನಲ್ಲೂ 'ದೇವರ ಕಾಡು' ಎಂಬ ಹೆಸರಿನಲ್ಲಿ ಕಾಡುಗಳನ್ನು ರಕ್ಷಿಸಲಾಗುತ್ತದೆ.

ಕೊಡವರ 'ದೇಶಕಟ್ಪಾಟ್' (ದೇಶಕಟ್ಟುವ ಹಾಡು)ನಲ್ಲಿ ಈ ಕುರಿತಾದ ವಿವರಗಳಿವೆ

"ಪೊಮ್ಮಾಲೆ ಕೊಡವುಲ್ ಎನ್ನತ್ತ ನೆಲೆಯಾಪ
ದೇಶಕೋರ್ ಮಾದೇವಿ ಕಾವೇರಮ್ಮ ಮಾತಾಯಿ
ನಾಡ್‌ಕೋರ್ ಮಾದೇವ, ಊರ್‌ಕೋರ್ ಪೊವ್ವದಿ
ಕೇರಿಕೋರ್ ಅಯ್ಯಪ್ಪ, ಒಕ್ಕಕೋರ್ ಕಾರೋಣ
ಓಡೆಕೋರ್ ನಾಥನೂ, ಓಣಿಕೋರ್ ಪೂದನೂ
ಇನ್ನತ್ತ ನೆಲೆಯಾಪ"[೧]

(ಚಿನ್ನದಂಥ ರಾಜ್ಯ ಕೊಡಗಿನಲ್ಲಿ, ಇಡಿಯ ದೇಶಕ್ಕೆ ಒಬ್ಬಳೇ ಮಾತೆ ಕಾವೇರಿಯೂ, ನಾಡಿಗೆ ಒಬ್ಬ ಮಹಾದೇವನೂ, ಗ್ರಾಮಕ್ಕೆ ಒಬ್ಬಳು ಭಗವತಿಯೂ, ಕೇರಿಗೊಬ್ಬ ಅಯ್ಯಪ್ಪನೂ, ಓಡೆಗೊಬ್ಬ ನಾಥನೂ, ಓಣಿಗೊಬ್ಬ ಪೂದನೂ(ಗುಳಿಗನೂ) ಪ್ರತೀ ಕುಟುಂಬಕ್ಕೊಬ್ಬ 'ಕಾರೋಣ' ನೂ (ವಂಶದ ಹಿರಿಯ) ನೆಲೆನಿಂತಿರುತ್ತಾರೆ.

ಈ ಹಾಡಿನಲ್ಲಿ ಬರುವ ಕೇರಿಗೊಬ್ಬ ಅಯ್ಯಪ್ಪ ಬೇಟೆಗಾರನಾದ ಅಯ್ಯಪ್ಪ ದೇವರಾಗಿ ಊರಿನ ದೇವರ ಕಾಡಿನ ನಡುವೆ ಹಾಲು ಒಸರುವ ಮರದ ಕೆಳಗೆ ನೆಲೆನಿಲ್ಲುತ್ತಾನೆಂಬ ನಂಬಿಕೆಯಿದೆ. ವಾರದ ಎರಡು ದಿವಸಗಳಲ್ಲಿ ಈ ಕಾಡಿನಲ್ಲಿ ಬೇಟೆಯಾಡಬಾರದೆಂಬ ಪದ್ಧತಿ ಇದೆ. ಹಾಗೆಯೇ ಅಯ್ಯಪ್ಪ ದೇವರ ವರ್ಷಂಪ್ರತಿ ಉತ್ಸವದ ಸಂದರ್ಭದಲ್ಲಿ ಹಬ್ಬದ ಆರಂಭದಿಂದ ಅದು ಮುಗಿಯುವ ೯ ಅಥವಾ ೧೧ನೇಯ ದಿವಸದವರೆಗೆ ಅ ದೇವರ ಕಾಡಿನಲ್ಲಿ ಬೇಟೆಯಾಡುವುದಾಗಲಿ, ಊರಿನಲ್ಲಿ ಪ್ರಾಣಿಗಳನ್ನು ಕೊಲ್ಲುವುದಾಗಲಿ ಮಾಡಬಾರದೆಂಬ ನಿಯಮವನ್ನು ಈಗಲೂ ಪಾಲಿಸಲಾಗುತ್ತಿದೆ.

ಬೆಟ್ಟ-ಗುಡ್ಡಗಳ ನಡುವೆ, ದಟ್ಟ ಕಾಡುಗಳ ನಡುವೆ ಬದುಕಬೇಕಾದ ಇಲ್ಲಿನ ಜನಸಮುದಾಯವು ಕ್ರಿಯಾಶೀಲತೆ, ದೈಹಿಕ ಸದೃಢತೆ, ಶೌರ್ಯ, ಪರಾಕ್ರಮ ಪ್ರವೃತ್ತಿ, ಹೊಂದಾಣಿಕೆಯ ಮನೋಧರ್ಮದ ಅತ್ಮಸ್ಥೈರ್ಯವನ್ನು ಹೊಂದಿದೆ. ಇಂತಹ ಸದೃಢ ಮನೋಸ್ಥೈರ್ಯದ ಜನಸಮುದಾಯವನ್ನು ಹಾಗೆ ನೋಡಿದರೆ ಬೇರೆ ಕಡೆಗಳಲ್ಲಿ ಕಾಣುವುದು ಅತೀ ವಿರಳ, ಸಹಜವಾಗಿಯೇ ಈ ಮನೋಧರ್ಮವನ್ನು ಇಲ್ಲಿ ರಚಿತವಾದ ಸಾಹಿತ್ಯದಲ್ಲೂ ಕೂಡ ಕಾಣಬಹುದಾಗಿದೆ. ಉತ್ತಮ ಅಂಗಸೌಷ್ಠವ, ಧೈರ್ಯದ ಕಾರಣದಿಂದ ಇದು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಸೈನಿಕರನ್ನು, ರಕ್ಷಕರನ್ನು, ಕ್ರೀಡಾಪಟುಗಳನ್ನು ದೇಶಕ್ಕೆ ನೀಡಲು ಸಾಧ್ಯವಾಗಿದೆ.

ಇಲ್ಲಿನ ಹವಾಗುಣಕ್ಕೆ ಹೊಂದುವಂತಹ ಬೆಳೆಗಳಾದ ಬತ್ತ, ಕಾಫಿ, ಏಲಕ್ಕಿ, ಕಾಳುಮೆಣಸು, ಕಿತ್ತಳೆ ಮೊದಲಾದವು ಪ್ರಮುಖ ಜೀವನಾಧಾರ ಬೆಳೆಗಳಾಗಿವೆ.

ಕೊಡಗಿನ ಅಸ್ತಿತ್ವದ ಕುರಿತಾದ ದಾಖಲೆಗಳನ್ನು ಪೌರಾಣಿಕ ಹಾಗೂ ಚಾರಿತ್ರಿಕ ಮೂಲಗಳಿಂದ ಗುರುತಿಸಬಹುದಾಗಿದೆ. ಪೌರಾಣಿಕವಾಗಿ ಸ್ಕಂದ ಪುರಾಣದ ಭಾಗವಾದ 'ಕಾವೇರಿ ಮಹಾತ್ಮೆ'ಯಲ್ಲಿ ಕಾವೇರಿಯ, ಕೊಡಗಿನ, ಕೊಡವರ ಉಲ್ಲೇಖವಿದೆ.

ಕೊಡಗಿಗೆ ಪೂರ್ವದಲ್ಲಿ ಬ್ರಹ್ಮಕ್ಷೇತ್ರ, ಮತ್ಸ್ಯದೇಶ, ಕ್ರೋಢದೇಶಗಳೆಂಬ ಹೆಸರುಗಳಿದ್ದವು ಎಂದು ತಿಳಿದುಬರುತ್ತದೆ. "ಬ್ರಹ್ಮನು ಲೋಕ ಸಂಚಾರಿಯಾಗಿ ಬಂದು ತಲಕಾವೇರಿಯಲ್ಲಿ ಒಂದು ಅಶ್ವತ್ಥ ಮರವನ್ನು ಕಂಡನೆಂದೂ, ಕ್ಷಣಾರ್ಧದಲ್ಲೇ ಆ ಮರವು ವಿಷ್ಣುವಾಗಿ ಅತನಿಗೆ ಕಂಡಿತೆಂದೂ, ಅಲ್ಲಿ ಬ್ರಹ್ಮನು ವಿಷ್ಣುವನ್ನು ಅರಾಧಿಸಿದ ಕಾರಣ ಅದು 'ಬ್ರಹ್ಮಕ್ಷೇತ್ರ' ವೆನಿಸಿ ಕೊಡಗಿಗೆ 'ಬ್ರಹ್ಮಕ್ಷೇತ್ರ'ವೆಂದು ಹೆಸರಾಯಿತೆಂದು"[೨] ಹೇಳಲಾಗಿದೆ. ಅರ್ಧಚಂದ್ರವೆಂಬ ಬೆಟ್ಟದಲ್ಲಿ ಪವಿತ್ರವಾದ ತೀರ್ಥವಿದ್ದು ವಿಷ್ಣುವು

ಮೀನಿನ ರೂಪ ತಳೆದು ಆ ತೀರ್ಥಕೊಳದಲ್ಲಿ ನಿಂತು ಶಿವನನ್ನು ಆರಾಧಿಸಿದನೆಂದೂ, ಶಿವನು ಪ್ರತ್ಯಕ್ಷನಾಗಿ ಈ ದೇಶದಲ್ಲಿ ಮೀನುಗಳಿಗೆ ಅಮರತ್ವನ್ನು ನೀಡಿದುದರಿಂದಾಗಿ ಆ ದೇಶವು 'ಮತ್ಸ್ಯದೇಶ'ವೆಂದು ಹೆಸರಾಯಿತೆನ್ನುತ್ತಾರೆ. ಈ ದೇಶವನ್ನು ಸಿದ್ದಾರ್ಥನೆಂಬ ರಾಜನು ಆಳುತ್ತಿದ್ದನು.

ಈ ಸಿದ್ದಾರ್ಥ ಅರಸನ ಕೊನೆಯ ಮಗನಾದ ಚಂದ್ರವರ್ಮನ ಶೂದ್ರ ಹೆಂಡತಿಯಿಂದ ಹುಟ್ಟಿದ ಮಕ್ಕಳು "ಉಗ್ರ" ರೆಂದು ಕರೆಯಲ್ಪಟ್ಟು ಶೂರರು. ಸಾಹಸಿಗಳೂ, ಧರ್ಮ ದೃಷ್ಟಿಯ ಗುಣಶೀಲರೂ ಆಗಿ ಬೆಳೆದರು. ಮತ್ಸ್ಯದೇಶದ ಸಿದ್ದಾರ್ಥನ ಮಗನಾದ ಚಂದ್ರವರ್ಮನ ಈ ರಾಜ್ಯಕ್ಕೂ 'ಮತ್ಸ್ಯದೇಶ'ವೆಂದು ಹೆಸರು ಬಂತೆಂದು ಹೇಳುತ್ತಾರೆ.

ಪ್ರಸಿದ್ಧ ಅರಸನಾಗಿದ್ದ ಚಂದ್ರವರ್ಮನಿಗೆ ಶೂದ್ರ ಹೆಂಡತಿಯಲ್ಲಿ ೧೧ ಜನ ಗಂಡುಮಕ್ಕಳು ಜನಿಸಿದರು. ಇವರು ಕ್ಷತ್ರಿಯ ಪರಂಪರೆಯಲ್ಲೇ ಬೆಳೆದರು. ಶೂರರೂ, ಕಷ್ಟಸಹಿಷ್ಣುಗಳೂ ಆದ ಇವರು ತಮ್ಮ ಉಗುರು ಹಾಗೂ ಇತರ ಆಯುಧಗಳಿಂದ ಬೆಟ್ಟಗುಡ್ಡಗಳನ್ನು ಸಮತಟ್ಟಾಗಿಸಿ ಅಲ್ಲಿ ಮನೆಗಳನ್ನು ಕಟ್ಟಿಕೊಂಡು ಜೀವಿಸತೊಡಗಿದರು. ವರಾಹವತಾರದಲ್ಲಿ ಭೂಮಿಯನ್ನು ಮೇಲಕ್ಕೆತ್ತಿ ಹೊಸ ಸೃಷ್ಟಿಗೆ ಕಾರಣವಾದಂತೆ, ಈ ಜನರು ಹೊಸಬದುಕನ್ನು ಅರಂಭಿಸಿದ್ದರಿಂದ ಈ ಬಾಗಕ್ಕೆ ಕ್ರೋಢದೇಶ(ಕ್ರೋಡ ಎಂದರೆ ವರಾಹ)ವೆಂದೂ, ಜನರನ್ನು ಕ್ರೋಢಜನರೆಂದೂ ಕರೆಯಲಾಯಿತು. ಅವರೇ ಕ್ರಮೇಣ 'ಕೊಡವರು' ಎಂದಾದರು. ಕ್ರೋಢದೇಶ ಮುಂದೆ 'ಕೊಡಗು' ಆಯಿತು.

ಕೊಡಗಿನ, ಕೊಡವರ ಉಲ್ಲೇಖವು ಚಾರಿತ್ರಿಕವಾಗಿ ಸುಮಾರು ಕ್ರಿ.ಶ.ದ ಅದಿಭಾಗದಲ್ಲಿ ಆರಂಭವಾಗಿದೆ. "ಚಂದ್ರವರ್ಮನು ಕದಂಬ ರಾಜವಂಶದ ಒಬ್ಬ ರಾಜನೆಂದೂ, ಕದಂಬರು ಕ್ರಿ.ಶ.ದ ಆದಿಭಾಗದಲ್ಲಿ ಕೊಡಗನ್ನು ಆಳುತ್ತಿದ್ದರೆಂದೂ ಕೆಲವು ಚರಿತ್ರಕಾರರು ಪ್ರತಿಪಾದಿಸುತ್ತಾರೆ.

ಚಂದ್ರವರ್ಮ ಹೆಸರು ಕ್ರಿಸ್ತಪೂರ್ವ ಎರಡನೆಯ ಶತಮಾನದಿಂದ ಕ್ರಿಸ್ತಶಕ ಆರನೆಯ ಶತಮಾನದವರೆಗೆ ಆಳಿದ ಕದಂಬ ವಂಶದ ರಾಜರಲ್ಲಿ ಅನೇಕರಿಗಿದೆ. ಕೊಡಗನ್ನು ಮೊದಲು ವಶಪಡಿಸಿ ಆಳಿದ ಚಂದ್ರವರ್ಮನನ್ನು ಆನಂತರದ ಸಂಸ್ಕೃತ ಪುರಾಣಕರ್ತರು ಕಾವೇರಿ ಮಹಾತ್ಮೆಯ ಚಂದ್ರವರ್ಮನನ್ನಾಗಿ ಪರಿವರ್ತಿಸಿ ಕಥೆಯನ್ನು ಕಟ್ಟಿದರೆಂದೂ ಕರ್ನಲ್ ಮಿಲ್ಕ್ಸ್ ಹೇಳುತ್ತಾರೆ"[೩].

'ಕೊಡಗು ಕೊಂಗರ್' ಅಥವಾ ಕೊಡಗಿನ ಕೊಂಗರು ಎಂದು 'ಶಿಲಪ್ಪದಿಗಾರಂ'ನಲ್ಲಿ ಬರುವ ಉಲ್ಲೇಖದಿಂದ "ಕೊಂಗರೆನ್ನುವವರು ಮೂಲತಃ ಕೊಡಗಿನವರಾಗಿದ್ದರೆಂದು ಗ್ರಹಿಸಬಹುದು. ಕೊಂಗು ಮತ್ತು ಕೊಡಗು ಪದಗಳ ಮೂಲ ಒಂದೇ ಎಂದು ಕಿಟೆಲ್ ವಾದಿಸಿರುವರು"[೪]. ಕೊಡಗು ಪ್ರದೇಶದೊಡನೆ ಗುರುತಿಸಿಕೊಂಡ ನಣ್ಣನ್ ಎಂಬ ವೀರನನ್ನು ಇಪ್ಪತ್ತಕ್ಕೂ ಹೆಚ್ಚು ಸಂಗಂ ಕಾವ್ಯಗಳಲ್ಲಿ ಪ್ರಸ್ತಾಪಿಸಲಾಗಿದೆ ಎಂದು ಪ್ರೊ.ಶೆಟ್ಟರ್‌ರವರು ಹೇಳುತ್ತಾರೆ. ತಮಿಳಿನ ಸಂಗಂ ಸಾಹಿತ್ಯದಲ್ಲಿ ಕೊಡಗಿನ ಉಲ್ಲೇಖ ಬರುವುದರಿಂದ ಕೊಡಗು ಕ್ರಿ.ಶ.೨ನೇಯ ಶತಮಾನದಲ್ಲೇ ಆಸ್ತಿತ್ವದಲ್ಲಿತ್ತು ಎಂಬುದನ್ನು

ನಂಬಬಹುದಾಗಿದೆ. ಕ್ರಿ.ಶ.೪ನೇಯ ಶತಮಾನದಿಂದ ಈಚೆಗೆ ಗಂಗ, ಕದಂಬ, ಚೋಳ ಅರಸರು ಕೊಡಗನ್ನು ಆಳುತ್ತಿದ್ದರು. ೧೧-೧೨ನೇಯ ಶತಮಾನದಲ್ಲಿ ಕೊಂಗಾಳ್ವರು, ಚೆಂಗಾಳ್ವರು ಕೊಡಗಿನಲ್ಲಿ ಆಡಳಿತ ನಡೆಸಿದ್ದಾರೆ. ಇವರ ನಂತರದಲ್ಲಿ ಕೊಡಗು ಹೊಯ್ಸಳರ ವಶವಾಗುತ್ತದೆ. ಈ ಎಲ್ಲಾ ಕಾಲಘಟ್ಟಗಳಲ್ಲಿ ಕೊಡಗಿನವರ/ಕೊಡವರ ವಿಚಾರವಾಗಿ ಯಾವುದೇ ವಿಷಯವು ದಾಖಲಾಗಿಲ್ಲ. ೧೧೭೪ರ ಹುಣಸೂರು ಶಾಸನದಲ್ಲಿ ಕೊಡಗಿನ ಹತ್ತುಗಟ್ಟುನಾಡಿನ ಪಾಲ್ಪರೆ ಕೋಟೆಯಲ್ಲಿ (ಈಗಿನ ಬಾಳೆಲೆ ಎಂಬ ಗ್ರಾಮ) ಹೊಯ್ಸಳ ರಾಜ ೩ನೆಯ ವೀರಬಲ್ಲಾಳನಿಗೂ ಚೆಂಗಾಳ್ವರಾಜರಿಗೂ ನಡೆದ ಯುದ್ಧದ ವಿವರ ಈ ಹುಣಸೂರು ಶಾಸನದಲ್ಲಿ ಕನ್ನಡದಲ್ಲಿದೆ. (ಶಾಸನ ಸಂಖ್ಯೆ ೨೦) "ಎಲ್ಲಾ ನಾಡ ಕೊಡಗರು ಕೂಡಿ"[೫] ಎಂದು ಕೊಡಗಿನ ಜನರ ಪ್ರಸ್ತಾಪ ಪ್ರಥಮವಾಗಿ ದಾಖಲಾಗಿದೆ. ೧೧೭೫ರ ಪೆಮ್ಮವೀರಪ್ಪನ ಶಾಸನದಲ್ಲೂ ಕೊಡವರ ಉಲ್ಲೇಖವಿದೆ. ಹೊಯ್ಸಳರ ನಂತರ ವಿಜಯನಗರ ಅರಸರ, ಮತ್ತೆ ಚೆಂಗಾಳ್ವರ, ೧೪ನೆಯ ಶತಮಾನದ ಕೊನೆಯ ಭಾಗದಲ್ಲಿ ಪಾಳೆಯಗಾರರ ಆಳ್ವಿಕೆಯಲ್ಲಿದ್ದ ಕೊಡಗು ಆ ನಂತರದಲ್ಲಿ ೧೬೦೦ ರಿಂದ ೧೮೩೪ರ ವರೆಗೆ ಹಾಲೇರಿ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಈ ನಡುವೆ ೧೭೮೦ ರಿಂದ ೧೭೯೯ ರವರೆಗೆ ಮೈಸೂರಿನ ಹೈದರಾಲಿ ಹಾಗೂ ಟಿಪ್ಪುವಿನ ವಶದಲ್ಲಿದ್ದ ಕೊಡಗು ಆನಂತರದಲ್ಲಿ ೧೯೫೧ರಲ್ಲಿ ಕೊಡಗು 'ಸಿ ರಾಜ್ಯ' ವಾಯಿತು. ೧೯೫೬ ರಲ್ಲಿ ಭಾಷಾವಾರು ಪ್ರಾಂತ್ಯ ರಚನೆಯಾದ ಸಂದರ್ಭದಲ್ಲಿ ಕೊಡಗು ಮೈಸೂರು ಪ್ರಾಂತ್ಯಕ್ಕೆ ಸೇರಿ ಕರ್ನಾಟಕದ ಭಾಗವಾಯಿತು. ಹೀಗೆ ಕೊಡವ ಭಾಷೆ ಹಾಗೂ ಸಮುದಾಯಗಳಿಗೆ ಸುಮಾರು ಒಂದು ಸಾವಿರ ವರ್ಷಗಳ ದಾಖಲೆಯ ಇತಿಹಾಸವಿರುವುದನ್ನು ಕಾಣಬಹುದಾಗಿದೆ.

ಕೊಡಗಿನಲ್ಲಿ ಸಾಮಾಜಿಕ ಜೀವನದ ಕೇಂದ್ರಬಿಂದುವೆಂದರೆ ಇವರ ಕುಟುಂಬ ಅಥವಾ 'ವಕ್ಕ'. ಪ್ರತೀ ಕುಟುಂಬಕ್ಕೆ ಅದರ ಸ್ಥಾಪಕನಾದ ಹಿರಿಯನಿದ್ದು ಆತನಿಂದ ಬೆಳೆದುಬಂದವರ ಸಮೂಹ 'ವಕ್ಕ'ವೆನಿಸುವುದು. ಆತನು ಆ ವಕ್ಕದ ಕಾರಣ ಪುರುಷನಾಗುವನು. ಆತನನ್ನೇ ಕುಟುಂಬದವರು ತಮ್ಮ 'ಕಾರೋಣ' ಎಂದು ಪೂಜಿಸುವರು.

ಪ್ರತಿ ಕುಟುಂಬದ ಜೀವಂತವಿರುವ ಹಿರಿಯನು ಆ ಕುಟುಂಬದ 'ಕೊರವುಕಾರ'ನೆನಿಸುತ್ತಾನೆ. ಆತನ ಹೆಂಡತಿಯು 'ಕೊರವುಕಾರ್ತಿ' ಇವರಿಬ್ಬರು ಇಡೀ ಕುಟುಂಬದ ಸರ್ವ ಹಿತಾಹಿತಗಳಿಗೂ ಜವಾಬ್ದಾರರು. ಕುಟುಂಬದ ಆಸ್ತಿಗಳೆಲ್ಲವೂ ಸರಿಯಾಗಿರುವಂತೆ, ಭೂಮಿ ಸರಿಯಾಗಿ ವ್ಯವಸಾಯವಾಗುವಂತೆ, ಕುಟುಂಬದ ಸದಸ್ಯರು ಪರಸ್ಪರ ಜಗಳವಾಡದೇ ಹೊಂದಿಕೊಂಡು ಜೀವಿಸುವಂತೆ ನೋಡುವುದು ಅವರ ಕರ್ತವ್ಯವಾಗಿದೆ. ಕುಟುಂಬದ ಹಿತಕ್ಕಾಗಿ ಎಲ್ಲರೂ ದುಡಿಯುವಂತೆ ಪ್ರೇರೇಪಿಸುವುದು ಹಿರಿಯರಾದ ಇವರ ಕರ್ತವ್ಯ. ಇಂತಹ ವಕ್ಕದ ಸದಸ್ಯರೆಲ್ಲರೂ ಒಂದೆಡೆ ಒಂದೇ 'ಐನ್‌ಮನೆ' (ಮೂಲಮನೆ)ಯಲ್ಲಿ ಜೀವಿಸುತ್ತಿದ್ದ ಅವಿಭಕ್ತ ಕುಟುಂಬ ಪರಂಪರೆ ಈ ಸಂಸ್ಕೃತಿಯ ಮೇಲೆ ಅಪಾರವಾದ ಪರಿಣಾಮವನ್ನು ಬೀರಿದೆ.

ಈ 'ಐನ್‌ಮನೆ'ಗಳು ಸಾಮಾನ್ಯವಾಗಿ ಎತ್ತರದ ಸ್ಥಳಗಳಲ್ಲಿ ಕಟ್ಟಲ್ಪಟ್ಟಿದ್ದು ಅವುಗಳನ್ನು ತಲುಪಲು ಕಿರಿದಾದ ಓಣಿಗಳು ನಿರ್ಮಿತವಾಗಿರುತ್ತವೆ. ಈ ಮನೆಗಳ ಸುತ್ತಲೂ ಆ ಕುಟುಂಬಕ್ಕೆ ಸೇರಿದ ಆಸ್ತಿ-ಪಾಸ್ತಿಗಳಿರುತ್ತವೆ. ಸಾಧಾರಣವಾಗಿ ಮನೆಯ ಎದುರುಗಡೆಗೆ ವಿಶಾಲ ಬತ್ತದ ಗದ್ದೆಗಳೂ, ಇಕ್ಕೆಲಗಳಲ್ಲಿ ಮತ್ತು ಹಿನ್ನೆಲೆಯಲ್ಲಿ ವಾಣಿಜ್ಯ ಬೆಳೆಗಾಳಾದ ಕಾಫಿ, ಕಿತ್ತಳೆ, ಏಲಕ್ಕಿತೋಟಗಳು ಇರುತ್ತವೆ. ಈ ಎಲ್ಲ ಆಸ್ತಿಗಳನ್ನು ಬೇರೆಯವರ ಆಸ್ತಿಗಳಿಂದ ಬೇರ್ಪಡಿಸುವ ವಿಶಿಷ್ಟ 'ಕಡಂಗ'ಗಳಿವೆ. ಕೇರಳದ ಶ್ರೀಮಂತ ನಾಯರರ ಮನೆಯನ್ನು ಹೋಲುವ ಈ ಮನೆಗಳಿಗೆ ;ನಾಲ್‌ಕೆಟ್ಟ್ ಮನೆ'ಗಳೆಂದು ಹೆಸರಿದೆ. ಈ ಪಾರಂಪರಿಕ ಕುಟುಂಬದ ಎಲ್ಲರ ಅನುಕೂಲತೆಯ ದೊಡ್ಡ ಕಟ್ಟಡ ಮಾತ್ರವಲ್ಲ. ಅದು ಇಲ್ಲಿಯ ಜನಜೀವನದ ಅನೇಕ ಉತ್ತಮ ಆದರ್ಶಗಳಿಗೆ, ಸಂಸ್ಕೃತಿ, ಸಭ್ಯತೆಗಳಿಗೆ ದ್ಯೋತಕವಾಗಿದೆ. ಇವರ ಬದುಕಿನ ಶಿಸ್ತು, ಸಂಯಮಗಳಿಗೆ ರೂಪುಕೊಡುವ ತಾಣವಾಗಿದೆ. ಹೀಗೆ ವ್ಯವಸ್ಥಿತಗೊಂಡ ಕುಟುಂಬವು ಗಂಡು ಸಂತಾನವಿಲ್ಲದೆ ನಶಿಸಿಹೋಗದಂತೆ ವಂಶವನ್ನು ಮುಂದುವರೆಸಲು 'ವಕ್ಕಪರಿಜೆ'(ಮಕ್ಕಳಿಗಾಗಿ ಈ ವಂಶದ ಹೆಣ್ಣು ಹೊರಗಿನ ಗಂಡನ್ನು ಮದುವೆಯಾಗಿ ತಂದೆಯ ಕುಟುಂಬದಲ್ಲೇ ವಾಸಿಸುವುದು) ಹಾಗೂ 'ವಕ್ಕಪರಿಜೆ' (ಹೊಸ ಕುಟುಂಬದ ಗಂಡಸಿನಿಂದ ವಂಶದ ಉದ್ಧಾರಕ್ಕಾಗಿ ಮಕ್ಕಳನ್ನು ಪಡೆಯುವುದು) ಎಂಬ ಪದ್ಧತಿಗಳನ್ನು ಅನುಸರಿಸಲಾಗುತ್ತಿತ್ತು ಈಗ ಇಂತಹ ಪದ್ಧತಿಗಳ ಬದಲಿಗೆ ಹೊರಗಿನಿಂದ ಮಕ್ಕಳನ್ನು 'ದತ್ತು ಸ್ವೀಕಾರ' ಮಾಡಿಕೊಳ್ಳಲಾಗುತ್ತಿದೆ

ಇಂತಹ ಹಲವಾರು ಕುಟುಂಬಗಳು ಸೇರಿ ಒಂದು ಗ್ರಾಮವಾಗುತ್ತದೆ. ಕುಟುಂಬದ ರಚನೆಯ ಪದ್ಧತಿಯೇ ಗ್ರಾಮಗಳಲ್ಲಿ ಪ್ರಚಲಿತವಿದೆ. ಹಲವು ಕುಟುಂಬಗಳು ಸದಸ್ಯರಾಗಿರುವ ದೊಡ್ಡದೊಂದು ಅವಿಭಕ್ತ ಕುಟುಂಬವೇ ಗ್ರಾಮವೆನ್ನಬಹುದು. ಗ್ರಾಮಸ್ಥರೆಲ್ಲರೂ ಗುಂಪುಗಟ್ಟಿ ಒಂದೆಡೆ ಮನೆಮಠ ಮಾಡಿಕೊಂಡು ಜೀವಿಸುವ ರೀತಿ ಇಲ್ಲಿ ಇಲ್ಲ. ಕುಟುಂಬಕ್ಕೆ 'ಕೊರವುಕಾರ'ನಿದ್ದಂತೆ ಪ್ರತಿ ಗ್ರಾಮದಲ್ಲೂ ಗ್ರಾಮದ ಮುಂದಾಳಾಗಿ 'ತಕ್ಕ'ನೊಬ್ಬನಿರುತ್ತಾನೆ. ಈತನೇ ಆ ಗ್ರಾಮಕ್ಕೆ ಸಂಬಂಧಿಸಿದ ಎಲ್ಲ ಕೆಲಸಕಾರ್ಯಗಳನ್ನು ನಡೆಸಿಕೊಂಡು ಬರುವನು. ತಕ್ಕ ಯೋಗ್ಯನಲ್ಲದಿದ್ದರೆ

ಊರು ಹಾಳಾಗುತ್ತದೆ ಎಂಬುದಕ್ಕೆ ಗಾದೆಯೊಂದು ಸೃಷ್ಟಿಯಾಗಿದೆ. 'ತಕ್ಕ ಪೋಲಿಯಾಚೇಂಗಿ ಊರ್‌ಪೊಲಗೇರಿ' (ತಕ್ಕನು ಅಯೋಗ್ಯನಾದರೆ ಊರು ಹಾಳುಬಿದ್ದು ಹೋಗುತ್ತದೆ) ಗ್ರಾಮದ ಯಾವುದಾದರೂ ಕುಟುಂಬಕ್ಕೆ ಬೆಂಕಿ, ಖಾಯಿಲೆ ಇಲ್ಲವೆ ಅಪಾಯಗಳಿಂದ ತುಂಬಾ ನಷ್ಟವಾದಾಗ ವಿಶೇಷ ಕಾರಣಗಳಿಂದಾಗಿ ಯಾವುದೇ ಕುಟುಂಬವು ತನ್ನ ವ್ಯವಸಾಯವನ್ನು ಮಾಡಲಾರದಂತಾದಾಗ ಈ ತಕ್ಕನು ಮುಂದಾಳ್ತನವನ್ನು ವಹಿಸಿ ಗ್ರಾಮಸ್ಥರೆಲ್ಲರನ್ನೂ ಸೇರಿಸಿಕೊಂಡು ಆ ಕುಟುಂಬಕ್ಕೆ ವ್ಯವಸಾಯದಲ್ಲಿ ನೆರವಾಗುವ ವ್ಯವಸ್ಥೆಯಿದೆ.

ಪ್ರತೀ ಗ್ರಾಮದಲ್ಲಿ ಗ್ರಾಮದನ್ವಯ ತೀರ್ಮಾನಗಳನ್ನು ಮಾಡಲು ಪ್ರತ್ಯೇಕ ಸ್ಥಳವಿದೆ. ಇದನ್ನೇ 'ಊರ್‌ಮಂದ್' ಎನ್ನಲಾಗುತ್ತದೆ ಈ ಮಂದ್‌ನಲ್ಲಿ ಮೂರು ವಿಧಗಳಿವೆ. 'ಪಂಚಾಯಿತಿ ಮಂದ್'

'ಊರ್‌ಮಂದ್' 'ದೇವರಮಂದ್' ಕೆಲವೊಮ್ಮೆ 'ಊರ್‌ಮಂದ್' 'ದೇವರ್‌ಮಂದ್' ಒಂದೇ ಆಗಿರುತ್ತದೆ ಪ್ರತಿಯೊಂದು ಕುಟುಂಬದ ಶುಭಾಶುಭ ಕಾರ್ಯಗಳಿಗೆ ನೆರವಾಗಿ ಕೆಲಸಕಾರ್ಯಗಳಿಗೆ ನೆರವಾಗುವ ಮತ್ತೊಂದು ಕುಟುಂಬವಿರುತ್ತದೆ. ಇವರನ್ನು 'ಅವರು' ಎನ್ನುತ್ತಾರೆ. ಊರಿನ ನಿಯಮಗಳನ್ನು ಮೀರಿ ನೈತಿಕ ತಪ್ಪುಗಳನ್ನು ಮಾಡಿದವರಿಗೆ ಶಿಕ್ಷೆ ವಿಧಿಸುವ ಕ್ರಮವೂ ಇದೆ. ಹೀಗೆ ಸಾಮಾಜಿಕವಾಗಿ ಮತ್ತು ಕೌಟುಂಬಿಕವಾಗಿ ಅತ್ಯಂತ ಶಿಸ್ತುಬದ್ಧ ವ್ಯವಸ್ಥೆ ಇಲ್ಲಿರುವುದನ್ನು ಕಾಣಬಹುದು. ಇವೆಲ್ಲವುಗಳ ಸ್ಥೂಲರೂಪ ಇಂದಿಗೂ ಕೊಡಗಿನಲ್ಲಿ ಆಚರಣೆಯಲ್ಲಿ ಉಳಿದುಕೊಂಡಿರುವುದು ಅಷ್ಟೇ ವಿಶೇಷ.

ಭಾಷಾವರ್ಗೀಕರಣದ ಪ್ರಕಾರ ಕೊಡವ ಭಾಷೆ ದಕ್ಷಿಣದ್ರಾವಿಡ ವರ್ಗಕ್ಕೆ ಸೇರಿದೆ. ಕೊಡವ ಭಾಷೆ ಕೊಡಗಿನ ೨೩ ಸಮುದಾಯಗಳ ಮಾತೃಭಾಷೆ ಆಗಿದೆ ಎಂದು ೧೮೧೨ರಲ್ಲಿ ರಚಿತವಾದ ಲಿಂಗರಾಜನ 'ಹುಕ್ಕುಂನಾಮೆ'ಯಲ್ಲಿ ೧೮೫೫ರಲ್ಲಿ ಮೋಗ್ಲಿಂಗ್ ರಚಿಸಿದ 'ಕೂರ್ಗ್ ಮೆಮಯರ್' ನಲ್ಲಿ ಇದು ೧೩ ಸಮುದಾಯಗಳ ಮಾತೃಭಾಷೆ ಎಂದೂ, ರಿಕ್ತರ್ ೧೮೭೧ರಲ್ಲಿ ರಚಿಸಿದ ತನ್ನ ಗಜೆಟಿಯರ್‌ನಲ್ಲಿ ಇದು ೧೫ ಸಮುದಾಯಗಳ ಮಾತೃಭಾಷೆ ಎಂದೂ ತಿಳಿಸಿದ್ದಾರೆ. ಸುಮಾರು ೧೯ನೆಯ ಶತಮಾನದವರೆಗೂ 'ಕೊಡಗು'ಭಾಷಾವಾಚಕವಾಗಿಯು ಜನಸಮುದಾಯವಾಚಕವಾಗಿಯೂ ಬಳಸಿರುವುದು ಕಂಡುಬರುತ್ತದೆ. ಅನಂತರದಲ್ಲಿ 'ಕೊಡಗು' ಪದ ಪ್ರದೇಶವಾಚಕವಾಗಿಯೂ 'ಕೊಡವ' ಪದ ಬಾಷಾವಾಚಕ ಹಾಗೂ ಸಮುದಾಯವಾಚಕ (ಜನಾಂಗವಾಚಕ)ವಾಗಿಯೂ ಬಳಕೆಯಾಗುತ್ತಿದೆ.

ಕೊಡವ ಭಾಷೆಗೆ ಪ್ರತ್ಯೇಕವಾದ ಲಿಪಿ ಇಲ್ಲ. ಕನ್ನಡದ ಲಿಪಿಯನ್ನೇ ಬಳಸಿ ಕೊಡವ ಭಾಷೆಯು ವ್ಯವಹರಿಸುತ್ತದೆ. ೧೮೭೭ರಲ್ಲಿ ಕೃತಿರಚನೆ ಮಾಡಿದ ಪ್ರಥಮ ದೇಶೀ ವಿದ್ವಾಂಸನಾದ ಡಾ.ಕೊರವಂಡ ಅಪ್ಪಯ್ಯನವರಿಂದ ಆರಂಭಿಸಿ ಡಾ.ಐ.ಮಾತ್ತಣ್ಣನವರೂ ಸೇರಿದಂತೆ ಹಲವಾರು ದೇಶೀ ವಿದ್ವಾಂಸರು ಈ ಭಾಷೆಗೆ ಪ್ರತ್ಯೇಕ ಲಿಪಿ ಸೃಷ್ಟಿಸುವ ಪ್ರಯತ್ನವನ್ನು ಮಾಡಿದ್ದಾರೆ.

ಕೊಡವ ಭಾಷೆಯನ್ನು ಪ್ರಥಮವಾಗಿ ಪರಿಚಯಿಸಿದ ವಿದ್ವಾಂಸರು ರಾಬರ್ಟ್ ಕಾಲ್ಡ್‌ವೆಲ್ ಹಾಗೂ ಗ್ರೇಟರ್ ಎಂಬುವರು. ಕೊಡವ ಭಾಷೆಗೆ ಪ್ರಥಮವಾಗಿ ವ್ಯಾಕರಣ ಬರೆದವರು ಮೇಜರ್ ಆರ್.ಎ.ಕೋಲ್ (Coorg Grammer, Major R.A Cole, Bangalore ೧೮೬೭) ಆನಂತರದಲ್ಲಿ ೧೮೭೦ರಲ್ಲಿ ಗ್ರೇಟರ್ ಕೆಲವು ಜನಪದ ಹಾಡುಗಳನ್ನು ಸೇರಿಸಿ ವ್ಯಾಕರಣ ಕೃತಿಯನ್ನು ಪ್ರಕಟಿಸಿದರು. (Coorg Songs with outlines of coorg grammer Rev A Grater Mangalore ೧೮೭೦) ಜೊತೆಗೆ ಇನ್ನೂ ಹಲವರು ದೇಶೀ ವ್ಯಾಕರಣ ರಚನೆ ಮಾಡಿದ್ದಾರೆ.

ಕೊಡವ ಭಾಷೆ ಹಳೆಗನ್ನಡ ಮತ್ತು ತುಳು ಭಾಷೆಗಳ ನಡುವೆ ಬರುತ್ತದೆಂದು ಹೇಳಿದ ಡಾ.ಕಾಲ್ಡ್‌ವೆಲ್ ರವರು) ಈ ಭಾಷೆಯನ್ನು ಗ್ರಂಥಸ್ಥವರ್ಗಕ್ಕೆ ಸೇರಿಸದೆ ಚಾಕ್ಷುಷ ಭಾಷೆಯಲ್ಲಿಯೇ ಸೇರಿಸಿದ್ದಾರೆ. ಜೊತೆಗೆ ಕನ್ನಡಕ್ಕೆ ಬಡಗ ಮತ್ತು ಕೊಡಗು ಉಪಭಾಷೆಗಳಾಗಿವೆ ಎಂದು ಅಭಿಪ್ರಾಯಪಡುತ್ತಾರೆ. ತಮಿಳು-ಮಲಯಾಳಂ ಭಾಷೆ ಅತ್ಯಂತ ಸಮೀಪದಲ್ಲಿದೆ ಎಂದು ಜರ್ಮನ್

ವ್ಯಾಕರಣಕಾರನಾದ ಡಾ.ಮೋಗ್ಲಿಂಗ್ ಅಭಿಪ್ರಾಯ ಪಡುತ್ತಾರೆ. ಸಂಶೋಧಕರಾದ ಡಾ.ಪ್ರಭಾಕರ್ ಶಿಶಿಲರವರು ಬುಡಕಟ್ಟು ಜನಾಂಗದ ಹಾಗೂ ಮಲಯಾಳಂ ಭಾಷೆಯ ಸಂಮಿಶ್ರಣದಿಂದ ಈ ಭಾಷೆ ಹುಟ್ಟಿದೆ ಎನ್ನುತ್ತಾರೆ. ಹೀಗೆ ಕೊಡವ ಭಾಷೆಯ ಮೂಲದ ವಿಷಯದಲ್ಲಿ ಹಲವಾರು ಅಭಿಪ್ರಾಯಗಳಿವೆ.

ಕೊಡವ ಭಾಷೆಯ ಬರಹರೂಪಕ್ಕೆ ಕನ್ನಡವನ್ನೇ ಬಳಸುವುದು ಆರಂಭದಿಂದಲೂ ರೂಢಿಯಾದುದರಿಂದ ಪ್ರತ್ಯೇಕ ಲಿಪಿಯ ಪ್ರಯತ್ನ ಸಫಲವಾಗಲಿಲ್ಲ. ಕೊಡಗಿನ ಸುತ್ತಮುತ್ತಲೂ ಕನ್ನಡದ ಪ್ರದೇಶಗಳೇ ಹೆಚ್ಚಿರುವುದರಿಂದ ಕನ್ನಡವೇ ಕೊಡಗಿನ ಆಡಳಿತ ಭಾಷೆಯೂ ಆಗಿರುವುದರಿಂದ ಕನ್ನಡದ ಪ್ರಭಾವವು ಕೊಡವ ಭಾಷೆಯ ಮೇಲೆ ಹೆಚ್ಚಾಗಿದೆ.

'ಕೊಡಗು' ಪದ ನಿಷ್ಪತ್ತಿಯ ಬಗೆಗೆ ಯಾವುದೇ ನಿಶ್ಚಿತವಾದ ಅಭಿಪ್ರಾಯಗಳಿಲ್ಲ. ಭಾಷಾಶಾಸ್ತ್ರದ ಪ್ರಕಾರ 'ಕುರು' ಎಂಬ ಪದ ಕುಡು ಎಂದು ಆಗಿರಲು ಸಾಧ್ಯ. ಈ ಪ್ರಕಾರ 'ಕುರು' ಜನಾಂಗವೇ 'ಕುಡು' ಜನಾಂಗ ಕುಡು ಎಂಬ ಜನಾಂಗ ವಾಸವಾಗಿರುವ ಮಲೆನಾಡು 'ಕುಡುಮಲೆನಾಡು' ಕುಡುಗಳ ಅಹಂ ಎಂದರೆ 'ಮನೆ' ವಾಸಸ್ಥಾನ ಕುಡುಗಳ ವಂಶಸ್ಥರೇ ಕೊಡುವರು 'ಕುಡು' ಎಂಬ ಪದದಿಂದಲೇ 'ಕೊಡವ ಎಂದಾಗಿದೆ ಎಂಬುದನ್ನು ಸಂಸ್ಕೃತ ಭಾಷಾ ಶಾಸ್ತ್ರದ ಪ್ರಕಾರವೂ ನಿರೂಪಿಸಬಹುದು 'ಕೊಡಗು' ಶಬ್ದವು 'ಕುಡುಹಂ' (ಅಂದರೆ ಕಡಿದಾದ ಬೆಟ್ಟಗಳುಳ್ಳದ್ದು) ಎಂಬ ಪದದಿಂದ ಬಂತೆಂದೂ, 'ಕ್ರೋಢ' (ಹಂದಿಗಳಂತೆ ಉಗುರುಗಳಿಂದ ಬೆಟ್ಟಗುಡ್ಡಗಳನ್ನು ಕೆರೆದು ಬಯಲು ಮಾಡುವುದು) ಎಂಬ ಪದದ ಮೂಲವೆಂದು ಕೊಡಿಮಲೆನಾಡು ಕೊಡಗು ಅಯಿತೆಂದೂ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಕೊಡಗಿನ ಮೂಲ ನಿವಾಸಿಗಳಾಗಿ ೨೩ ಸಮುದಾಯಗಳನ್ನು ೧೮೧೨ರಲ್ಲಿ ರಚಿತವಾದ ಲಿಂಗರಾಜನ 'ಹುಕುಂನಾವೆ'ಯಲ್ಲಿ ಗುರುತಿಸಲಾಗಿದೆ. ಅವರೆಂದರೆ ೧. ಕೊಡವ ೨. ಅಮ್ಮಕೊಡವ ೩. ಮುಕ್ಕಾಟ ೪. ಪೆಗ್ಗಡೆ ೫. ಕುರುಬ ೬. ಕುಂಬಾರ ೭. ಉಪ್ಪಾರ ೮. ಅಗಸ ೯. ಆಯಿರಿ ೧೦. ಅಕ್ಕಸಾಲೆ ೧೧. ದೇವಾಂಗ ೧೨. ಕೊತ್ತೇರ ೧೩. ಕಟ್ಟಿಗ ೧೪. ವಡ್ಡ ೧೫. ಕಣಿಯ ೧೬. ದಾಸ ೧೭ ಕ್ಷೌರಿಕ ೧೮. ಮೇದ ೧೯. ಬಡಗ ಹೊಲೆಯ ೨೦. ಕೆಂಬಟ್ಟಿ ೨೧. ಮಾದಿಗ ೨೨. ಮಲೆಯ ೨೩. ಮಾರಿ ಹೊಲೆಯ

ಪ್ರಥಮವಾಗಿ ಕನ್ನಡದ ಲಿಪಿ ಬಳಸಿಕೊಂಡು ಕೊಡವ ಭಾಷೆಯಲ್ಲಿ ಬರವಣಿಗೆಯನ್ನು ಆರಂಭಿಸಿದರು ಡಾ.ಕೊರವಂಡ ಅಪ್ಪಯ್ಯನವರು. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಬರುವ ಡಾ.ಅಪ್ಪಯ್ಯನವರು ಮೈಸೂರು ಮಹಾರಾಜರಾದ ಕೃಷ್ಣರಾಜೇಂದ್ರ ಒಡೆಯರ್‌ರವರಿಗೆ ಅರಮನೆ ವೈದ್ಯರಾಗಿದ್ದರು. ಇವರು ಕ್ರಿ.ಶ.೧೮೮೪ರಲ್ಲಿ ನೀರಿನ ಗುಣ, ದೋಷಗಳನ್ನು ವಿವರಿಸುವ 'ಜಲರತ್ನಾಕರ' ಎಂಬ ಕೃತಿಯನ್ನು ಕನ್ನಡದಲ್ಲಿ ರಚಿಸಿದ್ದಾರೆ. ೧೮೮೭ರಲ್ಲಿ ಕೊಡವ ಭಾಷೆಗೆ ಪ್ರತ್ಯೇಕ ಲಿಪಿ ಸೃಷ್ಟಿಸಿ

ಕೃತಿಯೊಂದನ್ನು (ಶೀರ್ಷಿಕೆ ತಿಳಿದು ಬಂದಿಲ್ಲ) ಗೋ ರಕ್ಷಣೆ ಎಂಬ ಪಶುವೈದ್ಯ ಸಂಗ್ರಹದ ಕೃತಿಯೊಂದನ್ನು ಕನ್ನಡದಲ್ಲಿ ರಚಿಸಿ ಪ್ರಕಟಿಸಿದರು. ಈ ಮೇಲಿನ ಕೃತಿಗಳು ಲಭ್ಯವಿಲ್ಲ. ಆದರೆ ಕ್ರಿ.ಶ. ೧೯೦೨ ರಲ್ಲಿ 'ಕೊಡವರ ಕುಲಾಚಾರದಿ ತತ್ವೋಜ್ಜೀವಿನಿ' ಎಂಬ ಇವರ ಕೊಡವ ಸಂಸ್ಕೃತಿಯ ಕುರಿತ ಕೃತಿ ಲಭ್ಯವಿದೆ. ಕನ್ನಡದಲ್ಲಿರುವ ಈ ಕೃತಿಯಲ್ಲಿ ನಡುವೆ ಅಲ್ಲಲ್ಲಿ ಕನ್ನಡ ಲಿಪಿ ಬಳಸಿ ಕೊಡವ ಭಾಷೆಯಲ್ಲಿ ಹಲವಾರು ವಿಚಾರಗಳನ್ನು ತಿಳಿಸಿದ್ದಾರೆ. ಇವರ ಅನಂತರದಲ್ಲಿ ೧೯೦೬ ರಲ್ಲಿ ಸಮಗ್ರ ಕೃತಿಯನ್ನು ಕನ್ನಡದ ಲಿಪಿ ಬಳಸಿ ಕೊಡವ ಭಾಷೆಯಲ್ಲಿ ರಚಿಸಿ ಪ್ರಥಮವಾಗಿ ಕೊಡವ ಸಾಹಿತ್ಯ ರಚನೆಗೆ ನಾಂದಿ ಹಾಡಿದವರು ಹರದಾಸ ಅಪ್ಪನೇರವಂಡ ಅಪ್ಪಚ್ಚ ಕವಿಯವರು. ನಾಲ್ಕು ಪೌರಾಣಿಕ ನಾಟಕಗಳನ್ನು 'ಚಂದ್ರಹಾಸಕಥಾ' ಎಂಬ ಕನ್ನಡ ನಾಟಕವನ್ನು, ಹಲವಾರು ಹರಿಕಥಾ ಗೀತೆಗಳನ್ನು, ಕೊಡವ ಹಾಡುಗಳನ್ನು ಇವರು ಬರೆದಿದ್ದಾರೆ. ತಮ್ಮ ಸಂಸ್ಕೃತಿಯ ಬಗೆಗಿನ ವೈಭವೀಕರಣ ಹಾಗೂ ಇಂಗ್ಲಿಷ್ ಶಿಕ್ಷಣ ಪದ್ಧತಿಗೆ ವಸಾಹತುಶಾಹಿ ಸಂದರ್ಭಕ್ಕೆ ಪ್ರತಿರೋಧವನ್ನು ಒಡ್ಡುವ ನಿಟ್ಟಿನಲ್ಲಿ ಕೊಡವ ಭಾಷೆಯಲ್ಲಿ ಸಾಹಿತ್ಯದ ಆರಂಭವನ್ನು ಕಾಣುತ್ತೇವೆ.

ಕೊಡವರಲ್ಲಿ ಹಲವಾರು ವಿಶಿಷ್ಟವಾದ ನಂಬಿಕೆ, ಆಚರಣೆ, ಸಂಪ್ರದಾಯಗಳಿವೆ. ಇವುಗಳನ್ನು ಜೀವನಾವರ್ತನದ ಆಚರಣೆಗಳು ವಾರ್ಷಿಕಾವರ್ತನದ ಆಚರಣೆಗಳೆಂದು ವಿಭಾಗಿಸಿ ಗಮನಿಸಬಹುದು. ಜೀವನಾವರ್ತನದ ಆಚರಣೆಗಳಾಗಿ ಮಗುವಿನ ಜನನದ ಆಚರಣೆ, ನಾಮಕರಣ, ಮದುವೆ, ಸಾವು ಇಂತಹ ಸಂದರ್ಭಗಳಲ್ಲಿನ ಆಚರಣೆಗಳನ್ನು ಒಳಗೊಂಡರೆ ವಾರ್ಷಿಕಾವರ್ತನದಲ್ಲಿ ಕೊಡವರ ಪ್ರಮುಖ ಹಬ್ಬಗಳಾದ ಕೈಲ್ ಮುಹೂರ್ತ, ಕಾವೇರಿ ಸಂಕ್ರಮಣ, ಹುತ್ತರಿ ಮೊದಲಾದವು ಹಾಗೂ ವರ್ಷದ ಅವಧಿಯಲ್ಲಿ ಬರುವ ಜಾತ್ರೆ, ಉತ್ಸವಗಳ ಆಚರಣೆಗಳು ಸೇರಿಕೊಳ್ಳುತ್ತವೆ.

ವೀರಪರಂಪರೆಗೆ ದ್ಯೋತಕವೆನ್ನುವಂತೆ ಗಂಡು ಮಗು ಜನಿಸಿದಾಗ ಕೋವಿಯಿಂದ ಆಕಾಶದ ಕಡೆಗೆ ಒಂದು ಗುಂಡು ಹಾರಿಸಿದರೆ, ಸಾವು ಸಂಭವಿಸಿದಾಗ ಜೋಡಿ ಗುಂಡುಗಳನ್ನು ಹಾರಿಸುವ ಸಂಪ್ರದಾಯವಿದೆ. ಕೊಡವರ ಬದುಕಿನ ಜೀವನಾವರ್ತನ ಹಾಗೂ ವಾರ್ಷಿಕಾವರ್ತನದ ಆಚರಣೆಗಳಿಗೆ ಸಂಬಂಧಿಸಿದಂತೆ ಇರುವ ಹಾಡುಗಳು ತಲೆಮಾರಿನಿಂದ ತಲೆಮಾರಿಗೆ ಕೆಲವೊಂದು ಬದಲಾವಣೆಗಳೊಂದಿಗೆ ಮುಂದುವರೆಯುತ್ತಾ ಬಂದಿವೆ. ಇದಕ್ಕೆ ಸಂಬಂಧಿಸಿದ ಸಾಹಿತ್ಯದ ಸಂಗ್ರಹವನ್ನು ನಡಿಕೇರಿಯಂಡ ಚಿಣ್ಣಪ್ಪನವರು 'ಪಟ್ಟೋಲೆಪಳಮೆ' ಎಂಬ ಕೃತಿಯಲ್ಲಿ ಸಂಪಾದಿಸಿದ್ದು ೧೯೨೪ ಕ್ಕೆ ಪ್ರಕಟಿಸಿದ್ದಾರೆ. ಕರ್ನಾಟಕ ಜಾನಪದ ಅಧ್ಯಯನದ ಸಂದರ್ಭದಲ್ಲಿ 'ಹುಟ್ಟಿದಹಳ್ಳಿ ಹಳ್ಳಿಯ ಹಾಡು' ಕೃತಿ ೧೯೩೪ ಕ್ಕೆ ಬಂದಿದ್ದರೆ, 'ಪಟ್ಟೋಲೆಪಳಮೆ' ಯು ಒಂದು ದಶಕ ಮುಂಚಿತವಾಗಿಯೇ ಪ್ರಕಟವಾಗಿ ಕನ್ನಡ ಜಾನಪದ ಸಂಗ್ರಹಗಳ ಆಚಾರ್ಯ ಕೃತಿಯೆನಿಸಿದೆ.

## ೨.೨ ಪೌರಾಣಿಕ ಉಲ್ಲೇಖ :

ಕೊಡಗು/ಕೊಡವರ ಮೂಲದ ಚರಿತ್ರೆಯ ಕುರಿತಂತೆ ಐತಿಹ್ಯಗಳು, ಪುರಾಣಗಳೂ ಇವೆ. ಸ್ಕಂದ ಪುರಾಣದ (೧೧ ರಿಂದ ೧೪ನೆಯ ಅಧ್ಯಾಯದ) ಭಾಗವೆನ್ನಲಾದ 'ಕಾವೇರಿ ಮಹಾತ್ಮೆ' ಯಲ್ಲಿ ಕೊಡಗಿನ, ಕೊಡವರ ವಿಚಾರವಾಗಿ ಹಲವಾರು ಉಲ್ಲೇಖಗಳಿವೆ. ಕಾವೇರಿ ನದಿಯ ಉದ್ಭವದ ಜೊತೆಗೆ ಕೊಡಗಿನ ಪೂರ್ವದ ಹೆಸರುಗಳು ಹೇಗೆ ಬಂದವು ಎಂಬುದರ ಕುರಿತು, ಕೊಡವರ ಹುಟ್ಟು, ಆಚರಣೆಗಳು ಮುಂತಾದ ವಿವರಗಳು ಬಂದಿವೆ.

"ಬ್ರಹ್ಮಗಿರಿವಾಸಿಯಾದ ಕವೇರ ಮುನಿಯು ಬ್ರಹ್ಮನ ಮಗಳಾದ ಲೋಪಾಮುದ್ರೆಯನ್ನು ತನ್ನ ಮಗಳಾಗಿ ಸ್ವೀಕರಿಸಿ, ತನ್ನ ಈ ದತ್ತುಪುತ್ರಿಯನ್ನು ಅಗಸ್ತ್ಯ ಮುನಿಗೆ ಮದುವೆ ಮಾಡಿಕೊಟ್ಟನು. ಎಂದಿಗೂ ತನ್ನನ್ನೂ ಬಿಟ್ಟಿರಬಾರದೆಂಬ ಷರತ್ತನ್ನು ಕಾವೇರಿಯು ಅಗಸ್ತ್ಯನಿಗೆ ವಿವಾಹಪೂರ್ವದಲ್ಲಿ ಹಾಕಿದ್ದಳು. ಆದರೆ ಒಮ್ಮೆ ತನ್ನ ಪತ್ನಿಯನ್ನು ಕಮಂಡಲುವಿನಲ್ಲಿ ಆವಾಹಿಸಿ ಅಗಸ್ತ್ಯನು ಸ್ನಾನಕ್ಕೆ ಹೋಗಿರಲು ಕಾವೇರಿಯು ಕಮಂಡಲುವಿನಿಂದ ಹೊರಬಂದು ತಲಕಾವೇರಿಯಲ್ಲಿನ ಚಿಕ್ಕ ಕುಂಡಿಕೆಯಿಂದ ನದೀ ರೂಪದಲ್ಲಿ ಪ್ರವಹಿಸಲು ಆರಂಬಿಸಿದಳು"[೬]

ಈ ಸಂದರ್ಭದಲ್ಲಿ "ಕೊಡಗಿನಲ್ಲಿ ಅರಸನಾಗಿದ್ದ ಚಂದ್ರವರ್ಮ ರಾಜನು ತನಗೆ ಬಿದ್ದ ಕನಸಿನನ್ವಯ ಜನರನ್ನು ಕೂಡಿಕೊಂಡು ಕಾವೇರಿಯನ್ನು 'ಬಲಮುರಿ' ಕ್ಷೇತ್ರದಲ್ಲಿ ತಡೆದು ಪೂಜೆ ಸಲ್ಲಿಸುತ್ತಾನೆ. ಸ್ನಾನ ಮಾಡುತ್ತಿದ್ದಾಗ ನೀರಿನ ಸೆಳೆತಕ್ಕೊಳಗಾದ ಸ್ತ್ರೀಯರ ಸೀರೆಯ ನಿರಿಗೆ ಹಿಂದಕ್ಕಾಯಿತು. ಇದರಿಂದಾಗಿ ಕೊಡವ ಮಹಿಳೆಯರು ಸೀರೆಯ ನಿರಿಗೆಯನ್ನು ಹಿಂದಕ್ಕಿಟ್ಟು ವಿಶಿಷ್ಟ ರೀತಿಯಲ್ಲಿ ಸೀರೆಯುಡುವ ಕ್ರಮ ಆರಂಭವಾಯಿತು."[೭] ಕೊಡಗಿನ ದೊರೆ ಚಂದ್ರವರ್ಮನ ತಪಸ್ಸಿಗೆ ಮೆಚ್ಚಿದ ಕಾವೇರಿ ತಾನು ಕೊಡಗಿನಲ್ಲಿ ನದಿಯಾಗಿ ಹರಿಯುತ್ತೇನೆಂದು ವರವನ್ನು ನೀಡುತ್ತಾಳೆ. ಕೊಡವರಲ್ಲಿ ರೂಢಿಯಲ್ಲಿರುವ ಗಾಂಧರ್ವ ರೀತಿಯ ವಿವಾಹ ಪದ್ಧತಿಗೆ ಚಂದ್ರವರ್ಮ ರಾಜನು ಗಂಧರ್ವ ಸ್ತ್ರೀಯರನ್ನು ಮದುವೆಯಾದದ್ದೇ ಕಾರಣವೆನ್ನಲಾಗಿದೆ. ಮಹಾಕಾಳಿಯ ಅವತಾರವೆತ್ತಿದ್ದ ಪಾರ್ವತಿದೇವಿಯು ಚಂದ್ರವರ್ಮ ರಾಜನಿಗೆ ಚಂದ್ರಾಯುಧವನ್ನು ಕೊಟ್ಟಳು. ಇದರ ಸಂಕೇತವಾಗಿ ಕೊಡವರು ಸಾಂಪ್ರದಾಯಿಕ ಉಡುಗೆಯನ್ನು ಹಾಕುವ ಸಂದರ್ಭದಲ್ಲಿ ಗಂಡಸರು ಸೊಂಟದಲ್ಲಿ 'ಪೀಚೆಕತ್ತಿ' ಎಂಬ ಕತ್ತಿಯನ್ನು ಶೌರ್ಯದ ಸಂಕೇತವಾಗಿ ಸಿಕ್ಕಿಸಿಕೊಳ್ಳುತ್ತಾರೆಂಬ ಉಲ್ಲೇಖ ಬರುತ್ತದೆ.

ಕಾವೇರಿ ಪುರಾಣದ ಪ್ರಸ್ತುತತೆ ಕುರಿತಂತೆ ಪಾಶ್ಚಾತ್ಯ ವಿದ್ವಾಂಸರಲ್ಲೇ ಭಿನ್ನಾಭಿಪ್ರಾಯಗಳಿತ್ತು. "ಕೊಡಗಿನಲ್ಲಿ ೧೮೭೦ರ ಸುಮಾರಿಗೆ ಸೂಪರಿಟೆಂಡೆಂಟ್ ಆಗಿದ್ದ ಮಿ. ರಾಬ್‌ಕೋಲ್ ರವರು ಕಾವೇರಿ ಪುರಾಣವನ್ನು ಒಪ್ಪುವುದಿಲ್ಲ. ಅದು ಆಸಕ್ತ ಬ್ರಾಹ್ಮಣದ ಸ್ವಕಪೋಲಕಲ್ಪಿತ ಕತೆ ಎಂದು ಹೇಳುತ್ತಾರೆ"[೮]

## ೨.೩ ಇತಿಹಾಸ ಪೂರ್ವಕಾಲ :

"ಇತಿಹಾಸಪೂರ್ವಕಾಲಕ್ಕೆ ಬಂದಾಗ ಕೊಡಗಿನಲ್ಲಿ ಬೃಹತ್ ಶಿಲಾಯುಗದ ಜನರ ವಸತಿಗಳಿದ್ದುದು ಕಾಣ ಬರುತ್ತದೆ. ಪಾಂಡವರ ಪಾರೆ, ಪಾಂಡವರ ಮನೆಗಳೆಂದು ಪರಿಚಿತವಾದ ಕಲ್ಲು ಚಪ್ಪಡಿಗಳಿಂದ ಮಾಡಲಾದ 'ಡಾಲ್‌ಮೆನ್' ಸ್ಮಾರಕಗಳು ಹಲವಾರು ಕಡೆ ಕಂಡು ಬರುತ್ತವೆ. ನವ ಶಿಲಾಯುಗ ಅಥವಾ ಅದಕ್ಕೂ ಹಿಂದಿನ ಜನರ ವಸತಿಯ ಲಕ್ಷಣಗಳು ಇಲ್ಲಿ ಅಷ್ಟೊಂದು ಕಂಡುಬಂದಿಲ್ಲ. ಈ ಕಲ್ಲಗೋರಿಗಳನ್ನು ಡಾ. ಮೋಗ್ಲಿಂಗ್ ೧೮೫೬ ರಲ್ಲಿ ಅರಮೇರಿ ಗ್ರಾಮದ (ವಿರಾಜಪೇಟೆ ತಾಲ್ಲೂಕು) ಅಳಮಂಡ ಮನೆಯ ಬಳಿ ಮೊದಲು ಪತ್ತೆ ಹಚ್ಚಿದರು. ಕರ್ನಲ್ ಮೆಕಂಜಿ ವೀರರಾಜಪೇಟೆಯ ಪಶ್ಚಿಮ ಭಾಗದಲ್ಲಿ ೧೮೬೬ ರಲ್ಲಿ ಅವನ್ನು ಪತ್ತೆ ಮಾಡಿದರು. ಕ್ಯಾಪ್ಟನ್ ಕೋಲ್ ೧೮೯೯ ರಲ್ಲಿ ನಾಲ್ಕು ಭೂಗತ ಕಲ್ಲ ಗೋರಿಗಳನ್ನು ಉತ್ಖನನ ಮಾಡಿದರು. ಇವು ಕುಶಾಲನಗರದ ಸಮೀಪದಲ್ಲಿದೆ"[೯] ಕೊಡಗಿನ ಬೃಹತ್ ಶಿಲಾಯುಗದ ಬಗ್ಗೆ ವಿಶೇಷ ಅಧ್ಯಯನ ಮಾಡಿದ ಕೆ.ಕೆ. ಸುಬ್ಬಯ್ಯನವರು ಈ ಯುಗದ ಜನ ಕೃಷಿಕರಾಗಿದ್ದು ನೀರಾವರಿ ಅವರಿಗೆ ತಿಳಿದಿತ್ತು. ಮೋರಿ ಬೆಟ್ಟದ ಕೆಳಗಿನ ಬಯಲಲ್ಲಿ ಅವರು ಕೃಷಿ ಮಾಡುತ್ತಿದ್ದರು. ಅಲ್ಲಿ ಈಗಲೂ ಒಂದು ಜಲಾಶಯವಿದೆ. ಇತಿಹಾಸಪ್ರಸಿದ್ಧ ಹೊನ್ನಮ್ಮಕೆರೆಯ ಪ್ರದೇಶದಲ್ಲಿ ಅವರು ರಾಗಿ, ಬತ್ತ ಬೆಳೆದು ಮಣ್ಣಿನ ಮಡಕೆಗಳಲ್ಲಿ ಸಂಗ್ರಹಿಸಿ ಕಲ್ಲು ಗೋರಿಗಳಲ್ಲಿ ಇಡುತ್ತಿದ್ದರು. ಸುಮಾರು ಕ್ರಿ.ಪೂ. ೧೦೦೦ ದಿಂದ ಕ್ರಿ.ಶ. ೨-೩ನೆಯ ಶತಮಾನದವರೆಗಿನ ಕಾಲಖಂಡದಲ್ಲಿ ಮೆರೆದ ಈ ಸಂಸ್ಕೃತಿಯ ಜನ ಕುರುಬ ವರ್ಗದವರಿರಬೇಕು. ದುರ್ಗಮವಾದ ಈ ಪ್ರದೇಶಕ್ಕೆ ಅವರು ವೈನಾಡು (ಕೇರಳ)ದ ಕಡೆಯಿಂದ ಹೆಗ್ಗಳ ಕಣಿವೆ (ವಿರಾಜಪೇಟೆಯ ಸಮೀಪ) ಯ ಮೂಲಕ ಬಂದಿರಬೇಕೆಂದು ಅಭಿಪ್ರಾಯಪಡುತ್ತಾರೆ.

## ೨.೪ ಇತಿಹಾಸ ಕಾಲ :

ಕ್ರಿ.ಶ. ಆರಂಭದ ಕಾಲಘಟ್ಟದಲ್ಲಿ ಕೊಡಗನ್ನು ಕದಂಬ ಅರಸರು ಆಳುತ್ತಿದ್ದರೆಂದೂ, ಕೊಡವರ ಮೂಲ ಪುರುಷನೆಂದು ಗುರುತಿಸಲಾಗುವ ಚಂದ್ರವರ್ಮನ ಹೆಸರು ಕ್ರಿಸ್ತಪೂರ್ವ ಎರಡನೆಯ ಶತಮಾನದಿಂದ ಕ್ರಿಸ್ತಶಕ ಆರನೆಯ ಶತಮಾನದವರೆಗೆ ಆಳಿದ ಕದಂಬ ವಂಶದ ರಾಜರಲ್ಲಿ ಅನೇಕರಿಗಿದೆ ಎಂದು ಚರಿತ್ರೆಕಾರರು ಅಭಿಪ್ರಾಯಪಡುತ್ತಾರೆ. ಕ್ರಿ.ಶ. ೧೯೫ ರಲ್ಲಿ ಕೊಡಗಿನ ಯಡವನಾಡು (ಉತ್ತರ ಕೊಡಗು) ನಲ್ಲಿ ದೊರೆತ ಕದಂಬ ದುದ್ದರಸನ ನೆನಪಿಗಾಗಿ ಇಡಲ್ಪಟ್ಟ ವೀರಶಾಸನವು ಕೊಡಗಿನಲ್ಲಿ ಕದಂಬರ ಆಳ್ವಿಕೆಯನ್ನು ದೃಢಪಡಿಸುತ್ತದೆ. ಕ್ರಿ.ಶ. ಎರಡನೆಯ ಶತಮಾನದಲ್ಲಿ ಪಾಂಡ್ಯರಾಜ ವಂಶದ ನೆಡುಂಚೆಳಿಯನ್ ಎಂಬ ರಾಜನು ಚೋಳ ಮತ್ತು ಪಶ್ಚಿಮದ ಚೇರ (ಈಗಿನ ಕೇರಳ) ರಾಜರುಗಳನ್ನು ಸೋಲಿಸಿ ಅವರ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿದ್ದನು. ತಮಿಳಿನ ಸಂಘಂ

ಸಾಹಿತ್ಯದಲ್ಲಿ ಉಲ್ಲೇಖವಾಗಿರುವ ತಮಿಳರ ರಾಜ್ಯದ ವಿಸ್ತಾರವನ್ನು ಹೇಳುವ ಸಂದರ್ಭದಲ್ಲಿ ಕೊಡಗು ಬಂದಿದೆ. "ತಮಿಳು ರಾಜ್ಯವು ಒಂದು ಕಡೆ ಕೊಡಗಿನಿಂದ ಬಂಗಾಳಕೊಲ್ಲಿಯವರೆಗೂ ಇನ್ನೊಂದೆಡೆ ಕನ್ಯಾಕುಮಾರಿಯಿಂದ ತಿರುಪತಿಯವರೆಗೂ ಇದೆ"[೧೦].

ಕ್ರಿ.ಶ.೮೮೮ ರಲ್ಲಿ ದೊರೆತ ಶಾಸನವು ಕೊಡಗಿನಲ್ಲಿ ಗಂಗರ ಆಳ್ವಿಕೆಯನ್ನು ದೃಢಪಡಿಸುತ್ತದೆ. ಇದೊಂದು ದಾನ ಶಾಸನವಾಗಿದೆ. ಸುಮಾರು ಹತ್ತನೆಯ ಶತಮಾನದಿಂದ ಹದಿಮೂರನೆಯ ಶತಮಾನದವರೆಗೆ ಚೆಂಗಾಳ್ವರು ಕೊಡಗನ್ನು ಆಳುತ್ತಿದ್ದುದಾಗಿ ತಿಳಿದು ಬರುತ್ತದೆ. ಕ್ರಿ.ಶ. ೧೧೭ ರ ಕಾಲಕ್ಕೆ ಹೊಯ್ಸಳ ದೊರೆ ಮೊದಲನೆಯ ನರಸಿಂಹನ ಮಗ ಬಲ್ಲಾಳನಿಗೆ ಚೆಂಗಾಳ್ವರೂ, ಕೊಂಗಾಳ್ವರೂ ಕಪ್ಪ ಕಾಣಿಕೆಗಳನ್ನು ಕೊಟ್ಟು ಗೌರವ ಸೂಚಿಸಿದರು. ೧೧೭೧ ರಲ್ಲಿ ಪಟ್ಟಕ್ಕೆ ಬಂದ ಬಲ್ಲಾಳನು ಚೆಂಗಾಳ್ವರ ಹುಟ್ಟನ್ನು ಅಡಗಿಸುವುದಕ್ಕೋಸ್ಕರ ತನ್ನ ದಂಡನಾಯಕ ಬೆಟ್ಟರಸನನ್ನು ಸೈನ್ಯ ಸಮೇತನಾಗಿ ಯುದ್ಧಕ್ಕೆ ಕಳುಹಿಸಿದಾಗ 'ಪಾಲ್ಪರೆ' ಎಂಬ ಸ್ಥಳದಲ್ಲಿ ಚೆಂಗಾಳ್ವ ಮಹಾದೇವನ ಮಗ ಪೆಮ್ಮವೀರಪ್ಪನು ಕುರುಚಿಯ ಉದಯಾದಿತ್ಯದೇವ ಮತ್ತಿತರರು ಹಾಗೂ 'ಎಲ್ಲಾ ನಾಡಿನ ಕೊಡಗರು' ಇವರ ಸಹಾಯವನ್ನು ಪಡೆದು ಬೆಟ್ಟರಸನ ಮೇಲೆ ಯುದ್ಧ ಮಾಡಿದನು. ಇಲ್ಲಿ ಮೊದಲ ಬಾರಿಗೆ 'ಕೊಡಗರು' ಎಂಬ ಒಂದು ಕೋಮಿನವರ ಉಲ್ಲೇಖ ಬರುತ್ತದೆ. ಆದರೆ ಈ ಪದವನ್ನು ಒಂದು ಜಾತಿಯ ಜನರ ಕುರಿತು ಬರೆದಿದ್ದಾರೋ ಅಥವಾ ಕೊಡಗಿನ ಜನರನ್ನು ಕುರಿತು ಬರೆದಿದ್ದಾರೋ ತಿಳಿಯುವುದಿಲ್ಲ. ಆದರೆ ರೈಸ್ ಬರೆದ ಕೊಡಗು ಶಾಸನಗಳಿಂದ ಸಂಗ್ರಹಿಸಿದ ಮೈಸೂರು ಮತ್ತು ಕೊಡಗಿನ ಚರಿತ್ರೆಯಲ್ಲಿ ಮಾದೇಯನಾಯ್ಕ, ಕೆಲವು ನಾಯಕರ ಹೆಸರುಗಳು ಬರುತ್ತವೆ. ಈ ಶಾಸನದಲ್ಲಿ "ಎಲ್ಲಾ ನಾಡ ಕೊಡಗರು ಬೆಟ್ಟರಸನೊಡನೆ ಯುದ್ಧ ಮಾಡಿದುದರ ಪರಿಣಾಮವಾಗಿ ಆ ದೊಡ್ಡ ಪಾಲ್ಪರೆಯ ಯುದ್ಧದಲ್ಲಿ ಮಡಿದ ಮಾದೆಯನಾಯಕ ಮತ್ತು ಅವರ ಮಕ್ಕಳು ಮಾದಪ್ಪ ಮತ್ತು ಮಲ್ಲಪ್ಪ ಇವರ ಮಕ್ಕಳಿಗೆ ಹೊಂಗೆಯನ ಹಳ್ಳಿಯನ್ನು ಪಾಲ್ಪರೆಯ ಒಂದು ಹಳ್ಳಿಯನ್ನು ಬೆಟ್ಟರಸನು ಸೂರ್ಯ ಚಂದ್ರ ಇರುವವರೆಗೆ ನೆತ್ತರು ಕೊಡುಗೆಯಾಗಿ (ಅಂದರೆ ರಕ್ತ ಸುರಿಸಿದವರಿಗೆ ಬಹುಮಾನವಾಗಿ ಕೊಡುವ ಭೂಮಿಯಾಗಿ) ಕೊಟ್ಟನು."[೧೧]

"ಹದಿನಾಲ್ಕನೆಯ ಶತಮಾನದಲ್ಲಿ ಕೊಡಗಿನ ಕೆಲವು ಭಾಗಗಳನ್ನು ಸಣ್ಣ-ಪುಟ್ಟ ನಾಯಕರು ಆಳುತ್ತಿದ್ದರೆಂದು ತಿಳಿದು ಬಂದಿದೆ. ಹೊಯ್ಸಳರ ಪತನದ ಸಮಯದಲ್ಲಿ ಮೈಸೂರಿನ ಗುಂಡ್ಲುಪೇಟೆ ತಾಲ್ಲೂಕಿನ ನವದನ್ನಾಯಕರು (ದಂಡನಾಯಕರು) ಆಳುತ್ತಿದ್ದರೆಂದು ಚರಿತ್ರೆಯಿಂದ ತಿಳಿಯುತ್ತದೆ. ಅವರಲ್ಲಿ ಮಾದವ ದನ್ನಾಯಕನೆಂಬುವವನು ಗುಂಡ್ಲುಪೇಟೆ ತಾಲ್ಲೂಕಿನ ತೆಂಕಣಾಂಬಿಯನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡಿದ್ದನು. ತೆಂಕಣಾಂಬಿ ನಾಡನ್ನು ಕುಡುಗುನಾಡು ಎಂದು ಕರೆದಿರುವುದನ್ನು ಗುಂಡ್ಲುಪೇಟೆಯ ೧೧ನೆಯ ಶಾಸನದಲ್ಲಿ ಕಾಣಬಹುದು. ಕೊಡಗಿನ ಶ್ರೀಮಂಗಲ ನಾಡನ್ನು ಇವರು ಆಳುತ್ತಿದ್ದುದೇ ಹೀಗೆ ಕರೆಯಲು ಕಾರಣವೆಂದು ತೋರುತ್ತದೆ."[೧೨]

ಕೊಡಗಿನಲ್ಲಿ ಈವರೆಗೆ ಬೆಳಕಿಗೆ ಬಂದಿರುವ ೧೦೬ ಶಾಸನಗಳಲ್ಲಿ ಎರಡು ತಮಿಳಿನಲ್ಲಿವೆ. ಗಂಗರ ಕಾಲದಲ್ಲೇ ಕೊಡವ ಜನಾಂಗದ ಜನರು ಬುಡಕಟ್ಟು ಜನಗಳಾಗಿ ಕೊಡಗಿನಲ್ಲಿ ವಾಸವಿದ್ದರು. ೧೧೭೫ ರ ಪೆಮ್ಮವೀರಪ್ಪನ ಶಾಸನದಲ್ಲೂ ಕೊಡವರ ಉಲ್ಲೇಖವಿದೆ. ಚೆಂಗಾಳ್ವರ ನಂತರದಲ್ಲಿ ಹದಿನಾಲ್ಕನೆಯ ಶತಮಾನದ ಕೊನೆಯ ಭಾಗದಲ್ಲಿ ಕೊಡಗು ಪಾಳೆಯಗಾರರ ಆಳ್ವಿಕೆಯಲ್ಲಿತ್ತು. ಈ ಪಾಳೆಯಗಾರರಲ್ಲಿ ಕೆಲವರ ಬಗೆಗೆ ಚರಿತ್ರೆಯಲ್ಲಿ ಉಲ್ಲೇಖಗಳಿವೆ. ಅವರಲ್ಲಿ ಕಿಗ್ಗಟ್ಟು ನಾಡಿನ ಅಂಜಿಗೇರಿ ನಾಡಿನ ಅಚ್ಚುನಾಯಕನು ತಾವು ನಾಡಿನ ಕರ್ಣಿಂಬಾಹುವೂ ಪ್ರಸಿದ್ದರು. ಈ ಪಾಳೆಯಗಾರರ ನಡುವೆ ಅಂತಃಕಲಹಗಳು ಬಂದ ಕಾರಣದಿಂದ ಅವರ ಆಳ್ವಿಕೆ ಕೊನೆಗೊಂಡಿತು. ೧೬೦೦ ರಿಂದ ೧೮೩೪ ರವರೆಗೆ ಹಾಲೇರಿ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಈ ನಡುವೆ ೧೭೮೦ ರಿಂದ ೧೭೮೯ ರವರೆಗೆ ಮೈಸೂರಿನ ಹೈದರಾಲಿ ಹಾಗೂ ಟಿಪ್ಪುವಿನ ವಶದಲ್ಲಿತ್ತು. ಅನಂತರದಲ್ಲಿ ೧೮೩೪ ರಿಂದ ೧೯೪೭ ರವರೆಗೆ ಬ್ರಿಟಿಷರ ವಶವಾಯಿತು. ಸ್ವಾತಂತ್ರ್ಯಾನಂತರದಲ್ಲಿ ೧೯೫೧ ರಲ್ಲಿ ಕೊಡಗು 'ಸಿ ರಾಜ್ಯ' ವಾಯಿತು.

ಆಧುನಿಕ ಪೂರ್ವ ಕಾಲಘಟ್ಟದಲ್ಲಿ ಪ್ರಾಚೀನ ಸಾಹಿತ್ಯವಾಗಿ ಯಾವುದೇ ಲಿಖಿತ ದಾಖಲೆಗಳು ದೊರಕುವುದಿಲ್ಲ. ಆದರೆ ಕಾಲಘಟ್ಟದಲ್ಲಿ ಕೊಡಗಿನ ಅರಸರ ಆಸ್ಥಾನದಲ್ಲಿದ್ದು ಕೃತಿ ರಚಿಸಿದ ಕವಿಗಳು, ಕೊಡಗಿನ ಕೊಡವರ ಕುರಿತಾಗಿ ಕೆಲವಾರು ವಿವರಗಳನ್ನು ತಮ್ಮ ಕೃತಿಗಳಲ್ಲಿ ನೀಡಿದ್ದಾರೆ. ಇವೆಲ್ಲವೂ ಕನ್ನಡದಲ್ಲಿವೆ.

ಹದಿನೇಳನೆಯ ಶತಮಾನದ ಪ್ರಾರಂಭದಲ್ಲಿದ್ದ ಗೋವಿಂದ ವೈದ್ಯ ಕವಿಯ (೧೬೪೮) 'ಕಂಠೀರವ ನರಸರಾಜ ವಿಜಯ'ವು ಸಾಹಿತ್ಯದಲ್ಲಿ ಕೊಡಗು ಸ್ಪಷ್ಟವಾಗಿ ಮೂಡಿದ ಮೊದಲ ಕನ್ನಡ ಕಾವ್ಯವಾಗಿದೆ. ಕಾವೇರಿಯ ಜನ್ಮಸ್ಥಾನದ ಕುರಿತಾಗಿ ಇಲ್ಲಿ ವರ್ಣನೆ ಬರುತ್ತದೆ. ಕೊಡಗಿನ ಪಾಲ್ಪರೆ ಕೋಟೆ, ಅದರೊಂದಿಗೆ ದಡ್ಡ ಕಾಡಿನ ಚಿತ್ರಣವೂ ಇಲ್ಲಿ ಮೂಡಿಬಂದಿದೆ. ಮಹಾನವಮಿಯ ಪುರಶೃಂಗಾರವನ್ನು ವರ್ಣಿಸುವ ಸಂದರ್ಭದಲ್ಲಿ ಕೊಡವ ಸಾಂಪ್ರದಾಯಿಕ ಉಡುಪನ್ನು ಧರಿಸಿದ ಕೊಡವ ಗಂಡಸರ, ಹೆಂಗಸರ ವಿವರಗಳಿವೆ. ರಾಜೇಂದ್ರ ನಾಮೆಯಲ್ಲಿ ಸಾಹಿತ್ಯಕ ಅಂಶಗಳಿಲ್ಲದಿದ್ದರೂ ದೊಡ್ಡವೀರ ರಾಜನು ಆನೆ ಬೇಟೆಯಾಡಿದ ವಿವರಗಳು ಇಲ್ಲಿ ಬರುತ್ತವೆ.

## ೨.೫ ಜಾನಪದ ಉಲ್ಲೇಖಗಳು :

ಕೊಡಗಿನ ಜಾನಪದ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಮೊದಲು ಕೆಲಸ ಮಾಡಿದವರು ಪಾಶ್ಚಾತ್ಯ ವಿದ್ವಾಂಸರು, ಹಬ್ಬಗಳು, ಆಚರಣೆಗಳು, ವಿವಾಹಾದಿ ಶುಭಕಾರ್ಯಗಳು, ಜನನ-ಮರಣ ಸಂದರ್ಭಗಳು, ತಿಥಿ-ಕರ್ಮಾಂತರಗಳು ಮೊದಲಾದ ಸನ್ನಿವೇಶಗಳಲ್ಲಿ ಹಾಡುವ ಹಾಡುಗಳು,

ಮುಖ್ಯವಾಗಿ ಕೊಡವರ ವಿಶಿಷ್ಟ ಸಂಸ್ಕೃತಿಯನ್ನು ಮತ್ತು ಅವರ ಪೂರ್ವಜರ ಮನೋಧರ್ಮ, ಅಭಿರುಚಿ, ಇತ್ಯಾದಿಗಳನ್ನು ಸಹಜವಾಗಿ ಮತ್ತು ಪರಿಣಾಮಕಾರಿಯಾಗಿ ವ್ಯಕ್ತಪಡಿಸುತ್ತವೆ. ಕೊಡಗಿನ ಸಾಂಸ್ಕೃತಿಕ ಒಳನೋಟಗಳನ್ನು ಪರಿಚಯಿಸುವ ಕೊಡವ ಜನಪದ ಸಾಹಿತ್ಯ ಪ್ರಕಾರದಲ್ಲಿ ದುಡಿಕೊಟ್ಟ್‌ಪಾಟ್ ಮುಖ್ಯವಾಗಿದ್ದು, ಇದರಲ್ಲಿ ಬಾಳೋಪಾಟ್, ಮಂಗಲಪಾಟ್, ದೇವರಪಾಟ್, ಬೆಂದುಪಾಟ್, ಮನೆಪಾಟ್, ಚಾವುಪಾಟ್, ಪೊಲಚಿಪಾಟ್, ಬಟ್ಟೆಪಾಟ್, ಬೋಡ್‌ಪಾಟ್, ಪುತ್ತರಿಪಾಟ್, ಕೋಲಾಟ್‌ಪಾಟ್, ಜೋಯಿಪಾಟ್ ಇತ್ಯಾದಿಗಳು ಆಯಾಯ ಸಂದರ್ಭಗಳಲ್ಲಿ ಹಾಡಲ್ಪಡುತ್ತವೆ. ಪ್ರಮುಖ ಹಬ್ಬಗಳಾದ ಕೈಲ್‌ಪೋಳ್ದ್, ಕಾವೇರಿ ಸಂಕ್ರಮಣ ಹಾಗೂ ಹುತ್ತರಿಯ ಸಂದರ್ಭದಲ್ಲಿ ಹಲವಾರು ಪ್ರಮುಖ ಹಾಡುಗಳನ್ನು ಹಾಡಲಾಗುತ್ತದೆ. ನಡಿಕೇರಿಯಂಡ ಚಿಣ್ಣಪ್ಪನವರು ಸಂಗ್ರಹಿಸಿದ 'ಪಟ್ಟೋಲೆ ಪಳಮೆ'ಯಲ್ಲಿ ಈ ಕುರಿತ ಬಹುಮಟ್ಟಿಗಿನ ಸಾಹಿತ್ಯ ದಾಖಲಾಗಿದೆ.

ಕಾವೇರಿ ಮಹಾತ್ಮೆ, ಇಕ್ಕೇರಿ ಅರಸು ಮನೆತನವನ್ನು ಕುರಿತ ಹಾಡುಗಳು, ಆಂಗ್ಲರ ಆಳ್ವಿಕೆಯನ್ನು ಕುರಿತ ಪದಗಳು, ಲಾಲಿ ಪದಗಳು, ಹುತ್ತರಿಯ ಹಾಡುಗಳು, ಬೇಸಾಯದ ಹಾಡುಗಳು, ಸ್ಥಳೀಯ ದೇವತೆಗಳನ್ನು ಕುರಿತ ಹಾಡುಗಳು, ಕೊಡವ ಮನೆತನದ ಮೂಲ ಪುರುಷರ ಪದಗಳು, ಮದುವೆ ಹಾಡುಗಳು, ಹೀಗೆ ವೈವಿಧ್ಯಮಯ ಹಾಡುಗಳು ಕೊಡವ ಜಾನಪದ ಪರಂಪರೆಯಲ್ಲಿವೆ. 'ಕಚ್ಚಿದುಡಿ' ಎಂಬ ಕಿರಿಯ ಡೋಲನ್ನು ಬಾರಿಸುತ್ತಾ ಸಾಮೂಹಿಕವಾಗಿ ಗೀತೆಗಳನ್ನು ಹಾಡುವುದು ವಾಡಿಕೆ. ಕೊಡವರ ಮೂಲವನ್ನು ಕುರಿತ ಹಾಡೊಂದರಲ್ಲಿ ಅವರು ಪಾಂಡವರ ವಂಶಕ್ಕೆ ಸೇರಿದ ಕ್ಷತ್ರಿಯರೆಂದು ಹೇಳಲಾಗುತ್ತದೆ.

ಕೊಡವರಲ್ಲಿ ಮದುವೆಯ ಪದ್ಧತಿಯೂ ವಿಶಿಷ್ಟವಾಗಿದೆ. ಗಂಡು, ಹೆಣ್ಣಿನ ವಿವಾಹ ಸಂಬಂಧಶಾಸ್ತ್ರಗಳು ಅವರವರ ಮನೆಗಳಲ್ಲಿಯೇ ಮೊದಲು ನಡೆದು ಗಂಡು ಹೆಣ್ಣಿನ ಮನೆಗೆ ತೆರಳಿ (ಈ ಸಂದರ್ಭದಲ್ಲಿ 'ಬಟ್ಟೆಪಾಟ'ನ್ನು ಹಾಡಲಾಗುವುದು) ಪಾಣಿಗ್ರಹಣ ಮಾಡಿ ಕರೆತರುವಲ್ಲಿವರೆಗಿನ ಎಲ್ಲ ನಡವಳಿಕೆ, ಕಟ್ಟು ಕಟ್ಟಳೆಗಳು ಗಮನಾರ್ಹವಾದುವು. ಕೊಡವರ ಮದುವೆಯಲ್ಲಿ ಪುರೋಹಿತರ ಅವಶ್ಯಕತೆ ಇಲ್ಲ. ಮಾಂಗಲ್ಯಧಾರಣ ಪದ್ಧತಿಯೂ ಇಲ್ಲ. ಮದುವೆಯ ಆರಂಭದಿಂದ ಅಂತ್ಯದವರೆಗೆ ಹಾಡುಗಳು ಮಾತ್ರ ಪ್ರಧಾನವಾಗಿ ಕಂಡು ಬರುತ್ತವೆ. ಈ ಹಾಡುಗಳಲ್ಲಿ ಮದುವೆಯ ಸರ್ವ ವಿವರಗಳ ವರ್ಣನೆಯೂ ಬರುತ್ತದೆ. ಜೊತೆಗೆ ಮದುವಣಿಗನ ಸಮಸ್ತ ಜೀವನ ವಿವರಗಳನ್ನು ಆಕರ್ಷಕವಾಗಿ ಬಣ್ಣಿಸಿ ಜನನ, ಬಾಲ್ಯ, ಯೌವನ, ವಿವಾಹಾಕಾಂಕ್ಷೆ, ಕನ್ಯಾನ್ವೇಷಣೆ ಮುಂತಾದ ವಿಷಯಗಳನ್ನು ಪ್ರಸ್ತಾಪಿಸಲಾಗುತ್ತದೆ. ಈ ಗೀತೆಗಳಲ್ಲಿ ಪ್ರೇಮಮಯ ಸನ್ನಿವೇಶಗಳೂ ವಧು ತೌರನ್ನು ತೊರೆಯುವಾಗಿನ ಹೃದಯ ಕಲಕುವ ಸಂದರ್ಭಗಳೂ ಮನಮುಟ್ಟುವಂತೆ ಚಿತ್ರಿತವಾಗಿವೆ.

ಮರಣದ ಹಾಡುಗಳು ಒಂದು ಪ್ರಮುಖ ವರ್ಗವಾಗಿಯೇ ಬರುತ್ತವೆ. ಮಾನವ ಜೀವನದ ನಶ್ವರತೆಯನ್ನು ಎತ್ತಿ ತೋರಿಸಿ, ಮೃತರ ಬಂಧುಗಳನ್ನು ಸಂತೈಸುವ ಅಪೂರ್ವ ಸನ್ನಿವೇಶಗಳು ಈ

ಗೀತೆಗಳಲ್ಲಿ ತಲಸ್ಪರ್ಶಿಯಾಗಿ ಚಿತ್ರಿತವಾಗಿವೆ. ಶ್ರೇಷ್ಠತಮ ಬದುಕು ಹುಡಿಗೂಡಿ ಹೋಗುವಾಗ ಯಾರೂ ತಡೆಯುವಂತಿಲ್ಲ. ಏಕೆಂದರೆ ಜನನ ಮರಣದ ನಿಯಮವನ್ನು ತಪ್ಪಿಸಲು ಯಾರಿಗೂ ಸಾಧ್ಯವಿಲ್ಲ. ವೃಥಾ ಚಿಂತಿಸಿ ಫಲವಿಲ್ಲ ಎಂಬ ತತ್ವವನ್ನು ಮನೋಜ್ಞವಾಗಿ ನಿರೂಪಿಸುವ ಹಾಡುಗಳು ಬರುತ್ತವೆ. ಜನಪದ ನೃತ್ಯಗಳನ್ನು ಸಾಮಾಜಿಕ, ಧಾರ್ಮಿಕ ಮತ್ತು ಶೌರ್ಯ ಪ್ರದರ್ಶನದ ನೃತ್ಯಗಳೆಂದು ಮೂರು ವಿಭಾಗಗಳಲ್ಲಿ ಗಮನಿಸಬಹುದು. ಇವುಗಳಲ್ಲಿ ಸಾಮಾನ್ಯವೂ ಜನಪ್ರಿಯವೂ ಆದ ನೃತ್ಯವೆಂದರೆ ವಾಲಗತ್ತಾಟ್. ಗಂಡು ಹೆಣ್ಣೆಂಬ ವ್ಯತ್ಯಾಸವಿಲ್ಲದೆ, ಗುಂಪು ಸೇರಿ ವಾದ್ಯದ ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕಿ ಕುಣಿಯುವ ನೃತ್ಯ. ಮದುವೆ ಹಾಗೂ ಸಾಮೂಹಿಕ ಸಮಾರಂಭಗಳಲ್ಲಿ ಮೋಜಿಗಾಗಿ ಈ ಕುಣಿತವನ್ನು ಕುಣಿಯುವುದನ್ನು ಕಾಣಬಹುದು.

ಉಮ್ಮತ್ತಾಟ್, ಕೋಲಾಟ್, ಬೊಳಕಾಟ್ ಮುಂತಾದ ಕುಣಿತಗಳನ್ನು ಕೊಡಗಿನ ಸುಗ್ಗಿ ಹಬ್ಬವಾದ ಹುತ್ತರಿಯ ಸಂದರ್ಭದಲ್ಲಿ ಮಾಡಲಾಗುತ್ತದೆ. ಇದರ ಭಾಗವಾಗಿಯೇ ಮಾಡುವ "ಶೌರ್ಯ ಪ್ರದರ್ಶನಕ್ಕೆ ಪ್ರತೀಕದಂತಿರುವ ಮತ್ತೊಂದು ನೃತ್ಯ ಪಡೆಕಳಿ ಅಥವಾ ಪರಯಕಳಿ. ಇದು ಒಂದು ರೀತಿಯ ಸಮರ ನೃತ್ಯ. ಕೊಡವ ಜನಾಂಗದವರಲ್ಲಿ ಪರಂಪರಾನುಗತವಾಗಿ ಬಂದ ಸಮರೋತ್ಸಾಹವನ್ನು, ಕ್ರೀಡಾಭಿಮಾನವನ್ನು ಈ ನೃತ್ಯದಲ್ಲಿ ಕಾಣಬಹುದು. ಇದರಲ್ಲಿ ಸಮಾನ ಶಕ್ತಿ ಮತ್ತು ಶೌರ್ಯಗಳುಳ್ಳ ಈರ್ವರು ತಮ್ಮ ಬಲಗೈಯಲ್ಲಿ ಬೆತ್ತದ ಕೋಲನ್ನು, ಎಡಗೈಯಲ್ಲಿ ಬೆತ್ತದ ಗುರಾಣಿಯನ್ನು ಹಿಡಿದು ಪರಸ್ಪರ ಕಾದಾಡುವ ರೀತಿಯಲ್ಲಿ ನರ್ತಿಸುತ್ತಾರೆ. ಅವರ ನಡುವೆ ಒಂದು ರೀತಿಯ ಅಣಕು ಹೋರಾಟವೇ ನಡೆಯುತ್ತದೆ. ಕೊನೆಯಲ್ಲಿ ಕ್ರೀಡಾಭಿಮಾನಿಗಳಿಗೆ ಯೋಗ್ಯವಾದ ರೀತಿಯಲ್ಲಿ ಅವರು ಪರಸ್ಪರ ಆಲಂಗಿಸಿ ನಗುನಗುತ್ತಾ ಅಗಲುತ್ತಾರೆ. ಹುತ್ತರಿಯ ಕೋಲಾಟದ ಕೊನೆಯಲ್ಲಿ ಈ ನೃತ್ಯ ಮಾಡಲಾಗುತ್ತದೆ."[೧೩]

ಈ ಮೇಲಿನ ಎಲ್ಲಾ ನೃತ್ಯಗಳಲ್ಲಿ ಭಾಗವಹಿಸುವವರು ತಮ್ಮ ಸಾಂಪ್ರದಾಯಿಕ ಉಡುಗೆಯನ್ನು ತೊಟ್ಟಿರುತ್ತಾರೆ. ಕೊಡವ ಜನಪದ ಸಾಹಿತ್ಯದ ಸಮರ್ಪಕ ಸಂಗ್ರಹ, ಅಧ್ಯಯನ ಇನ್ನೂ ಪೂರ್ಣ ಮಟ್ಟದಲ್ಲಿ ಆಗಿಲ್ಲ. ಕೆಲವಾರು ವಿದ್ವಾಂಸರು ಸ್ವಲ್ಪಮಟ್ಟಿಗಿನ ಸಂಗ್ರಹ ಕಾರ್ಯವನ್ನು ಮಾಡಿದ್ದಾರೆ. ಕೊಡವ ಭಾಷೆಯ ಜನಪದ ಗೀತೆಗಳನ್ನು ಸಂಗ್ರಹಿಸಿ ಅವುಗಳಿಗೆ ಕನ್ನಡದಲ್ಲಿ ವಿವರಗಳೊಂದಿಗೆ ೧೯೨೪ ರಲ್ಲಿ 'ಪಟ್ಟೋಲೆ ಪಳಮೆ' ಕೃತಿಯನ್ನು ಪ್ರಕಟಿಸಿದರು. ವಿದ್ವಾನ್ ಡಾ. ಐ.ಮಾ. ಮುತ್ತಣ್ಣನವರು ಕೊಡವ ಜನಪದ ಗೀತೆಗಳನ್ನು ಇಂಗ್ಲೀಷ್‌ನಲ್ಲಿ 'Kodava's and their gala-leela' ಎಂಬುದಾಗಿ ಪ್ರಕಟಿಸಿದ್ದಾರೆ. ಪೇರಿಯಂಡ ಚಂಗಪ್ಪನವರು 'ಕೊಡವರ ಅಂದೋಳತ್ ಪಾಟ್' ಪುಸ್ತಕವನ್ನು ಪ್ರಕಟಿಸಿದರು. ಜೊತೆಗೆ ಬಿ.ಡಿ. ಗಣಪತಿಯವರು ತಮ್ಮ ಕೃತಿ 'ಕೊಡವರು' ನಲ್ಲಿ ಅಲ್ಲಲ್ಲಿ ಜಾನಪದಕ್ಕೆ ಸಂಬಂಧಿಸಿದ ವಿವರಗಳನ್ನು ನೀಡಿದ್ದಾರೆ. ಇವು ಯಾವುವೂ ಸಮಗ್ರ ರೂಪದ ಸಂಗ್ರಹ ಕೃತಿಗಳಾಗಿಲ್ಲ. ಕೆಲವು ಕೊಡವ ಗೀತೆಗಳನ್ನು ಬ್ರಿಟಿಷರ ಆಳ್ವಿಕೆಯ ಕಾಲದಲ್ಲೇ ಆಂಗ್ಲ ಹಾಗೂ ಜರ್ಮನ್ ವಿದ್ವಾಂಸರು ವಿದೇಶಿ ಭಾಷೆಗಳಿಗೂ ಅನುವಾದಿಸಿದ್ದಾರೆ.

ಕೊಡವ ಜಾನಪದ ಕುರಿತು ಹಲವಾರು ವಿದ್ವಾಂಸರು, ಸಂಗ್ರಾಹಕರು, ಸಂಶೋಧಕರು, ಇಂಗ್ಲಿಷ್, ಕನ್ನಡ ಹಾಗೂ ಕೊಡವ ಭಾಷೆಗಳಲ್ಲಿ ತಮ್ಮ ಕೃತಿಗಳನ್ನು, ಬರಹಗಳನ್ನು ಪ್ರಕಟಿಸಿದ್ದಾರೆ. ಮೂಲ ಸಂಸ್ಕೃತದಲ್ಲಿದ್ದ ಕಾವೇರಿ ಪುರಾಣವನ್ನು ಶ್ರೀನಿವಾಸ ಅಯ್ಯಂಗಾರ್ ಅವರು ಕನ್ನಡಕ್ಕೆ ಅನುವಾದಿಸಿ ತರುವಾಯ ಕೊಡವ ಭಾಷೆಗೂ ಅನುವಾದಗೊಂಡಿತು. ಮದರಾಸು ಪ್ರಾಂತ್ಯಾಧಿಕಾರಿಯಾಗಿದ್ದ ಚಾರ್ಲ್ಸ್‌ಗೋವರ್ ೧೮೭೨ ರಲ್ಲಿ ದ್ರಾವಿಡ ಭಾಷೆಗಳಲ್ಲಿನ ಜನಪದ ಗೀತೆಗಳನ್ನು ಇಂಗ್ಲಿಷ್‌ನಲ್ಲಿ ಸಂಕಲಿಸಿ 'The Folk Songs of Southern India' ಎಂಬ ಗ್ರಂಥವನ್ನು ಹೊರತಂದಿರುವುದರಲ್ಲಿ ಕೊಡವ ಜನಪದ ಗೀತೆಗಳೂ ಸೇರಿವೆ. ೧೮೭೩ ರಲ್ಲಿ ಕೊಡಗು ಬೈಬಲನ್ನು ಪ್ರಕಟಿಸಿದ ಕಿಟೆಲ್‌ನ್ನು ಲಾವಣಿಯ ರೂಪದಲ್ಲಿರುವ ಕೊಡಗಿನ ಹಾಡುಗಳ ಪ್ರತೀಚರಣವೂ ಏಳು ಅಕ್ಷರಗಳಿಂದ ಕೂಡಿ ರಗಳೆಯಂತೆ ಮುಂದುವರೆಯುವ ಮತ್ತು ಪ್ರತೀ ಹಾಡಿನಲ್ಲಿಯೂ ನೂರಾರು ಸಾಲುಗಳು ಕಂಡುಬರುವ ವೈಶಿಷ್ಟ್ಯವನ್ನು ಕುರಿತು ಪ್ರಸ್ತಾಪಿಸಿದ್ದಾನೆ. ಕನ್ನಡ ಲಿಪಿಯಲ್ಲಿ 'ಅ'ಕಾರಾದಿಯಾಗಿ ಜೋಡಿಸಿದ ೭೩೭ ಕೊಡವ ಗಾದೆಗಳನ್ನು 'ಕೊಡವ ಪಡಿಮೆ' (Selestion of Coorg Proverhs) ಎಂಬ ಹೆಸರಿನಲ್ಲಿ ಸಂಗ್ರಹಿಸಿ ಜರ್ಮನ್ ಮಿಷಿನರಿಯಾಗಿದ್ದ ಜಿ.ಎಫ್.ವೈಲ್ ಎಂಬುವನು ೧೮೮೬ರಲ್ಲಿ ಮಂಗಳೂರಿನಲ್ಲಿ ಪ್ರಕಟಿಸಿದನು. ಇದು ಕೊಡವ ಜಾನಪದದ ಕುರಿತ ಮೊದಲ ಪ್ರಕಟಿತ ಕೃತಿಯೆನಿಸಿದೆ. ಕೊಡವರ ಲಾವಣಿಗಳು, ಜನಪದ ಕಥೆಗಳು, ಗಾದೆಗಳು, ಒಗಟುಗಳು ಇತಿಹಾಸ, ಪರಂಪರೆ ಕುರಿತು ವಿವಿಧ ವಿಷಯಗಳನ್ನೊಳಗೊಂಡ ಕೃತಿ 'ಪಟ್ಟೋಲೆ ಪಳಮೆಯನ್ನು' ನಡಿಕೇರಿಯಂಡ ಚಿಣ್ಣಪ್ಪನವರು ೧೯೨೪ ರಲ್ಲಿ ಸಂಗ್ರಹಿಸಿ ಪ್ರಕಟಿಸಿದರು.

ಕೊಡವರ ಬಗೆಗೆ ವಿಶೇಷ ಅಧ್ಯಯನ ನಡೆಸಿರುವ ಬಿ.ಡಿ.ಗಣಪತಿಯವರು ತಮ್ಮ ಕೊಡಗು ಮತ್ತು 'ಕೊಡವರು' ಕೃತಿಯಲ್ಲಿ ಕೊಡವರ ಜೀವನ ನಂಬಿಕೆ, ಸಂಪ್ರದಾಯ, ಆಚರಣೆ, ಹಬ್ಬ ಹಾಗೂ ಇತರ ವೈಶಿಷ್ಟ್ಯಗಳನ್ನು ಹಾಡು, ನಾಣ್ಣುಡಿ ಇತ್ಯಾದಿಗಳನ್ನು ಸಂಗ್ರಹಿಸಿ ಕೊಟ್ಟಿರುವರು. ಅವರ 'Kodava's a Comprahensive study' ಕೃತಿಯಲ್ಲಿ ಕೊಡವ ಸಾಹಿತ್ಯ ಹಾಗೂ ನೃತ್ಯಗಳ ಕುರಿತು ಪ್ರತ್ಯೇಕವಾಗಿ ವಿವೇಚಿಸಲಾಗಿದೆ. ಡಿ.ಎನ್.ಕೃಷ್ಣಯ್ಯನವರ 'ಕೊಡಗಿನ ಇತಿಹಾಸ' ಎಂ.ಪಿ.ಕಾರ್‍ಯಪ್ಪ ಅವರ Coorg and their origins, ಎಂ.ಎನ್. ಶ್ರೀನಿವಾಸ್ ಅವರ 'Religion and society among the Coorg of South India, ಐ.ಮಾ ಮುತ್ತಣ್ಣನವರ Coorg Memoirs ಕೆ.ಪಿ.ಮುತ್ತಣ್ಣವರ 'ಜಗತ್ತಿಗೊಂದೇ ಕೊಡಗು' ಗ್ರಂಥಗಳಲ್ಲೂ ಕೊಡಗಿನ ಜಾನಪದದ ಕುರಿತು ಚರ್ಚೆ ಇದೆ

ಉತ್ತರ ಕೊಡಗಿನ ರಾಂಪುರದಲ್ಲಿ ಸಂಗ್ರಹಿಸಿದ ಒಂಬತ್ತು ಲಾವಣಿಗಳನ್ನು ಟಿ.ಎಸ್.ರಾಜಪ್ಪ ಅವರು 'ಕೆರೆ ಹೊನ್ನಮ್ಮ ಮತ್ತು ಇತರ ಲಾವಣಿಗಳು' ಎಂಬ ಶೀರ್ಷಿಕೆಯಡಿ ಹೊರತಂದಿರುವರು. ಪಿರಿಯಾಪಟ್ಟಣದ ಕಾಳಗದ ಘಟನೆಯನ್ನು ಚಿತ್ರಿಸುವ ಜನಪದ ಹಾಡಿನೊಡನೆ ಕೊಡಗಿನ ಹಾಲೇರಿ ಅರಸರಿಗೆ ಸಂಬಂಧಿಸಿದ 'ಲಿಂಗರಾಜಮ್ಮನ ಕಥೆ'ಯನ್ನು ಸೇರಿಸಿಕೊಂಡು

ಕಂಸಾಳೆಯವರು ಹಾಡುವ ಬಗೆಗೆ ಜೀ.ಶಂ.ಪರಮಶಿವಯ್ಯನವರು ತಮ್ಮ 'ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು' ಗ್ರಂಥದಲ್ಲಿ ಪ್ರಸ್ತಾಪಿಸಿರುವರಲ್ಲದೆ ಲಿಂಗರಾಜಮ್ಮನಿಗೆ ಸಂಬಂಧಿಸಿದಂತೆ ದೊರೆತಿರುವ ಲಾವಣಿಯ ಮೂರು ಪಠಗಳನ್ನು 'ಜನಪದ ವೀರಕಾವ್ಯಗಳು' ಎಂಬ ಇನ್ನೊಂದು ಸಂಗ್ರಹದಲ್ಲಿಯೂ ಪ್ರಕಟಿಸಿರುವರು. ಸ್ವಾಮಿಗೌಡ ಅವರು ಕೊಡಗಿನ ಲಿಂಗರಾಜನನ್ನು ಕುರಿತ ಕಾವ್ಯವನ್ನು ತಮ್ಮ 'ಜನಪದ ಕಥನ ಗೀತೆಗಳು' ಸಂಗ್ರಹದಲ್ಲಿಯೂ, ಎ. ಹಿರಿಯಣ್ಣ ಅವರು ಕೊಡಗಿನ ನಿಂಗವ್ವಳನ್ನು ಕುರಿತ ಕಾವ್ಯವನ್ನು ತಮ್ಮ 'ತಂಬೂರಿ ಸಂಪ್ರದಾಯದ ಕಾವ್ಯಗಳು' ಸಂಗ್ರಹದಲ್ಲಿಯೂ ಬೆಳಕಿಗೆ ತಂದಿರುವರು ಸುಮಾರು ೬೭೫ ಕೊಡವ ಗಾದೆಗಳ ಸಂಗ್ರಹವೆನಿಸಿದ 'ಕೊಡವ ಗಾದೆ ಪಿಂಞ ಪಳಂಜೊಲ್ಲ್' ಕೃತಿಯನ್ನು ಹೊರ ತಂದಿರುವವರು ಚೇಂದಂಡ ದೇಚಮ್ಮ ಕರುಂಬಯ್ಯ ಅವರು. ಪುಗ್ಗೇರ ಕರುಂಬಯ್ಯ ಅವರು ರಚಿಸಿ ಪ್ರಕಟಿಸಿದ 'ಉಮ್ಮತ್ತಾಟ್ ಪಾಟ್' ಮತ್ತು ಚೋಕಂಡ ಅಪ್ಪಯ್ಯ ಅವರು ರಚಿಸಿದ 'ಹುತ್ತರಿಹಾಡು' ಕೃತಿಗಳು ಜಾನಪದಕ್ಕೆ ಸಂಬಂಧಿಸಿದವುಗಳು.

ಕೊಡಗಿನ ಜನಪದ ಕಥೆಗಳಿಗೆ ಸಂಬಂಧಿಸಿದಂತೆ ಬಿ.ಎಸ್.ಕುಶಲಪ್ಪ ಅವರ 'ಕೊಡಗಿನ ದೇಶೀಯ ಕಥೆಗಳು' ಕಥನ ಕಾವ್ಯಗಳಲ್ಲಿ ವಿಸ್ತಾರವಾಗಿ ಒಡಮೂಡಿರುವ ಹಾಗೂ ದೇವತೆಗಳ ಸ್ವರೂಪವನ್ನು ಪಡೆದುಕೊಂಡ ಪನ್ನಂಗಾಲ ತಮ್ಮೆ, ಅಚ್ಚುನಾಯಕ, ಬೋನಿರ ಮುತ್ತಣ್ಣ, ಹೊನ್ನಮ್ಮ, ಚೆನ್ನಬಸಪ್ಪ, ಕಲಿಯಾಟ ಅಜ್ಜಪ್ಪ ಮತ್ತು ಕಾವೇರಿ ಇವರ ಕಥೆಗಳು ಈ ಕೃತಿಯಲ್ಲಿ ಗದ್ಯರೂಪದಲ್ಲಿ ಬಂದಿದೆ. ಹಾಗೆಯೇ ಬಿ.ಡಿ. ಸುಬ್ಬಯ್ಯ (ಕಾಕೆಮಾನಿ) ಅವರು ತಮ್ಮ 'ಕೊಡಗಿನ ಇತಿಹಾಸದ ಪುಟಗಳಿಂದ' ಪುಸ್ತಕದಲ್ಲಿಯೂ ಜಾನಪದವನ್ನಾಧರಿಸಿದ ಕೆಲವು ಚಾರಿತ್ರಿಕ ವ್ಯಕ್ತಿ ಮತ್ತು ಘಟನೆಗಳ ವಿವರಗಳನ್ನು ಕಥಾ ರೂಪದಲ್ಲಿ ನಿರೂಪಿಸಿರುವರು. ಪಿ.ಎಂ. ಕರುಂಬಯ್ಯ ಅವರು ಕೊಡಗಿನ ಪುಗ್ಗೇರ ಮೊಣ್ಣಯ್ಯ, ಪೊಳ್ಳದೇವಿರ ಅಪ್ಪಯ್ಯ ಮತ್ತು ಪನ್ನಂಗಾಲತಮ್ಮೆ ಈ ವ್ಯಕ್ತಿಗಳನ್ನು ಕುರಿತಾದ ದುಡಿಕೊಟ್ಟ್‌ಪಾಟ್‌ಗಳನ್ನು ಅವಲಂಬಿಸಿದ ಕಥೆಗಳನ್ನು ಎಚ್.ಎಲ್. ನಾಗೇಗೌಡರು ಸಂಪಾದಿಸಿದ 'ಕರ್ನಾಟಕದ ಜನಪದ ಕಥೆಗಳು' ಸಂಕಲನದಲ್ಲಿ ಪ್ರಕಟಿಸಿರುವರು.

## ೨.೬ ಕೊಡಗಿನ ಭಾಷೆ

ಕೊಡವ ಭಾಷೆಯು ಕೊಡಗಿನಲ್ಲಿ ಕೊಡವರ ಜೊತೆಗೆ ಇತರ ೨೦ ಸಮುದಾಯಗಳ ಮಾತೃಭಾಷೆ ಆಗಿದೆ. ಭಾಷಾ ವರ್ಗೀಕರಣದ ಪ್ರಕಾರ ಕೊಡವ ಭಾಷೆ ದಕ್ಷಿಣ ದ್ರಾವಿಡ ವರ್ಗಕ್ಕೆ ಸೇರಿದೆ. ಈ ಭಾಷೆಗೆ ತನ್ನದೇ ಆದ ಲಿಪಿ ಇಲ್ಲ. ಕನ್ನಡ ಭಾಷಾ ಲಿಪಿಯನ್ನೇ ಇದು ವ್ಯವಹಾರಕ್ಕೆ ಅವಲಂಬಿಸಿದೆ. ೨೦೦೦ ವರ್ಷಗಳ ಇತಿಹಾಸ ಕೊಡವ ಭಾಷೆಗಿದೆ ಎನ್ನಲಾಗಿದೆ. ಕಾಲ್ಡ್‌ವೆಲ್‌ರವರು ಕೊಡವ ಭಾಷೆ, ಹಳಗನ್ನಡ, ಮೊಗ್ಲಿಂಗ್ ಈ ಬಾಷೆ ತಮಿಳು- ಮಳೆಯಾಳಂ ಬಾಷೆಗಳಿಗೆ ಹತ್ತಿರವಿದೆ

ಎನ್ನುತ್ತಾರೆ. ಪ್ರಭಾಕರ ಶಿಶಿಲರವರು ಭಾಷಾದೃಷ್ಟಿಯಿಂದ ಬುಡಕಟ್ಟು ಮತ್ತು ಮಲಯಾಳಿ ಭಾಷೆಗಳ ಸಂಯೋಗದಿಂದ ಕೊಡವ ಭಾಷೆ ಉಗಮವಾಗಿದೆ ಎನ್ನುತ್ತಾರೆ. ಕಾಲ್ಡ್‌ವೆಲ್ ಕನ್ನಡಕ್ಕೆ ಬಡಗ ಮತ್ತು ಕೊಡವ ಉಪ ಭಾಷೆಗಳೆಂದಿದ್ದಾರೆ.

ಕೊಡವ ಭಾಷೆಯಲ್ಲಿ ೩೨ ಅಕ್ಷರಗಳಿವೆ ೧೨ ಸ್ವರಗಳು, ೨೦ ವ್ಯಂಜನಗಳಿವೆ

ಸ್ವರಾಕ್ಷರಗಳು :- ಅ,ಆ,ಇ,ಈ,ಉ,ಊ,ಎ,ಏ,ಐ,ಒ,ಓ,ಔ

ವ್ಯಂಜನಾಕ್ಷರಗಳು ಕ ಗ ಜ

ಚ ಝ ಞ

ಐ ಡ ಣ

ಪ ಬ ಮ

ಯ ರ ಲ ವ ಅನುಸ್ವಾರ(ಂ)

ಕೊಡವ ಭಾಷೆಯ ಅನುಸ್ವಾರವನ್ನು ವ್ಯಂಜನವೆಂದು ಪರಿಗಣಿಸಿದೆ. ಮಹಾಪ್ರಾಣಾಕ್ಷರಗಳು ಇಲ್ಲದ ಭಾಷೆ. ಕೊಡವ ಭಾಷೆ. ಕನ್ನಡ, ತಮಿಳು ಮಲಯಾಳಂ ತುಳುವಿಗೆ ಮಿಶ್ರಭಾಷೆಯಾಗಿ ಕೊಡವ ಭಾಷೆ ಕಂಡು ಬಂದರೂ ಅದನ್ನು ಮತ್ತಷ್ಟು ಭಾಷಾ ವಿಜ್ಞಾನದ ದೃಷ್ಟಿಯಿಂದ ವೈಜ್ಞಾನಿಕವಾಗಿ ವಿಮರ್ಶಿಸುವ ಕಾರ್ಯ ಆಗಿದೆ. ಉದಾ. ಬನ್ನಿರಿ ಎಂಬುದನ್ನು ಬಾರಿ, ಮಹಾಸಭೆ ಎಂಬುದನ್ನು ಮಾಸಭೆ, ಎಂಥ ಎಂಬುದನ್ನು ಎಂತ ಎಂದು ಸಂಬೋಧಿಸುವ ರೀತಿಯಲ್ಲಿ ಕೊಡವ ಭಾಷೆ ಕಂಡುಬರುತ್ತದೆ. ಪೂಮಾಲೆ, ಬ್ರಹ್ಮಗಿರಿ, ತೂಕ್ ಬೊಳಕ್ ಪತ್ರಿಕೆಗಳು ಕನ್ನಡ ಲಿಪಿನ್ನಾಧರಿಸಿದ ಕೊಡವ ಭಾಷೆಯ ಪತ್ರಿಕೆಗಳಾಗಿವೆ. ಕೊಡವ ಭಾಷೆಯಲ್ಲಿ ಕನ್ನಡದ ಸ ಅಕ್ಷರದ ಬದಲು ಚ ಹ ಅಕ್ಷರದ ಸ್ಥಾನದಲ್ಲಿ ಪ ಬಳಕೆಯಾಗುತ್ತದೆ. ಉದಾ ಸಾವು ಬದಲಾಗಿ ಚಾವು, ಹಾಲು ಬದಲಿಗೆ ಪಾಲ್ ಎನ್ನುತ್ತಾರೆ.

ಕೊಡಗಿನ ಅರೆಭಾಷೆ ಗೌಡರು ಅರೆಭಾಷೆ ಎಂಬ ಅರ್ಧ ಕನ್ನಡದ ಭಾಷೆಯನ್ನು ಮಾತನಾಡುತ್ತಾರೆ. ಉದಾ. ಹೋಗುತ್ತೇವೆ ಎನ್ನಲು ಹೋನ್ನೆ ಎಂದೂ ಬರುತ್ತೇನೆ ಎನ್ನಲು ಬನ್ನೆ ಎನ್ನುವರು. “ಆದರೆ ಕೊಡಗಿನ ಜೈನಿರ ಮನೆಯವರೆಂಬ ಗೌಡ ಕುಟುಂಬ ಇಂದಿಗೂ ಕೊಡವ ಭಾಷೆಯನ್ನು ಮನೆ ಮಾತಾಗಿ ಆಡುವರು”[೧೪]. ಗೌಡ ಕನ್ನಡವೆಂದು ಕೂಡ ಅರೆಭಾಷೆ ಕನ್ನಡವನ್ನು ಇತ್ತೀಚೆಗೆ ಕರೆಯಲಾಗುತ್ತದೆ. ಅರೆ ಭಾಷೆ ಗೌಡ ಕನ್ನಡಕ್ಕೂ ತನ್ನದೇ ಆದ ಲಿಪಿ ಇಲ್ಲ.

ಇದನ್ನು ಬರೆಯಲು ಕನ್ನಡ ಭಾಷಾ ಲಿಪಿಯನ್ನು ಬಳಸುತ್ತಾರೆ. ಅರೆ ಎಂದರೆ ಅರೆಯುವುದು ತೇಯುವುದು ಅಂದರೆ ಒರೆಗೆ ಹಚ್ಚಿ ಮತ್ತಷ್ಟು ಸತ್ವಶಾಲಿಯಾಗಿಸುವುದು. ಇನ್ನೊಂದು ಅರ್ಥದ ಪ್ರಕಾರ ಅರೆ ಅಂದರೆ ಕಲ್ಲಿನಂತೆ ಗಟ್ಟಿ, ದೃಢತೆ ಹೊಂದಿರುವ ವಸ್ತು ಎನ್ನುವರು.

ಹೀಗೆ ಗಟ್ಟಿತನದ , ಸತ್ವಶಾಲಿಯಾದ ಭಾಷೆ, ಅರೆಭಾಷೆ ಎನ್ನುವವರೂ ಇದ್ದಾರೆ. ಆದರೆ ಅರೆಭಾಷೆ ಎಂಬ ಪದದ ನಿಷ್ಪತ್ತಿಯ ಬಗ್ಗೆ ನಿಖರವಾದ ಅರ್ಥ ದೊರಕುವುದಿಲ್ಲ. ಇದು ಅರ್ಧ ಕನ್ನಡವಲ್ಲ ಮೂಲ ಕನ್ನಡವೇ ಅರೆಭಾಷೆ ಎನ್ನುವ ವಾದವೂ ಇದೆ. ಅರೆ ಎಂದರೆ ಗಟ್ಟಿ ವಸ್ತುವೆಂದೂ, ಗಟ್ಟಿಯಾದ ಬೆಟ್ಟ ಗುಡ್ಡಗಳ ಪ್ರದೇಶಗಳಲ್ಲಿ ವಾಸವಿರುವವರೆಂದು ಅವರು ಮಾತನಾಡುವ ಹಲವು ವಿದ್ವಾಂಸರು ಹೇಳಿದ್ದಾರೆಂದು ಪಟ್ಟಡ ಪ್ರಭಾಕರರವರು ಅಭಿಪ್ರಾಯಪಡುತ್ತಾರೆ. ನಡುಗನ್ನಡವು ಬೆಟ್ಟ ಪ್ರದೇಶಗಳಲ್ಲಿ ಅರೆಭಾಷೆಯೆಂಬ ಹೆಸರಿನಿಂದ ಉಳಿದು ಬಂದಿದೆ ಎನ್ನುತ್ತಾರೆ. ಪಟ್ಟಡ ಪ್ರಭಾಕರ ಅರೆಭಾಷೆಯನ್ನು ಕೊಡಗಿನ ಅರೆಭಾಷೆ ಗೌಡರು ಮಾತ್ರ ಬಳಸುವುದಿಲ್ಲ ಇದನ್ನು ಹತ್ತು ಕುಟುಂಬ ಹದಿನೆಂಟು ಗೋತ್ರದ ಸುಳ್ಯ ಪರಿಸರದ ಅರೆಬಾಷೆ ಗೌಡರು, ಹವ್ಯಕ, ಬ್ರಾಹ್ಮಣರು, ಸೋಲಿಗರು, ಕುಂಬಾರರು,. ಹಾಲಕ್ಕಿ ಒಕ್ಕಲಿಗರು, ಕೋಟದವರು, ಮಲೆನಾಡಿನ ಕೆಲವರು ಕನ್ನಡದ ರೂಪಾಂತರದ ಈ ನಡುಗನ್ನಡ ಪದ ಪ್ರಯೋಗವನ್ನು ಬಳಸುತ್ತಾರೆ. ಇದು ಕಾಲಕ್ರಮೇಣ ಹವ್ಯಕ ಕನ್ನಡ, ಕೋಟ ಕನ್ನಡ ಗೌಡ ಕನ್ನಡವಾಗಿ ಪ್ರಾದೇಶಿಕ ಭಾಷೆಯಾಗಿ ಉಳಿದುಕೊಂಡು ಬಂದಿದೆ.

ಅರೆಭಾಷೆಯಲ್ಲಿ ೩೨ ಅಕ್ಷರಗಳಿವೆ. ಅರೆಭಾಷೆ ಕೇವಲ ಸಮಾಜದ ವ್ಯಕ್ತಿಗಳ ನಡುವೆ ಹಾಗೂ ಗೃಹಕೃತ್ಯಗಳಲ್ಲಿ ಬಳಕೆಯಾಗುತ್ತಿದ್ದ ಮಾತಾಗಿ ಇತರ ಜನರಿಗೆ ಈ ಮಾತನ್ನು ಹೇಳುವಾಗ ಅರ್ಧಂಬರ್ಧ ಅರ್ಥವಾಗುವಂತೆ ಇದರಿಂದ ಇದನ್ನು ಅರೆಬಾಷೆ, ಅರೆಗನ್ನಡ, ಅರೆಬಾಷೆ ಎಂದು ಗುರುತಿಸಬಹುದೆಂದು ಡಾ.ಕೋರನ ಸರಸ್ವತಿ ತಮ್ಮ ಅಧ್ಯಯನದಲ್ಲಿ ಹೇಳುತ್ತಾರೆ. ಗೌಡ ಕನ್ನಡ ಎಂಬ ಹೆಸರನ್ನು ಪ್ರೊ.ಎಂ.ಮರಿಯಪ್ಪಭಟ್ಟರು ಬಳಕೆಗೆ ತಂದರು. ಅದನ್ನೆ ಪ್ರೊ.ಕೆ.ಕುಶಾಲಪ್ಪಗೌಡರು ತಮ್ಮ ಅಧ್ಯಯನಕ್ಕೆ ಬಳಸಿಕೊಂಡರು. "ಗೌಡ ಕನ್ನಡವು ಉತ್ತರ ದ್ರಾವಿಡ ಭಾಷಾ ಗುಂಪಿಗೆ ಸೇರಿದ ಬ್ರಾಹೂಯಿಯ ಅನಂತರದ ಸ್ಥಾನವನ್ನು ಪಡೆಯುತ್ತದೆಂದು ಖ್ಯಾತ ವಿದ್ವಾಂಸ ಎಸ್.ಎ. ಷಣ್ಮುಗಂ ಅವರು ಅಭಿಪ್ರಾಯಪಟ್ಟಿದ್ದಾರೆ"[೧೫]

ಈ ಗೌಡ ಕನ್ನಡದಲ್ಲಿರುವ ಸ್ವರಾಕ್ಷರಗಳು ಒಟ್ಟು ೧೦

ಅ ಆ ಇ ಈ ಉ ಊ ಎ ಏ ಒ ಓ

ವ್ಯಂಜನಾಕ್ಷರಗಳು ೨೨

ಕಗ ಙ

ಚ್ ಜ್ ಞ್

ಟ್ ಡ್ ಣ್

ತ್ ದ್ ನ್

ಪ್ ಬ್ ಮ್

ಯ್ ರ್ ಲ್ ವ್ ಸ್ ಹ್ ಳ್

ಕೊಡವ ಭಾಷೆಯಲ್ಲಿ ಇಲ್ಲದ ಸ್, ಹ್, ಳ್ ವ್ಯಂಜನಗಳು ಗೌಡ ಕನ್ನಡದಲ್ಲಿ ಇವೆ. ಶ,ಷ,ಸ, ಬದಲು ಒಂದೇ ಸ ಬಳಕೆಯಲ್ಲಿದೆ. ಮಹಾಪ್ರಾಣಾಕ್ಷರಗಳು ಕೊಡವ ಮತ್ತು ಗೌಡ ಕನ್ನಡಗಳೆರಡಲ್ಲೂ ಇಲ್ಲ.

ಕೊಡಗಿನಲ್ಲಿ ಕೊಡವ ಭಾಷೆ , ಅರೆಭಾಷೆಯ ಜೊತೆಗೆ ಇತರೆ ಜಾತಿ ಜನಾಂಗವರಿದ್ದು ಅವರುಗಳದೆ ಆದ ತುಳು, ಮಲೆಯಾಳ, ಉರ್ದು ಕನ್ನಡ ಮುಂತಾದ ಭಾಷೆಗಳನ್ನು ಬಳಸುತ್ತಾರೆ.

## ೨.೭ ಕೊಡಗಿನ ಧಾರ್ಮಿಕ ಆಚಾರ ವಿಚಾರಗಳು

ಕೊಡವರ ಧಾರ್ಮಿಕ ಆಚಾರ ವಿಚಾರಗಳನ್ನು ಅವಲೋಕಿಸಿದಾಗ ಅವರು ಮೂಲತಃ ಹಿಂದೂ ಧರ್ಮಕ್ಕೆ ಸೇರಿದವರಾಗಿದ್ದು, ಶೈವ, ವೈದಿಕ, ಆರ್ಯ, ದ್ರಾವಿಡ ಪದ್ಧತಿಯ ಹಲವು ಅಂಶಗಳನ್ನು ತಮ್ಮ ಧಾರ್ಮಿಕ ಪದ್ಧತಿಗಳಲ್ಲಿ ಅಳವಡಿಸಿಕೊಂಡಿರುವುದು ದೃಷ್ಟಿ ಗೋಚರ ಅಂಶವಾಗಿದೆ. ಆದರೆ ಇವರು ಮೂಲತಃ ಶೈವರೆಂದಾಗಲೀ, ವೈಷ್ಣವರೆಂದಾಗಲೀ ಒಂದು ನಿರ್ದಿಷ್ಟ ಸಂಪ್ರದಾಯದ ಮಿತಿಗೆ ಒಳಪಟ್ಟಿಲ್ಲ. ಒಂದೇ ಒಂದು ವಿಶಿಷ್ಟ ದೇವತೆ ಕೊಡವರಿಗೆ ಇಲ್ಲ. ಇವರಿಗೆ ಇವರದ್ದೆ ಆದ ಮಠವಾಗಲೀ, ಗುರುವಾಗಲೀ, ಇಲ್ಲದಿರುವುದು ಕೊಡವರ ಧಾರ್ಮಿಕ ಪದ್ಧತಿಯ ವಿಶೇಷತೆ. ಆರ್ಯ ವೈದಕ ಸಂಸ್ಕೃತಿಯವರು ಮಾಡುವಂತೆ ಪ್ರಕೃತಿಯ ಆರಾಧನೆಯನ್ನು ಕೊಡವರು ಮಾಡುತ್ತಾರೆ. ಭೂಮಿಯ ಪೂಜೆ, ಅಗ್ನಿ, ಗಾಳಿ, ನೀರು ಸೂರ್ಯ, ಚಂದ್ರ, ಮುಂತಾದವರನ್ನು ಪೂಜಿಸುವುದನ್ನು ಕೊಡವರಲ್ಲಿ ಕಾಣುತ್ತೇವೆ. ಅಗ್ನಿ ಪೂಜೆಗೆ ಕೊಡವರಲ್ಲಿ ವಿಶೇಷ ಸ್ಥಾನವಿದೆ. ಮಳೆ ದೇವನಿಗೆ ಮಾಡುವ ಪೂಜೆ, ವಿವಾಹದ ಸಂದರ್ಭ ಮತ್ತು ನಾಮಕರಣ ಸಂದರ್ಭ ಇವರು ಮಾಡುವ ಗಂಗೆಪೂಜೆ, ಕಾವೇರಿಯನ್ನು ಜಲದೇವತೆಯಾಗಿ ಆರಾಧನೆ ಮಾಡುವ ರೀತಿ, ಗೋಮಾತೆಗೆ ನೀಡುವ ಗೌರವ, ಗೃಹ ಪ್ರವೇಶದಲ್ಲಿ ಒಲೆಯಲ್ಲಿ ಹಾಲಿಟ್ಟು ಉಕ್ಕಿಸುವುದು, ಎಡಮ್ಯಾರ್ ಸಂದರ್ಭ ಭೂಮಿತಾಯಿಗೆ ಹಾಲು ಹಣ್ಣ ನೇವೈದ್ಯ ಇಡುವರೀತಿ, ತಿಥಿಯ ಸಂದರ್ಭದ ಸಂಸ್ಕಾರಗಳು ಇವುಗಳನ್ನೆಲ್ಲಾ ನೋಡಿದಾಗ ವೈದಿಕ ಸಂಸ್ಕೃತಿಯ ಪ್ರಭಾವವನ್ನು ಕೊಡವರ ಧಾರ್ಮಿಕ ವಿಧಿ ವಿಧಾನಗಳಲ್ಲಿ ಕಾಣಬಹುದು. ಹಾಗೆಯೇ ಕೆಲವು ದೇವರುಗಳಿಗೆ ಗುಡಿ ಗೋಪುರಗಳನ್ನು ಕಟ್ಟದ ಪ್ರಕೃತಿಯ ಮಡಿಲಿನಲ್ಲಿಯೆ ನೆಲೆಗೊಳಿಸಿ ಆರಾಧಿಸುವ ಸಂಸ್ಕೃತಿಯನ್ನು ಕೊಡಗಿನಲ್ಲಿ ಕಾಣುತ್ತೇವೆ. ಉದಾ. ಅಯ್ಯಪ್ಪ, ನಾತ, ಕುಳಿಯ, ಪಾಷಾಣಮೂರ್ತಿ, ಶಾಸ್ತ .

ಗಣಪತಿ, ಸುಬ್ರಹ್ಮಣ್ಯ, ಶಿವನ ಆರಾಧನೆ, ಮೂರ್ತಿ ಪೂಜೆಗಳ ಆರಾಧನೆ, ಮಾತೃದೇವತೆಗಳಾದ ಭಗವತಿ, ಭದ್ರಕಾಳಿ, ಚಾಮುಂಡಿಯ ಆರಾಧನೆ ಮಾಡುವುದು. ಈ ದೇವರುಗಳಿಗೆ ಗುಡಿಗೋಪುರಗಳನ್ನು ಕಟ್ಟಿ ಆರಾಧಿಸುವುದನ್ನು ನೋಡಿದಾಗ ದ್ರಾವಿಡ ಸಂಸ್ಕೃತಿಯ ಅಂಶಗಳೂ ಕೂಡ ಕೊಡವರ ಧರ್ಮದಲ್ಲಿ ಬೆರೆತು ಹೋಗಿರುವುದನ್ನು ಕಾಣಬಹುದು. "ಕೊಡವರ ಧಾರ್ಮಿಕ ಜೀವನದ ಮೇಲೆ ನೆರೆಕೆರೆಯ ರಾಜ್ಯಗಳ ಧಾರ್ಮಿಕ ಪರಂಪರೆ ಮತ್ತು ವಿಶ್ವಾಸಗಳು ಗಣನೀಯ ಪ್ರಭಾವವನ್ನು ಬೀರಿವೆ"[೧೬] ಕೊಡಗಿನಲ್ಲಿ ಆರಾಧಿಸುವ ಇಗ್ಗುತ್ತಪ್ಪ ಪಾಲೂರಪ್ಪ , ಕಾಕೋಟ ಚ್ಚ ಭಗವತಿ ದೇವರುಗಳು ಕೇರಳ ಮೂಲದಿಂದ ವಲಸೆ ಬಂದ ದೇವರುಗಳೇ ಆಗಿವೆ. ಹಾಗೆಯೇ ದಕ್ಷಿಣ ಕನ್ನಡ ಜಿಲ್ಲೆಯ ಪ್ರಭಾವದಿಂದ ನಾತ, ಪೊದ, ಕೊರತಿ, ದೈವಗಳ ಆರಾಧನೆಯನ್ನು ಮಾಡುವ ಕೊಡಗಿನಲ್ಲಿ ಸ್ಥಳೀಯ ಶಕ್ತಿ ದೇವತೆಗಳಾದ ಮಾರಮ್ಮ, ಕರಿಂಗಾಳಿ, ಭದ್ರಕಾಳಿ, ದೇವರನ್ನು ಆರಾಧಿಸಲಾಗುತ್ತದೆ. ಪ್ರಕೃತಿ ಆರಾಧನೆಗೆ ಬದ್ಧರಾಗಿರುವ ಕೊಡಗಿನವರು ಹಾಲು ಬರುವ ಮರಗಿಡಗಳೂ ಪವಿತ್ರವೆಂದು ಭಾವಿಸುತ್ತಾರೆ. ದೇವರ ಶಿಲಾಮೂರ್ತಿಯನ್ನು ಸ್ಥಾಪಿಸುವುದು ಕೂಡ ಹಾಲು ಬರುವ ಮರದ ಕೆಳಗೆ. ಅಶ್ವತ್ಥ ಮರವು ಈಶ್ವರನೆಂದೂ, ನೆಲ್ಲಿಗಿಡ ಪಾರ್ವತಿಯ ಅವತಾರವೆಂದು ಭಾವಿಸುವ ಇವರು ಮಾವು, ಹಲಸಿನ ಮರದ ಸೌದೆಯನ್ನು ಶುಭಕಾರ್ಯಗಳಿಗೆ ಬಳಸುತ್ತಾರೆ. ಮೃತರ ತಿಥಿ ಸಂದರ್ಭ ಬಾಳೆಯ ಸಾರು, ಅಥವಾ ಪಲ್ಯವನ್ನು ಮಾಡುತ್ತಾರೆ. ಹೀಗೆ ಪ್ರಕೃತಿಯ ಮರಗಿಡಗಳ ಜೊತೆ ಕೊಡಗಿನ ಧಾರ್ಮಿಕ ಆಚರಣೆ ಸಮನ್ವಯವಾಗಿದೆ. ಒಟ್ಟಾರೆಯಾಗಿ ಕೊಡಗಿನ ಧಾರ್ಮಿಕ ಆಚಾರವಿಚಾರಗಳು ಹಿಂದೂ ಧರ್ಮದ ತಳಹದಿಯ ಆಧಾರದ ಮೇಲೆ ರೂಪುಗೊಂಡಿರುವುದದು ಕಾಣಸಿಗುತ್ತದೆ.

## ೨.೮ ಕೊಡಗಿನ ದೈವಗಳು

**ಕಾವೇರಿ ಮಾತೆ**

ಕಾವೇರಿಯು ಕೊಡಗಿನ ಎಲ್ಲ ಜನರ ಆರಾಧ್ಯ ದೈವ. ಆಕೆ ಜೀವನದಿ, ಅವಳು ಹರಿದ ಕಡೆಯ ದಡದ ಜನರ ಬದುಕಿನ ಆಧಾರವಾಗಿದ್ದಾಳೆ. ಇವಳು ಜನಪದರ ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ ಚೇತನವಾಗಿರುತ್ತಾಳೆ. ಇವಳ ಬೆನ್ನಿನೊಂದಿಗೆ ಬಹುಳತ್ವ ಸಂಸ್ಕೃತಿಯು ಪಡೆ ಒಡೆದಿದೆ. ಕಾವೇರಿ ತೀರ್ಥೋದ್ಭವ ಸಂದರ್ಭ ಮನೆಗಳನ್ನು ಶುಚಿಗೊಳಿಸಿ ತಲಕಾವೇರಿಗೆ ಹೋಗಿ ತೀರ್ಥವನ್ನು ತರುತ್ತಾರೆ. ಕಾವೇರಿ ಹರಿಯುವ ಬಲಮುರಿಯನ್ನು ಪವಿತ್ರ ಕ್ಷೇತ್ರವೆಂದು ಭೇಟಿ ನೀಡುತ್ತಾರೆ. ಒಟ್ಟಿನಲ್ಲಿ ಕಾವೇರಿ ಮಾತೆಯು ಕೊಡಗಿನ ಆರಾಧ್ಯ ದೈವವಾಗಿದ್ದಾಳೆ.

**ಇಗ್ಗುತ್ತಪ್ಪ**

ಕೊಡವರ ಸಂಸ್ಕೃತಿಯ ಮೇಲೆ ಕೊಡಗಿನ ಕಾವೇರಿ ಮಾತೆಯ ಪ್ರಭಾವ ಮೊದಲನೆಯದಾದರೆ, ಇಗ್ಗುತ್ತಪ್ಪ ದೇವರ ಪ್ರಭಾವ ಎರಡನೆಯದು. ಮಳೆಯ ದೇವರಿ ಎಂದು ಕೊಡಗಿನಲ್ಲಿ ಆರಾಧಿಸುತ್ತಾರೆ.

ಕೇರಳದಲ್ಲಿ ದೇವರ ಮಾಯೆಯಿಂದ ಸುವರ್ಣಶಂಖವೊಂದರಿಂದ ಆರುಮಂದಿ ಗಂಡು ಮಕ್ಕಳಾದ ಕಾಂಞರಾಟಪ್ಪ, ತಿರುಚಂಬರಪ್ಪ, ಬೇಂದ್ರಕೋಲಪ್ಪ, ಇಗ್ಗುತ್ತಪ್ಪ. ಪಾಲೂರಪ್ಪ, ತಿರುನೆಲ್ಲಿ ಪೆಮ್ಮಯ್ಯ ಮತ್ತು ಪನ್ನಂಗಾಲ ತಮ್ಮೆ ಜನಿಸಿರುತ್ತಾರೆ. ಇವರೆಲ್ಲರೂ ಕಣ್ಣನೂರು ಸಮೀಪಕ್ಕೆ ಬಂದು ತಮಗೆ ಅನುಕೂಲವೆನಿಸಿದ ಕ್ಷೇತ್ರಗಳಲ್ಲಿ ನೆಲೆ ನಿಲ್ಲುತ್ತಾರೆ. ಆದರೆ ಇಗ್ಗುತ್ತಪ್ಪ, ಪಾಲೂರಪ್ಪ ತಿರುನೆಲ್ಲಿ ಪೆಮ್ಮಯ್ಯ ಮಾತ್ರ ಕೇರಳದಲ್ಲಿ ಸರಿಯಾದ ನೆಲೆ ಕಾಣದೆ ಕೊಡಗಿಗೆ ಬಂದು ಬಾಣವನ್ನು ಇಡುವ ಮೂಲಕ ತಮ್ಮ ನೆಲೆಯನ್ನು ಆರಿಸಿಕೊಳ್ಳುತ್ತಾರೆ.

ಇಗ್ಗುತ್ತಪ್ಪನ ಆದಿ ಮೂಲ ಸ್ಥಳ ಇರುವುದು ಮಲ್ಮ ಎಂಬಲ್ಲಿ ನಾಲ್ಕಾರು ವೃಕ್ಷಗಳ ಆಶ್ರಯದಲ್ಲಿ ಇಗುತ್ತಪ್ಪನ ಪುಟ್ಟ ಶಿಲಾಮೂರ್ತಿ ಇದೆ. ನೆಲಜಿ, ಪೇರೂರುಗಳಲ್ಲಿ ಕೂಡ ಇಗ್ಗುತ್ತಪ್ಪನ ದೇವಾಲಯವಿದೆ. ಕಕ್ಕಬ್ಬೆ ಬಳಿ ಇರುವ ಪಾಡಿ ಇಗ್ಗುತ್ತಪ್ಪ ದೇವಸ್ಥಾನವು ಧಾರ್ಮಿಕವಾಗಿ ಹೆಚ್ಚಿನ ಮಾನ್ಯತೆ ಹೊಂದಿದೆ.

**ಸಬ್ಬಮ್ಮ**

ಶರ್ವಾಂಬೆ, ಶಾರದೆ ಎಂದೆಲ್ಲಾ ಕರೆಯುವ ಈ ತಾಯಿಯನ್ನು ಕೊಡಗಿನ ಅರೆಭಾಷೆ ಗೌಡರು ಮನೆ ದೇವತೆಯಾಗಿ ಆರಾಧಿಸುತ್ತಾರೆ. ಶೃಂಗೇರಿಯ ಶಾರದೆಯೇ ಈ ಸಬ್ಬಮ್ಮ ಎಂದು ನಂಬಿದದಾರೆ. ಸಕಲೇಶಪುರ ತಾಲೂಕಿನ ವಣಗೂರು ಸಬ್ಬಮ್ಮನ ನೆಲೆ. ಸುಗ್ಗಿ ಹುಣ್ಣಿಮೆಯಲ್ಲಿ ಇಲ್ಲಿ ನಡೆಯುವ ಜಾತ್ರೆಯಲ್ಲಿ ಕೊಡಗಿನ ಅರೆಭಾಷೆ ಗೌಡರು ಪಾಲ್ಗೊಂಡು ಹರಕೆ ಸಲ್ಲಿಸುತ್ತಾರೆ. ಕೊಡವರಲ್ಲಿ ಶಕ್ತಿದೇವತೆಗಳ ಆರಾಧನೆ ಇದ್ದರೂ, ಈ ದೇವತೆಯ ಆರಾಧನೆಯಿಂದ ಕೊಡವರು ಹೊರತಾಗಿದ್ದಾರೆ. ಸೋಮವಾರಪೇಟೆ ತಾಲೂಕಿನಲ್ಲಿ ಈ ದೇವರ ಆರಾಧನೆ ಹೆಚ್ಚು.

**ತಿರುಪತಿ ವೆಂಕಟರಮಣಸ್ವಾಮಿ**

ಕೊಡವರ ಕುಲದೈವ ಇಗ್ಗುತ್ತಪ್ಪ ದೇವರಾದರೆ, ಕೊಡಗಿನ ಅರೆಭಾಷೆ ಗೌಡರ ಕುಲದೇವರು ತಿರುಪತಿ ವೆಂಕಟರಮಣಸ್ವಾಮಿ. ಗೌಡರ ಮನೆಗಳಲ್ಲಿ ನೆಲ್ಲಕ್ಕಿಯಲ್ಲಿ ಈ ದೇವರ ಚಿತ್ರಪಟವಿಟ್ಟು ಪೂಜಿಸುತ್ತಾರೆ. ದೇವರ ಹೆಸರಿನಲ್ಲಿ ಹರಿಸೇವೆಯನ್ನು ಕುಟುಂಬದವರೆಲ್ಲ ಸೇರಿ ಆಚರಿಸುತ್ತಾರೆ. ಕೊಡವರಲ್ಲಿ ವೆಂಕಟರಮಣ, ಕೆಂಚಮ್ಮ, ಸಬ್ಬಮ್ಮ ಕೆಂಚರಾಯನ ಆರಾಧನೆ ಕಂಡುಬರುವುದಿಲ್ಲ. ಏಕೆಂದರೆ ಕೊಡವರು ಆರಾಧಿಸುವ ದೈವಗಳೆಲ್ಲವೂ ಕೇರಳದ ಮೂಲದವುಗಳಾದರೆ, ಅರೆಭಾಷೆ ಗೌಡರು ಆರಾಧಿಸುವ ದೇವರು ಹಾಸನ ಪರಿಸರ ಮೂಲದವುಗಳಾಗಿವೆ.

**ಪಾಲೂರಪ್ಪ**

ಪಾಲೂರಪ್ಪ ಕೂಡ ಕೇರಳದಿಂದ ವಲಸೆ ಬಂದ ಎಬ್ಬಮಕ್ಕ ದೇವರಲ್ಲಿ ಐದನೇಯವನಾಗಿದ್ದು, ಪಾಲೂರು ಎಂಬ ಊರಿನಲ್ಲಿ ಈತನು ನೆಲೆಸಿ ಪಾಲೂರಪ್ಪನಾದನು. ನಂತರ ಮಹಾಲಿಂಗೇಶ್ವರದೇವ ಎಂದು ಹೆಸರುವಾಸಿಯಾದನು. ಪಾಲೂರಪ್ಪನ ದೇವಸ್ಥಾನವು ಕೊಟ್ಟೆಮುಡಿ ಎಂಬ ಸ್ಥಳಕ್ಕೆ ಸಮೀಪವಿದೆ.

## ಇಬ್ಬ ಮಕ್ಕದೇವರು

ಕಾಕೋಟು ಅಚ್ಚಯ್ಯ (ಈಶ್ವರ) ಮತ್ತು ಅಕ್ಕವ್ವ (ಮಂದಕ್ಕ) ಇವರೇ ಇಬ್ಬ ಮಕ್ಕ ದೇವರು. ಇವರ ಮೂಲ ಕೇರಳ ಪೌರಾಣಿಕ ಕಥೆ ಹಿನ್ನಲೆಯ ಪ್ರಕಾರ ಕೇರಳದಿಂದ ಕಾಕೋಟಚ್ಚ ಮತ್ತು ಮಂದಕ್ಕ ಎಂಬ ಅಣ್ಣತಂಗಿಯರು ಕೊಡಗಿಗೆ ಆಗಮಿಸುತ್ತಿದ್ದಾಗ, ಕಾಡಿನ ಮಧ್ಯೆ ಅಕ್ಕವ್ವಳ ಮನಸ್ಸಿನಲ್ಲಿ ನಾವಿಬ್ಬರೇ ಜೊತೆಯಾಗಿ ಹೋದರೆ ನೋಡಿದವರು ಗಂಡ ಹೆಂಡತಿ ಎನ್ನಬಹುದೆಂಬ ಸಂದೇಹ ಮೂಡಿತು. ಈ ವಿಷಯವನ್ನು ಹೇಳಿದಾಗ ಆತನಗಿಎ ಅದು ನಿಜವೆನಿಸಿ, ಮರಕಡಿಯುತ್ತಿದ್ದ ಕಾರಿಕಟೋಟ ಚಾಂಡಾಲನಿಗೆ ತನ್ನ ದಿವ್ಯ ಶಕ್ತಿಯಿಂದ ದೈವ ಸ್ವರೂಪವನ್ನು ನೀಡಿ ಜೊತೆಯಲ್ಲಿ ಮಂದಣ್ಣ ಎಂಬ ಹೆಸರಿನಲ್ಲಿ ತಮ್ಮ ಜೊತೆಗೆ ಸೇರಿಸಿಕೊಂಡನು. ಹೀಗೆ ಮೂವರು ಬಂದು ಕೊಡಗಿನ ಕಾಕೋಟು ಪರಂಬುವಿನಲ್ಲಿ ನೆಲೆ ನಿಂತರು. ಈಶ್ವರನು ತನ್ನ ನೆಲೆಯ ಸಮೀಪದಲ್ಲಿಯೇ ಮಂದಣ್ಣ ಮೂರ್ತಿಗೆ ನೆಲೆ ನೀಡಿದ ಮಂದಕ್ಕ, ಮಂದಣ್ಣ, ಈಶ್ವರ ಮೂವರಿಗೆ ಕಾಕೋಟು ಪರಂಬುವಿನಲ್ಲಿ ಗುಡಿಯನ್ನು ಕಟ್ಟಿ ಆರಾಧಿಸಲಾಗುತ್ತದೆ. ಕಾಕೋಟು ಪರಂಬುವಿನಲ್ಲಿ ಪ್ರತಿವರ್ಷ ಡಿಸೆಂಬರ್ ತಿಂಗಳಿನಲ್ಲಿ ಉತ್ಸವ ಜರುಗುತ್ತದೆ.

## ಮೂವ ಮಕ್ಕ ದೇವರು

ಮೂವ ಮಕ್ಕ ದೇವರು ಕೂಡ ಕೊಡಗಿನಲ್ಲಿ ಆರಾಧಿಸುವ ದೇವರಾಗಿದ್ದಾರೆ. ಮದೇರಪ್ಪ, ಅಪ್ಪಂಗಿರಿಯಪ್ಪ ಮತ್ತು ಪೊರಮಲೆ ಭಗವತಿ ಇವರೇ ಮುವರು ದೇವರು. ಇವರು ಕೂಡ ಕೇರಳದಲ್ಲಿ ಮಾಯೆಯಿಂದ ಹುಟ್ಟಿ, ಬೆಳೆದು ಕಣ್ಣೂರಿನ ಬಳಿ ಹೋಗುತ್ತಾರೆ. ಅಲ್ಲಿ ಮುಕ್ಕುವರ ಮೀನಿನ ವಾಸನೆ ಮತ್ತು ತೀಯರ ಕಳ್ಳು ವಾಸನೆಯನ್ನು ತಾಳಲಾರದೆ ಕೊಡಗಿನ ಕಡೆ ಪ್ರಯಾಣಿಸಿ ನೆಲೆ ನಿಲ್ಲಲು ಇಗ್ಗುತ್ತಪ್ಪನನ್ನು ಕೇಳುತ್ತಾನೆ. ಆತ ಕಾವೇರಿ ಮತೆ ಕೇಳುವಂತೆ ತಿಳಿಸಿದಾಗ ಕಾವೇರಿಯನ್ನು ಭೇಟಿ ಮಾಡಿ, ಮದೇರಪ್ಪನು ಮದೆ ಎಂಬ ಸ್ಥಳದ ಈರುಳ್ಳಿ ಬನದಲ್ಲಿ ನೆಲೆ ನಿಲ್ಲುತ್ತಾನೆ. ಹಾಗೆ ಅಪ್ಪಂಗಿರಿಯಪ್ಪನು ಕಾಟಕೇರಿ ಊರಿನ ಅಪ್ಪಲಗಿರಿ ಎಂಬ ಬೆಟ್ಟದಲ್ಲಿ ನೆಲೆ ನಿಂತನು. ತಂಗಿ ಭಗವತಿಯೂ ಪೊರಮಲೆ ನಾಡಿನ ಮಧ್ಯೆ ಎಟ್ಟಕೇರಿ ನಾಡಲ್ಲಿ ಊರು ಊರು ಸುತ್ತಿ ಊರಿಗೊಬ್ಬಳು ಭಗವತಿ ಎಂಬ ಹೆಸರಿನಲ್ಲಿ ಪೊರೆಮಲೆ ನಾಡಿನಲ್ಲಿ ನೆಲೆನಿಂತಳು. ಹೀಗೆ ಊರು ಊರು ಸುತ್ತಿದ ಭಗವತಿಯ ಹೆಸರಿನಲ್ಲಿ ಕೊಡಗಿನ ಹಲವು ಊರುಗಳಲ್ಲಿ ದೇವಸ್ಥಾನವನ್ನು ಕಾಣುತ್ತೇವೆ.

ಮದೇರಪ್ಪನಿಗೆ ವರ್ಷಕ್ಕೊಮ್ಮೆ ಕುಂಬ್ಯಾರ್ ಮಾಸದಲ್ಲಿ ವಾರ್ಷಿಕ ಪೂಜೆ ಇರುತ್ತದೆ. ಈ ಸಂದರ್ಭ ಎತ್ತು ಹೇರಾಟ, ಬೊಳ್‌ಕಾಟ್ ಮುಂತಾದ ಪ್ರದರ್ಶನಗಳು ನಡೆಯುತ್ತದೆ. ಹಾಗೆಯೇ ಅಪ್ಪಂಗಿರಿಯಪ್ಪನಿಗೆ ಎರಡು ವರ್ಷಗಳಿಗೆ ಒಮ್ಮೆ ಉತ್ಸವವಿದ್ದು ಮೀನ ಮಾಸದಲ್ಲಿ ಕೊಂಬಾಟ್, ಕೊಡಿಮಾಟ್, ಬೊಳ್‌ಕಾಟ್ ಮುಂತಾದ ಕಲೆಗಳನ್ನು ಪ್ರದರ್ಶಿಸಲಾಗುತ್ತದೆ. ಭಗವತಿ ದೇವಸ್ಥಾನಗಳೂ ವರ್ಷಕ್ಕೊಮ್ಮೆ ಎರಡು ವರ್ಷಕ್ಕೊಮ್ಮೆ ವಾರ್ಷಿಕ ಹಬ್ಬ, ಜಾತ್ರೆ ನಡೆಯುತ್ತದೆ. ಮರಂದೊಡ್,

ಅಯ್ಯಂಗೇರಿ, ಸಿಂಗತ್ತೂರು, ಪದಕಲ್, ಚೇರಂಗಾಲ, ತಣ್ಣಿಮಾನಿ, ಕರಿಕೆ, ನಿಡುವಟ್ಟೂರು, ಚೇರಳಗ್ರಾಮ, ಪೊರ್‌ಮಲೆನಾಡು, ಎಮ್ಮೆಮಾಡು, ಮೊಣ್ಣಂಗೇರಿ ಅಮ್ಮತ್ತಿ ಮುಂತಾದ ಕಡೆ ಈ ಭಗವತಿ ದೇವಸ್ಥಾನಗಳಿವೆ. ಭಗವತಿ ಉತ್ಸವಗಳನ್ನು ಬೊಳಕ್‌ನಮ್ಮೆ ಎಂಬ ಹೆಸರಿನಿಂದ ಕರೆಯುತ್ತಾರೆ.

**ಐವ್ವ ಮಕ್ಕದೇವರು**

ಈ ದೇವರನ್ನು ಕೊಡವರು ಆರಾಧಿಸುತ್ತಾರೆ. ಪುರಾಣ ಕಥೆಯಲ್ಲಿ ಮತ್ತು ಐವ್ವ ಮಕ್ಕದೇಬುವರ ಪಾಟ್‌ನಲ್ಲಿ ಹೇಳುವಂತೆ ಕೇರಳದಿಂದ ಬಂದ ಐದು ದೇವರಲ್ಲಿ ಪುತ್ತು ಭಗವತಿಯೂ ಒಬ್ಬಳೂ. ಏಳು ಕಡಲಿನಾಚೆ ದೇವರ ಮಹಿಮೆಯಿಂದ ಬೆಳ್ಳಿ ಮತ್ತು ಚಿನ್ನದ ಶಂಖದಿಂದ ಹುಟ್ಟಿದ ಇಬ್ಬರೂ ಪುರುಷರು ಹಾಗೂ ಮೂವರು ಸ್ತ್ರೀ ದೇವರು ಬೆಳೆದು ದೊಡ್ಡವರಾದ ಮೇಲೆ ತಾವು ನೆಲೆಸಲು ಸ್ಥಾನವನ್ನು ಹುಡುಕಿಕೊಂಡು ಪಕ್ಷಿ ರೂಪದಲ್ಲಿ ಹೊರಡುತ್ತಾರೆ. ಅದರಂತೆ ಪೊನ್ನಂಪೇಟೆ ಬಳಿ ಮತ್ತಲೂರಿನಲ್ಲಿ ಮತ್ತಲಪ್ಪ ಹಾಗೂ ಟಿ.ಶೆಟ್ಟಿಗೇರಿ ಸಮೀಪ ವಗ್ಗರೆಯಲ್ಲಿ ವಗ್ಗರೆಯಮ್ಮ ದೇವರು ನೆಲೆ ನಿಲ್ಲುತ್ತಾರೆ. ಬಿಟ್ಟಂಗಾಲ ಸಮೀಪದ ರುದ್ರಗುಪ್ಪೆಯಲ್ಲಿ ಇಬ್ಬರು ಹೆಣ್ಣು ದೇವರು ನೆಲೆನಿಂತರು. ನೆಲೆ ನಿಲ್ಲಲು ಸೂಕ್ತ ಸ್ಥಳ ಸಿಗಲಿಲ್ಲವೆಂದು ಚಾಮುಂಡಿ ದೇವಿ ತಡೆದು, ತಾನೂ ಸೂಕ್ತ ಸ್ಥಳ ಹುಡುಕಲು ಸಹಾಯ ಮಾಡುವುದಾಗಿ ಹೇಳುತ್ತಾಳೆ. ಅಷ್ಟರಲ್ಲಿ ಬೆಳಗಾದ ಕಾರಣ ಭಗವತಿಯನ್ನು ಒಂದು ಹುತ್ತದ ಹಿಂದೆ ಅಡಗಿಸುತ್ತಾಳೆ. ಆದ್ದರಿಂದ ಭಗವತಿಗೆ ಪುತ್ತು ಭಗವತಿ ಎಂಬ ಹೆಸರು ಬಂದುದಾಗಿ ಹೇಳುತ್ತಾರೆ. ದಕ್ಷಿಣ ಕೊಡಗಿನ ಬಿರುನಾಣಿಯಲ್ಲಿ ಭಗವತಿ ದೇವಿಯು ಚಾಮುಂಡಿ ಸಹಾಯದಿಂದ ನೆಲೆಸುತ್ತಾಳೆ.

**ವೈತೂರಚ್ಚ**

ಕೇರಳದ ಕಣ್ಣೂರು ಜಿಲ್ಲೆಯಲ್ಲಿ ಇರುವ ದೇವರು ವೈತೂರಚ್ಚ ಕೊಡವರ ಎಲ್ಲಾ ಗ್ರಾಮದೇವರ ಆದಿನೆಲೆ. ಈ ವೈತೂರು ಅಥವಾ ಬೈತೂ. ಬೈತೂರಪ್ಪ ಎಂದರೆ ಶಿವ. ವೈತೂರಪ್ಪ ಎಂದರೆ ಶಿವ. ವೈತೂರಪ್ಪನ ಹಬ್ಬ ಜನವರಿ ೧೪ ರಿಂದ ಆರಂವಾಗಿ ಒಟ್ಟು ೧೧ ದಿನಗಳೂ ಈ ಉತ್ಸವ ನಡೆಯುತ್ತಿದೆ. ಇದು ವಾರ್ಷಿಕ ಹಬ್ಬವಾಗಿದ್ದು ಕೊಡವರು ಇಲ್ಲಿಗೆ ಆಗಮಿಸಿ ಅನುಗ್ರಹ ಪಡೆಯುತ್ತಾರೆ. ಅಲ್ಲದೆ ಕೊಡಗಿನ ಎಲ್ಲಾ ದೇವಸ್ಥಾನಗಳಿಂದ ಎತ್ತಪಾರೋಟ್ ಹೋಗುವ ಪದ್ದತಿ ಇದೆ. ಇಲ್ಲಿ ದೇವರ ಉತ್ಸವ ಮೂರ್ತಿ ಪ್ರದರ್ಶಿತವಾಗುತ್ತದೆ. ಕೊಡಗಿನಿಂದ ಬರುವ ಸುಮಾರು ೨೦೦ ಕ್ಕೂ ಹೆಚ್ಚು ತಿರುವಳಗಾರರು (ಮೈಮೇಲೆ ದೇವರ ಬರುವವರು) ಕೇರಳದ ಈ ದೇವರೊಂದಿಗೆ ಕುಣಿಯುತ್ತಾರೆ. ಅವರು ಒಂದು ನಿರ್ದಿಷ್ಟ ಸ್ಥಳದಲ್ಲಿ ತಾವು ತಂದ ಆಯುಧಗಳಾದ ಗೆಜ್ಜೆ ತಮಡರ, ತೊರೆಕೋಲು, ಒಡಿಕತ್ತಿ, ತ್ರಿಶೂಲ, ಕಡ್ತಲೆಗಳನ್ನು ಗುಡ್ಡೆ ಹಾಕಿರುತ್ತಾರೆ. ನಂತರ ಹೊಳೆಯಲ್ಲಿ ಮಿಂದು ಬಂದು ಮೈ ಮೇಲೆ ದೇವರು ಬಂದ ಸಂದರ್ಭ ಗುಡ್ಡೆ ಹಾಕಿದ ಜಾಗದಿಂದ ಆಯುಧಗಳನ್ನು ಯಾವುದೇ ಕಷ್ಟವಿಲ್ಲದೆ ಸುಲಭವಾಗಿ ಆರಿಸಿಕೊಳ್ಳುವುದು ವಿಶೇಷ. ಹೀಗೆ ಈ ಹಬ್ಬದಲ್ಲಿ ಕೊಡವರು ಪಾಲ್ಗೊಂಡು ವೈತೂರಪ್ಪನ ಅನುಗ್ರಹವನ್ನು ವರ್ಷಕ್ಕೊಮ್ಮೆ ಪಡೆಯುತ್ತಾರೆ.

### ಭಗಂಡೇಶ್ವರ

ಭಗಂಡೇಶ್ವರ ಕೂಡ ಕೊಡಗಿನ ಆರಾಧ್ಯ ದೈವವಾಗಿದ್ದು, ಭಗಂಡೇಶ್ವರ ದೇವಾಲಯವು ಭಾಗಮಂಡಲದಲ್ಲಿದೆ. ಕೊಡವರು ತಲಕಾವೇರಿಗೆ ಬರುವ ಮುನ್ನ ಈ ತ್ರಿವೇಣಿ ಸಂಗಮದಲ್ಲಿ ಮಿಂದು, ಭಗಂಡೇಶ್ವರ ದೇಗುಲದಲ್ಲಿ ಪೂಜೆ ಸಲ್ಲಿಸುತ್ತಾರೆ. ಭಗಂಡೇಶ್ವರ ದೇವಾಲಯದಲ್ಲಿ ಫೆಬ್ರವರಿ ತಿಂಗಳಲ್ಲಿ ಮಹಾಶಿವರಾತ್ರಿಯ ಉತ್ಸ ಹಾಗೂ ಏಪ್ರಿಲ್ ತಿಂಗಳಲ್ಲಿ ಮೂರು ದಿನಗಳ ವಾರ್ಷಿಕ ಉತ್ಸ ನಡೆಯುತ್ತದೆ.

### ಬೈನಾಡಪ್ಪ

ಬೈನಾಡಪ್ಪನು ಕೂಡ ಕೇರಳದಿಂದ ಬಂದ ದೇವರಾಗಿದ್ದು, ಶ್ರೀ ಇಗ್ಗುತ್ತಪ್ಪ ದೇವರ ಪರಿವಾರ ದೇವತೆಗಳಲ್ಲಿ ಒಬ್ಬನಾಗಿದ್ದಾನೆ. ಮೂಲ ನಾಮ ವಯನಾಡು ಬಲವನ್ ಎನ್ನುತ್ತಾರೆ. ಈ ದೇವರಿಗೆ ಸೂಕ್ಷ್ಮ ದೃಷ್ಟಿ ಮತ್ತು ಶ್ರವಣ ಶಕ್ತಿ ಇದ್ದು ದೇವಾಲಯಕ್ಕೆ ತೊಂದರೆ ಮಾಡುವವರನ್ನು ಮತ್ತು ದೇವಾಲಯದ ನಿಯಮಗಳಿಗೆ ವಿರುದ್ಧವಾಗಿ ನಡೆಯುವರನ್ನು ಶಿಕ್ಷಿಸುವೆನೆಂದು ಕೊಡವರ ನಂಬಿಕೆ. ಈ ದೇವರಿಗೆ ವರ್ಷಕ್ಕೊಮ್ಮೆ ವಿಶೇಷ ಉತ್ಸವ ನಡೆಯುತ್ತದೆ.

### ಕ್ಷೇತ್ರಪ್ಪ

ಕ್ಷೇತ್ರವನ್ನು ಪಾಲಿಸುವವನೇ ಕ್ಷೇತ್ರಪ್ಪ. ಈತ ಕೂಡ. ಇಗ್ಗುತ್ತಪ್ಪನ ಚರ್ತುದಿಕ್ಪಾಲಕರಲ್ಲಿ ಒಬ್ಬನಾಗಿದ್ದು, ಪಾಡಿ ಇಗ್ಗುತ್ತಪ್ಪ. ದೇವಾಲಯದ ಹೊರಾಂಗಣದಲ್ಲಿ ಆಗ್ನೇಯ ಭಾಗದಲ್ಲಿ ಕ್ಷೇತ್ರಪ್ಪನ ಕಲ್ಲು ಇದೆ. ಕೊಡಗಿನ ಪ್ರತೀ ದೇವಸ್ಥಾನದಲ್ಲಿ ಈ ಕ್ಷೇತ್ರಪ್ಪನ ಕಲ್ಲು ಕಂಡು ಬರುತ್ತದೆ.

### ನಾತನ ಪೂಜೆ

ಕೊಡವರ ದೇಶ್‌ಕೆಟ್ಟ್‌ಪಾಟ್ ನಲ್ಲಿ ಹೇಳಿರುವಂತೆ ಕೊಡಗಿನ ಊರಿನ ಓಣಿಯಲ್ಲಿ ಒಬ್ಬ ನಾತನಿರುತ್ತಾನೆ. ನಾತ ಎಂದರೆ ನಾಗದೇವತೆ. ನಾಗರಹಾವುಗಳು ಬಿದ್ದು ಸತ್ತ ಜಾಗವನ್ನು ನಾತ ಎಂದು ಪೂಜಿಸುತ್ತಾರೆ. ಕೊಡವರ ಪ್ರತಿ ಮನೆತನದ ಓಣಿಯಲ್ಲಿ ಒಂದೊಂದು ನಾಗನ ಕಲ್ಲು ಇದ್ದು ವರ್ಷಕ್ಕೊಮ್ಮೆ ಕಾರ್ತಿಕಮಾಸದಲ್ಲಿ ಬ್ರಾಹ್ಮಣ ಅರ್ಚಕರನ್ನು ಕರೆಸಿ ಈ ಕಲ್ಲಿಗೆ ಪೂಜಿಸುತ್ತಾರೆ. ಷಷ್ಟಿಯಂದು ವಿಶೇಷ ಪೂಜೆ ಇರುತ್ತದೆ. ಈ ನಾತನು ಕೂಡ ಕೇರಳದಿಂದ ಬಂದಿದ್ದು, ಕಾವೇರಮ್ಮನ ಆದೇಶದಂತೆ, ಓಣಿಗೊಬ್ಬ ನಾತನಾಗಿ ಕೊಡಗಿನಲ್ಲಿ ನೆಲೆ ನಿಂತಿದ್ದಾನೆ ಎಂಬುದು ಇಲ್ಲಿನ ಜನರ ನಂಬಿಕೆ

### ಕೇರಿಗೊಬ್ಬ ಅಯ್ಯಪ್ಪ

ಈತನನ್ನು ಕೊಡಗಿನಲ್ಲಿ ಬೇಟೆಗಾರ ಅಯ್ಯಪ್ಪನೆಂದು ಪೂಜಿಸುತ್ತಾರೆ. ಈ ಅಯ್ಯಪ್ಪ ಹರಿಹರ ಸುತ ಅಯ್ಯಪ್ಪನಾಗಿರದೆ ಬೇಟೆ ದೇವರಾಗಿದ್ದಾನೆ. ಈ ದೇವರಿಗೆ ದೇವಾಲಯಗಳಿಲ್ಲ. ಈ ದೇವರಿಗೆ

ಹಾಲು ಬರುವ ಮರದ ಅಡಿಯಲ್ಲಿ ನೆಲೆ ಇದ್ದು, ಭಕ್ತರು ಈತನಿಗೆ ಮಣ್ಣಿನಿಂದ ಮಾಡಿದ ನಾಯಿ, ಕುದುರೆ ಮತ್ತು ಬೇಟೆಗೆ ಬೇಕಾದ ಸಲಕರಣೆಗಳನ್ನು ಕಾಣಿಕೆಯಾಗಿ ನೀಡುತ್ತಾರೆ. ಜನಪದ ಗೀತೆ, ಎವ್ವ ಮಕ್ಕ ದೇಬುವಡ ಪಾಟ್‌ನಲ್ಲಿ ಹೇಳುವಂತೆ ಈ ಅಯ್ಯಪ್ಪನು ಕೂಡ ಕೇರಳದಿಂದ ವಲಸೆ ಬಂದು ಗುಹ್ಯದ ಶಿವನ ಅಣತಿಯಂತೆ ಕೊಡಗಿನ ಕೇರಿಗಳಲ್ಲಿ ಕೇರಿಗೊಬ್ಬ ಅಯ್ಯಪ್ಪನಾಗಿ ನೆಲೆಸುತ್ತಾನೆ. ಕೊಡಗಿನ ಪ್ರತಿ ಊರಿನಲ್ಲಿ ದೇವರಕಾಡಿದ್ದು ಅಲ್ಲಿ ಬೇಟೆ ದೇವರಾದ ಅಯ್ಯಪ್ಪನ ಸ್ಥಾನವಿರುತ್ತದೆ. ಬಿಳುಗುಂದದಲ್ಲಿ ಎಂಟು ದೇವರ ಕಾಡುಗಳಿವೆ. ಅವುಗಳಲ್ಲಿ ಉತ್ತರಾಟ್ ಅಯ್ಯಪ್ಪ, ಇನ್ನೊಂದು ಕಾಡ್ ಅಯ್ಯಪ್ಪ, ಇಲ್ಲಿ ವರ್ಷಕ್ಕೊಮ್ಮೆ ನವೆಂಬರ್, ಡಿಸೆಂಬರ್ ತಿಂಗಳಲ್ಲಿ ಹಬ್ಬ ನಡೆಯುತ್ತದೆ. ಕಡಂಗ ಸಮೀಪದ ಬಾವಲಿ ಎಂಬಲ್ಲಿ ಬೇಟೆ ಅಯ್ಯಪ್ಪನ ಜಾತ್ರೆಯು ನಡೆಯುತ್ತದೆ.

### ಶಾಸ್ತವು

ಶಾಸ್ತವು, ಸಾರ್ಥಾ ಎಂದು ಕರೆಯಲ್ಪಡುವ ಈ ದೇವರು ಹರಿಹರ ಸುತ ಅಯ್ಯಪ್ಪ, ಪಟ್ಟೋಲೆ ಪಳಮೆಯಲ್ಲಿ ಸಾರಾವುಡ ಪಾಟ್‌ನಲ್ಲಿ ಈ ಅಯ್ಯಪ್ಪನ ಬಗ್ಗೆ ಮಾಹಿತಿ ಸಿಗುತ್ತದೆ. ಅಯ್ಯಪ್ಪನು ಕೊಡಗಿನ ನಾನಾ ಸ್ಥಳಗಳಲ್ಲಿ ನೆಲೆ ನಿಂತಿದ್ದಾನೆ. ಎಂದು ಕೊಡಗಿನವರ ನಂಬಿಕೆ. ಪಾಡಿ ನಾಲ್ಕು ನಾಡಿನಲ್ಲಿ ಮಕ್ಕಿ ಶಾಸ್ತಾವು ಆಗಿ, ಕಡಿಯತ್ತು ನಾಡಿನಲ್ಲಿ ಮಕ್ಕಿ ಶಾಸ್ತವು ಆಗಿ, ಕಡಿಯುತ್ತು ನಾಡಿನಲ್ಲಿ ಮಲೆಶಾಸ್ತವು ಆಗಿ, ಉಡೆ ನಾಲ್ಕು ನಾಟಿನಲ್ಲಿ ಪೆರವಾಳು ಶಾಸ್ತವು ಎಂಬ ಹೆಸರಿನಲ್ಲಿ ಈತ ನೆಲೆನಿಂತಿದ್ದಾನೆ.

ಕೆಲವು ಶಾಸ್ತವು ದೇವಾಲಯದಲ್ಲಿ ಕೊಂಬಾಟ್ ಹಬ್ಬ ನಡೆಯುತ್ತದೆ. ಇದರಲ್ಲಿ ಕೊಂಬಾಟ್, ಬಿಲ್ಲಾಟ್,, ಪೀಲಿಯಾಟ್, ಕತ್ತಿಯಾಟ್, ಚೌರಿಯೂಟ್ ಮೊದಲಾದ ಕುಣಿತಗಳು ನಡೆದು ಈ ಕುಣಿತಗಳನ್ನು ಮೋಹಿನಿ ಭಸ್ಮಾಸುರನನ್ನು ಕೊಲ್ಲಲು ನರ್ತಿಸಿದ ಬಗೆಗಳು ಎನ್ನಲಾಗುತ್ತದೆ.

### ಮಕ್ಕಿ ಶಾಸ್ತವು

ಕೊಡವರ ಬೇಟೆ ದೇವರೆ ಮಕ್ಕಿ ಶಾಸ್ತವು ಅಥವಾ ಬೋಟೆಕಾರ ಅಯ್ಯಪ್ಪ. ಬೇಟೆಗಳಿಗೆ ಅಧಿದೇವ ಈತ. ಈ ದೇವರ ವಾಸ ಕಾಡಿನಲ್ಲಿ. ಪ್ರತಿ ಗ್ರಾಮದಲ್ಲೂ ದೊಡ್ಡ ಕಾಡಿನಲ್ಲಿ ಹಾಲು ಬರುವ ಮರದ ಅಡಿಯಲ್ಲಿ ಈ ದೇವರನ್ನು ಪ್ರತಿಷ್ಠಾಪಿಸಿರುತ್ತಾರೆ. ಈ ದೇವರಿಗೆ ಅರ್ಪಿಸುವ ಕಾಣಿಕೆ ಎಂದರೆ ಕಬ್ಬಿಣ, ಇತರ ಲೋಹ ಅಥವಾ ಮಣ್ಣಿನಿಂದ ಮಾಡಿದ ಬಿಲ್ಲು ಬಾಣ, ನಾಯಿ, ಕುದುರೆ ಮತ್ತಿತರ ಬೇಟೆಗೆ ಉಪಯುಕ್ತ ಪ್ರಾಣಿಗಳ ಗ್ರಹ, ನಾಪೋಕ್ಲುವಿನ ಸಮೀಪದ ಬೇತು ಗ್ರಾಮದ ಹತ್ತಿರದಲ್ಲಿ ಮಕ್ಕೆ ಎಂಬ ಸ್ಥಳದಲ್ಲಿ ಈ ದೇವಾಲಯವಿದೆ. ಇಲ್ಲಿ ಮೇ ಮತ್ತು ಡಿಸೆಂಬರ್ ತಿಂಗಳಲ್ಲಿ ಹಬ್ಬ ಜರುಗುತ್ತದೆ.

**ನಾಡಿಗೊಬ್ಬ ಮಾದೇವ**

ಕೊಡಗಿನಲ್ಲಿ ನಾಡಿಗೊಬ್ಬ ಮಾದೇವ ಇರುವನೆಂಬ ಮಾತಿದೆ. ಅದರಂತೆ ಕೊಡಗಿನ ಲಿಂಗಾಯಿತ ರಾಜ ದೊಡ್ಡವೀರರಾಜನು ಕೊಡಗನ್ನು ೩೫ ನಾಡುಗಳಾಗಿ ವಿಂಗಡಿಸಿ ಒಂದೊಂದು ನಾಡಿಗೂ ಒಂದು ನಾಡ ದೇವಸ್ಥಾನವನ್ನೂ ಕಟ್ಟಿಸಿ, ಅಲ್ಲಿ ಈಶ್ವರನ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿಸಿದನಂತೆ. ಈ ದೇವಾಲಯಗಳಲ್ಲಿ ನಿತ್ಯ ಪೂಜೆ, ವಿಶೇಷ ಪೂಜೆ, ವರ್ಷಕ್ಕೊಮ್ಮೆ ಹಬ್ಬವನ್ನು ಏರ್ಪಾಡು ಮಾಡಿದ್ದು ಕೊಡಗಿನಲ್ಲಿ ಈ ಮಾದೇವನನ್ನು ಆರಾಧಿಸುತ್ತಾರೆ.

**ಭಗವತಿ**

ಕೊಡಗಿನಲ್ಲಿ ಪೂಜಿಸುವ ಮತ್ತೊಂದು ದೇವರೆಂದರೆ ಭಗವತಿ. ಈ ದೇವಿಯು ಶಕ್ತಿ ದೇವತೆಯಾಗಿದ್ದು ಪೂವ್ವದಿ ಅಮ್ಮ, ಭಗವತಿ ಎಂಬ ಹೆಸರಿನಿಂದಲೂ ಕರೆಯುತ್ತಾರೆ. ಈ ದೇವಿ ಕೂಡ ಕೇರಳದಿಂದ ವಲಸೆ ಬಂದು, ಊರಿಗೊಬ್ಬ ಭಗವತಿಯೆನಿಸಿ ಕೊಡಗಿನ ಕೇರಿಗಳಲ್ಲಿ ನೆಲೆಸಿದ್ದಾಳೆ. ಈ ದೇವಿ ಪಾರ್ವತಿಯ ಅವತಾರವಾಗಿದ್ದು, ಇವಳಿಗೂ ವಾರ್ಷಿಕ ಹಬ್ಬ ನೆರವೇರುತ್ತದೆ. ಮುವ ಮಕ್ಕ ದೇವರಲ್ಲಿ ಒಬ್ಬಳು ಈ ಭಗವತಿ ದೇವಿಯಾಗಿದ್ದು ಕೊಡಗಿನ ಊರುಗಳಲ್ಲಿ ನೆಲೆಸಿದ್ದಾಳೆ.

**ಭದ್ರಕಾಳಿ**

ಕೊಡಗಿನಲ್ಲಿ ಆರಾಧಿಸುವ ಶಕ್ತಿ ದೇವತೆಗಳಲ್ಲಿ ಭದ್ರಕಾಳಿಯೂ ಒಬ್ಬಳು. ಇವಳು ಸಹ ಕೊಡಗಿನ ಊರುಗಳಲ್ಲಿ ನೆಲೆಸಿದ್ದು, ಪೂಜಿಸಲ್ಪಡುತ್ತಾಳೆ. ಇವಳಿಗೂ ವರ್ಷಕ್ಕೊಮ್ಮೆ ಅಥವಾ ಎರಡು ಬಾರಿ ಉತ್ಸವಗಳು ನಡೆಯುತ್ತವೆ. ಭದ್ರಕಾಳಿಯ ಹಬ್ಬದಲ್ಲೂ ಬೊಡ್‌ಕಳಿ ಇರುತ್ತದೆ. ಯುವಕರು ವಿವಿಧ ವೇಷಗಳನ್ನು ಹಾಕಿ ಮನೆಮನೆಗೆ ಹೋಗಿ ಕುಣಿಯುತ್ತಾರೆ. ಮನೆಯವರು ಕುಣಿದವರಿಗೆ ಸಂಬಾವನೆ ನೀಡುತ್ತಾರೆ. ನಂತರ ಎಲ್ಲರೂ ದೇವಸ್ಥಾನಕ್ಕೆ ಹೋಗಿ ಭಂಡಾರಕ್ಕೆ ಕಾಣಿಕೆ ಸಲ್ಲಿಸುತ್ತಾರೆ. ಹಬ್ಬವು ನಾಲ್ಕೈದು ದಿನ ನಡೆದು ಒಂದು ದಿನ ಎತ್ತುಪಾರೋಟ, ಬನಕ್ಕೆ ಹೋಗುವುದು. ಹೀಗೆ ಹಲವು ಆಚರಣೆಗಳು ನಡೆಯುತ್ತದೆ.

**ಇತರೆ ದೇವರುಗಳು**

ಈ ಮೇಲ್ಕಂಡ ದೇವರುಗಳಲ್ಲಿದೆ ಕೊಡಗಿನಲ್ಲಿ ಇನ್ನು ಹಲವಾರು ದೇವರುಗಳನ್ನು ಆರಾಧಿಸಲಾಗುತ್ತದೆ. ಅವುಗಳೆಂದರೆ, ಮಾರಮ್ಮ, ಕುಟ್ಟದಮ್ಮ, ಕರಿಕಾಳಿ, ಕರಿಂಗಾಳಿ ಇವು ಶಕ್ತಿ ದೇವತೆಗಳಾಗಿದ್ದು ಗ್ರಾಮದ ಜನರನ್ನು ಸದಾ ರಕ್ಷಿಸುವರೆಂಬ ನಂಬಿಕೆಯೊಂದಿಗೆ ಈ ದೇವತೆಗಳ ಹೆಸರಿನಲ್ಲಿ ಹಬ್ಬ ಹಾಗೂ ಉತ್ಸವಗಳು ಕೊಡಗಿನಲ್ಲಿ ನಡೆಯುತ್ತದೆ. ಇದಲ್ಲದೆ ಗಣಪತಿ, ಈಶ್ವರ ಪಾರ್ವತಿ ವಿಷ್ಣು ರಾಮ ಹನುಮ ಮುಂತಾದ ಪೌರಾಣಿಕ ಹಿನ್ನಲೆಯ ದೇವರುಗಳನ್ನು ಕೊಡಗಿನಾದ್ಯಂತ ಆರಾಧಿಸುತ್ತಿದ್ದು, ಈ ದೇವರುಗಳ ಹೆಸರಿನಲ್ಲಿ ಹಬ್ಬ ಹರಿದಿನಗಳು ಉತ್ಸವಗಳು ಜರುಗುತ್ತವೆ.

ಹೀಗೆ ಮೇಲ್ಕಂಡ ಹಲವಾರು ದೇವರುಗಳನ್ನು ಕೊಡಗಿನಾದ್ಯಂತ ಎಲ್ಲಾ ಜಾತಿ ಜನಾಂಗದವರು ಅವರುಗಳ ಆರಾಧ್ಯ ದೈವವಾಗಿ ಪೂಜಿಸಿ ವರ್ಷಕ್ಕೊಮ್ಮೆ ಹಬ್ಬ ಹಾಗೂ ಜಾತ್ರೆಗಳನ್ನು ನಡೆಸಿ ಅವುಗಳಲ್ಲಿ ಪಾಲ್ಗೊಂಡು ದೇವರ ಕೃಪೆಗೆ ಪಾತ್ರಾಗಿದ್ದಾರೆ. ಈ ದೇವರುಗಳ ಹೆಸರಿನಲ್ಲಿ ನಡೆಯುವ ಜಾತ್ರೆಗಳನ್ನು ಮುಂದಿನ ಅಧ್ಯಯನದಲ್ಲಿ ಸಮಗ್ರವಾಗಿ ಅರಿಯಬಹುದಾಗಿದೆ.

## ಅಡಿ ಟಿಪ್ಪಣಿಗಳು

೧. ಬಿ.ಡಿ.ಗಣಪತಿ, ಕೊಡವರು, ೧೯೬೭ ಪು೪೧

೨. ಬಿ.ಡಿ.ಗಣಪತಿ, ಕೊಡವರು ೧೯೬೭ ಪುಟ ೧೬೧

೩. ಡಿ.ಎನ್.ಕೃಷ್ಣಯ್ಯ ಕೊಡಗಿನ ಇತಿಹಾಸ, ೧೯೭೪, ಪುಟ೨೫,೨೬

೪. ಷ.ಶೆಟ್ಟರ್, ಶಂಗಂ ತಮಿಳಿಗಂ ಮತ್ತು ಕನ್ನಡ ನಾಡುನುಡಿ ೨೦೦೭, ಪುಟ ೧೬೮,
ಉದ್ಧೃತ : ವಿ.ರಾಮಮೂರ್ತಿ, ಹಿಸ್ಟರಿ ಆಫ್ ಕೊಂಗು, ಮದ್ರಾಸು ೧೯೮೬

೫. ವಿ.ಎಸ್.ರಾಮಾನುಜಂ, ಕೊಡವರು ೧೯೭೫ ಪುಟ ೧೪

೬. (ಸಂ) ಸೂರ್ಯನಾಥ ಕಾಮತ್, ಗ್ಯಾಸೆಟಿಯರ್, ಕೊಡಗು ಜಿಲ್ಲೆ ೧೯೯೨, ಪುಟ ೬೭

೭. ಬಿ.ಡಿ.ಗಣಪತ ಕೊಡವರು ೧೯೬೭ ಪುಟ ೧೬೫

೮. ಬಿ.ಡಿ.ಗಣಪತಿ ಕೊಡವರು ೧೯೬೭ ಪುಟ ೧೬೨

೯. (ಸಂ)ಸೂರ್ಯನಾಥ ಕಾಮತ್, ಗ್ಯಾಸೆಟಿಯರ್ – ಕೊಡಗು ಜಿಲ್ಲೆ ೧೯೯೨, ಪುಟ ೬೮
ಉದ್ಧೃತ : ಕೋಲ್, ಮೆಮೊರ್‍ಯಾಂಡಮ್ ಆನ್ ದಿ ಕ್ರೊಮ್‌ಲೆಕ್ಸ್ ಫೌಂಡ್ ಇನ್ ಕೂರ್ಗ್,
ಪ್ರೊಸಿಡಿಂಗ್ಸ್ ಆಫ್ ದಿ ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್, ೧೮೬೯ ಪುಟ ೫೪=೫೯

೧೦. ಡಿ.ಎನ್.ಕೃಷ್ಣಯ್ಯ ಕೊಡಗಿನ ಇತಿಹಾಸ ೧೯೭೪ ಪುಟ ೩೩

೧೧. ಡಿ.ಎನ್.ಕೃಷ್ಣಯ್ಯ ಕೊಡಗಿನ ಇತಿಹಾಸ ೧೯೭೪ ಪುಟ ೪೯

೧೨. ಡಿ.ಎಸ್.ಕೃಷ್ಣಯ್ಯ ಕೊಡಗಿನ ಇತಿಹಾಸ ೧೯೭೪ ಪುಟ ೫೪

೧೩. ಅರವಿಂದ ಮಾಲಗತ್ತಿ(ಸಂ) ಕನ್ನಡ ವಿಷಯ ವಿಶ್ವಕೋಶ, ಜಾನಪದ ೨೦೦೬ ಪುಟ ೨೪೧,೨೪೨

೧೪. ಕೊಡಗಿನಲ್ಲಿ ಗೌಡ ಜನಾಂಗದವರು ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಸಂಸ್ಕೃತಿಗಳು ಸ್ಮರಣ ಸಂಚಿಕೆ ಪು.ಸ ೨೯

೧೫. ಕೋರನ ಸರಸ್ವತಿ ಕೊಡಗು ಗೌಡ ಸಮುದಾಯ ಮುದ್ದುಶ್ರೀ ಗ್ರಂಥಮಾಲೆ ೨೦೧೦ ಪ್ರ.ಸಂ ೨೭೬

೧೬. ಪಿ.ಎಸ್.ರಾಮಾನುಜಂ, ಕೊಡವರು, ಪ್ರಸಾರಾಂಗ, ಮೈ.ವಿ.ವಿ. ಮೈಸೂರು ೧೯೭೫ ಪು.ಸಂ ೪೪

## ಅಧ್ಯಾಯ-೩
# ಜಾತ್ರೆಗಳ ಹಿನ್ನೆಲೆ, ಸ್ವರೂಪ, ಅರ್ಥ ಮತ್ತು ವ್ಯಾಖ್ಯೆ

೩.೧ ಜಾತ್ರೆ : ಐತಿಹಾಸಿಕ ಹಿನ್ನೆಲೆ

೩.೨ ಜಾತ್ರೆ : ಸ್ವರೂಪ

೩.೩ ಜಾತ್ರೆ : ಹುಟ್ಟು ಮತ್ತು ಬೆಳವಣಿಗೆ

೩.೪ ಜಾತ್ರೆ : ಅರ್ಥ ಮತ್ತು ವ್ಯಾಖ್ಯೆ

೩.೫ ಜಾತ್ರೆ ಮತ್ತು ಹಬ್ಬ

೩.೬ ಜಾತ್ರೆ : ವಿವಿಧ ಹೆಸರುಗಳು

ಅಧ್ಯಾಯ-೩

# ಜಾತ್ರೆಗಳ ಹಿನ್ನೆಲೆ, ಸ್ವರೂಪ, ಅರ್ಥ ಮತ್ತು ವ್ಯಾಖ್ಯೆ

## ೩.೧ ಜಾತ್ರೆ: ಐತಿಹಾಸಿಕ ಹಿನ್ನೆಲೆ

ಬುಡಕಟ್ಟು ಜನರ ಭೌಗೋಳಿಕ ಪರಿಸರವನ್ನು, ಸಂಸ್ಕೃತಿಯನ್ನು ಸಂಶೋಧಿಸುತ್ತಾ ಹೋದಂತೆ ಭಾರತದಲ್ಲಿ ಮಾತ್ರವಲ್ಲದೆ ಪ್ರಪಂಚದ ಎಲ್ಲಾ ಬುಡಕಟ್ಟುಗಳ ನಡುವೆ ಅನೇಕ ಭಿನ್ನತೆ ಮತ್ತು ಸಾಮ್ಯತೆಗಳು ಇರುವುದು ಕಂಡುಬರುತ್ತವೆ. ಆದಿಮಾನವನಿಂದ ಹಿಡಿದು ಆಧುನಿಕ ಮಾನವನವರೆಗೆ ಬದುಕಿನಲ್ಲಿ ಅನೇಕ ಪರಿವರ್ತನೆಗಳಾಗುತ್ತಾ ಬಂದಿವೆ. ಪರಿಸರ ಪರಿಮಿತಿಗೆ ಅನುಗುಣವಾಗಿ ಭಾಷೆ, ಸಂಸ್ಕೃತಿ, ಜೀವನ ವಿಧಾನಗಳು ಮತ್ತು ಜೀವನ ಶೈಲಿಯಲ್ಲಿ ವಿಕಾಸ ಹೊಂದುತ್ತಾ ಬಂದಿರುವುದನ್ನು ಕಾಣುತ್ತೇವೆ. "ನಿರಂತರ ಪರಿವರ್ತನಾಶೀಲವಾದ ಮಾನವಸಂಸ್ಕೃತಿಯ ಒಳತಿರುಳನ್ನು ಅರಿಯಬೇಕಾದರೆ ಅಂದಿನ ಸಂಸ್ಕೃತಿಯ ಕಡೆಗೆ ಗಮನ ಹರಿಸಬೇಕಾಗುತ್ತದೆ."[೧] ಇಂತಹ ಬುಡಕಟ್ಟು ಜನರ ಸಂಸ್ಕೃತಿಯ ಆಚರಣೆಯ ಪ್ರಮುಖ ಅಂಶವೇ ಚರಿತ್ರೆ.

ಜಾತ್ರೆಯ ಆಚರಣೆಗಳು ಏಕಮುಖವಾಗಿರದೆ ವೈವಿಧ್ಯಮಯವಾಗಿದ್ದು ಎಲ್ಲಾ ಸಮಾಜಗಳಲ್ಲೂ ಆಚರಣೆಯಲ್ಲಿವೆ. ಪ್ರಸ್ತುತ ಆಚರಣೆಯಲ್ಲಿರುವ ಜಾತ್ರೆಗಳು ಎಂದು, ಎಲ್ಲಿ, ಹೇಗೆ ಹುಟ್ಟಿಕೊಂಡವು? ಎಂಬ ಪ್ರಶ್ನೆಗಳಿಗೆ ನಿಖರವಾಗಿ ಉತ್ತರ ಹೇಳುವುದು ಕಷ್ಟ. ಆದರೂ ಭೂಮಿಯ ಮೇಲೆ "೪೦,೦೦೦ ವರ್ಷಗಳ ಹಿಂದೆ ಮನುಷ್ಯನು ರೂಪುಗೊಂಡು, ತದನಂತರ ಮಾನವ ಜೀವಿಯ ವಿಕಾಸಕ್ಕೆ ೪ ರಿಂದ ೫ ಮಿಲಿಯನ್ ವರ್ಷಗಳ ಅವಧಿ ಹಿಡಿದಿದೆ"[೨] ಈ ಅವಧಿಯಲ್ಲಿ ಮನುಕುಲವು ತನ್ನ ಬೌದ್ಧಿಕ ವಿಕಾಸವನ್ನು ಮೂರು ಹಂತಗಳಲ್ಲಿ ಕಂಡಿದೆ ಎಂಬುದಾಗಿ ಸಮಾಜಶಾಸ್ತ್ರದ ಪಿತಾಮಹ ಆಗಸ್ಟ್‌ಕೋಮ್ಟ್ ಆಲೋಚಿಸಿದ್ದಾರೆ, ಅಲ್ಲದೆ ಮಾನವ ಕುಲದ ಬೌದ್ಧಿಕ ವಿಕಾಸ ಹಾಗೂ ಆದರಿಂದ ಪ್ರಭಾವಿತಗೊಳ್ಳುವ ಸಾಮಾಜಿಕ ವಿಕಾಸದ ಪ್ರಕ್ರಿಯೆಗಳಲ್ಲಿಯೂ ಮೂರು ಹಂತಗಳನ್ನು ಗುರುತಿಸಿದ್ದಾರೆ.

ಭೂಮಿಯ ಮೇಲೆ ಜೀವಿಗಳು ಉಗಮವಾಗಿ ಕೋಟ್ಯಾಂತರ ವರ್ಷಗಳ ನಂತರ ಮಾನವ ಭೂಮಿಯ ಮೇಲೆ ಅಸ್ತಿತ್ವಕ್ಕೆ ಬಂದ. ನಿಸರ್ಗದ ಮಗುವಾಗಿದ್ದ ಮನುಷ್ಯ ಆರಂಭದಲ್ಲಿ ಪ್ರಕೃತಿಯ ರೌದ್ರತೆಯ ಮುಖಗಳಾದ ಮಿಂಚು, ಗುಡುಗು, ಸಿಡಿಲು, ಪ್ರವಾಹ, ಅತಿವೃಷ್ಟಿ, ಅನಾವೃಷ್ಟಿ, ಭೂಕಂಪ, ಜ್ವಾಲಾಮುಖಿ, ಭೀಕರ ಬರಗಾಲ, ಭಯಾನಕ ರೋಗ ರುಜಿನಗಳಿಂದ ಗಾಬರಿಯಾದ ನಂತರ

ಭೂಮಿ, ಆಕಾಶ, ಸೂರ್ಯ, ಚಂದ್ರ, ನಕ್ಷತ್ರ, ಹಗಲು, ರಾತ್ರಿ, ಅಮವಾಸ್ಯೆ, ಹುಣ್ಣಿಮೆ ಇತ್ಯಾದಿ ರಹಸ್ಯಗಳನ್ನು ತಿಳಿಯಲಾಗದೆ ಆಶ್ಚರ್ಯಚಕಿತನಾದ, ಅಲ್ಲದೆ ನವಿರಾಗಿ ಬೀಸುವ ತಂಗಾಳಿ, ಜುಳು ನಾದಗೈಯುವ ವಿಸ್ತಾರ, ಸೂರ್ಯಾಸ್ತ, ಸೂರ್ಯೋದಯದ ಸಮಯದಲ್ಲಿ ಆಕಾಶದ ಹೊಂಬಣ್ಣ, ಭೂಮಂಡಲವನ್ನೇ ಹಸಿರು ಹಾಸಿಗೆಯನ್ನಾಗಿಸುವ ಕಾರ್ಮೋಡ, ಆಕಾಶಕ್ಕೆ ಮುತ್ತಿಕ್ಕುವ ಬೆಟ್ಟಗುಡ್ಡಗಳು, ತಂಗಾಳಿಗೆ ಮೈಯೊಡ್ಡಿ ಬಾ ಎಂಬಂತೆ ಕೈ ಬೀಸಿ ಕರೆಯುವ ಬಣ್ಣ ಬಣ್ಣದ ಹೂಗಳು, ತಮ್ಮ ಕಿಚಿ ಪಿಚಿ ಧ್ವನಿಯಿಂದ ಕ್ಷಣಕಾಲ ಪ್ರಪಂಚದಿಂದಲೇ ನಮ್ಮ ಮೈ ಮರೆಸುವ ಚಿಕ್ಕ-ಪುಟ್ಟ ಹಕ್ಕಿಗಳ ಸೃಷ್ಟಿ ಇವೆಲ್ಲ ಯಾವ ಗಾರುಡಿಯ, ಮಾನವೀಯ, ಮೋಡಿಗಾರನ, ಮಂತ್ರವಾದಿಯ ಕೈ ಚಳಕ ಎಂಬ ನೂರೆಂಟು ಮೌನ ಪ್ರಶ್ನೆಗಳ ಒಳಗೆ ಮಾನವನ ಉಳಿವೇ ಒಂದು ಪ್ರಶ್ನೆಯಾಗಿ ಉಳಿಯಿತು. ನಿಸರ್ಗದ ಈ ಕಾರ್ಯಗಳನ್ನೆಲ್ಲಾ ಮಾಡುವವನು ಮಹಾಶಕ್ತಿವಂತನಿರಬೇಕೆಂದು, ಅವನನ್ನು ಎದುರು ಹಾಕಿಕೊಂಡರೆ ನಮಗೆ ಉಳಿಗಾಲವಿಲ್ಲವೆಂದು ಹೆದರಿದ ಮನುಷ್ಯ ಆ ಮಹಾ ಅಗೋಚರ ಶಕ್ತಿಯನ್ನೇ ದೇವರೆಂದು ಕಲ್ಪಿಸಿಕೊಂಡಿರಬೇಕು. ಅವನಿಗೇನಾದರೂ ತೊಂದರೆ, ಭಯ, ಇನ್ನಿತರೆ ಯಾವುದೇ ಕಷ್ಟಗಳು ಎದುರಾದಾಗ ಅವುಗಳ ನಿವಾರಣೆಗಾಗಿ ಅಗೋಚರಶಕ್ತಿಯಾದ ಆ ದೇವರ ಮೊರೆ ಹೋಗಿರಬೇಕು. ನಾಟಕೀಯವೆಂಬಂತೆ ಅವನಿಗೇನಾದರೂ ಒಳಿತುಂಟಾಗಿದ್ದರೆ ಇದಕ್ಕೆಲ್ಲ ದೇವರು ನಮ್ಮ ಮೇಲಿಟ್ಟಿರುವ ಅನುಗ್ರಹದ ಪ್ರೀತಿಯೇ ಕಾರಣವೆಂದು ಭಾವಿಸಿ, ಅದರ ಆರಾಧನೆಯಲ್ಲಿ ತೊಡಗಿರಬೇಕು. ಈ ಯೋಚನೆಯೇ ಅವನಲ್ಲಿ ಹೆಚ್ಚು ಜೀವನಾಸಕ್ತಿಯನ್ನು ಬೆಳೆಸಿ ತನ್ನ ಸುತ್ತಲಿನ ಪರಿಸರದ ಚರಾಚರವನ್ನು ಪೂಜಿಸುವಂತೆ ಮಾಡಿರಬೇಕು. ಸೃಷ್ಟಿಯ ಹಿಂದೆ ಇರುವ ರಹಸ್ಯವನ್ನು ತಿಳಿಯಲಾಗದ ವಿಸ್ಮಯಗಳಿಂದಾಗಿಯೇ ಮೊದಲು ದೇವರ ಕಲ್ಪನೆ ಉಂಟಾಯಿತು ಎಂಬುದು ಮಾನವಶಾಸ್ತ್ರಜ್ಞರ ಅಭಿಮತ.

"ಶತಮಾನಗಳ ಹಿಂದೆ ಮಾನವ ತನ್ನ ಸುತ್ತಲ ಪ್ರಪಂಚವನ್ನು ಕುತೂಹಲದಿಂದ ನೋಡಲಾರಂಭಿಸಿದಾಗ ಅವನಿಗೆ ಕಂಡದ್ದೇನು? ಅಗ್ನಿಪರ್ವತಗಳಿಂದ ಭುಗಿಲೆದ್ದು ಗಗನಕ್ಕೆ ಏರುತ್ತಿರುವ ಜ್ವಾಲೆ, ಕಾದು ಕರಗಿ ಉಕ್ಕಿ ತನ್ನ ದಾರಿಯಲ್ಲಿ ಸಿಕ್ಕಿದ್ದನ್ನೆಲ್ಲ ಸುಟ್ಟು ಹರಿಯುತ್ತಿರುವ ಲಾವಾರಸ, ಮೋಡದ ದಟ್ಟಣೆಯನ್ನು ಇರಿದಿರಿದು ಕಣ್ಣು ಕೋರೈಸುವ ಮಿಂಚು, ಕಾಡ್ಗಿಚ್ಚಿನಿಂದ ಭಸ್ಮವಾಗುತ್ತಿರುವ ಕಾಡು, ಕ್ಷುಬ್ಧವಾದ ಸಮುದ್ರ, ಅದರ ತೀರದ ಮೇಲೆ ಅಪ್ಪಳಿಸುವ ಅಲೆಗಳು, ಇವುಗಳ ಜೊತೆಗೆ ಗುಡುಗಿನ ಆರ್ಭಟ, ಸಿಡಿಲಿನ ಹೊಡೆತ. ಈ ಭಯಂಕರ ಪ್ರಪಂಚದಲ್ಲಿ ನಾನು ಹೇಗೆ ತಾನೆ ಬದುಕಿಯೇನು? ಎಂದು ಅವನು ತಲ್ಲಣಿಸಿರಬೇಕು. ಹೀಗೆ ಪ್ರಕೃತಿಯ ರೋಷವನ್ನೂ ಅದರ ಮಾರಕ ಪರಿಣಾಮವನ್ನೂ ನೋಡಿದ ಮಾನವನೇ ಅದರ ಮತ್ತೊಂದು ಮುಖವನ್ನು ನೋಡಿದ. ಸೂರ್ಯೋದಯ, ಸೂರ್ಯಾಸ್ತಗಳ ಬಣ್ಣದ ಸಿರಿ, ಕಾಮನಬಿಲ್ಲಿನ ಸೊಬಗು, ಮಳೆಯಿಂದ ತೊಯ್ದು ಕಾಡಿನಲ್ಲಿ ಹಾಗೂ ಬಯಲಿನಲ್ಲೂ ಹಸುರಿನ ಹಬ್ಬ. ಗಾಳಿಯಲ್ಲಿ ನಲಿದಾಡುವ ಹೂವುಗಳ ಕೋಮಲತೆ,

ರಾತ್ರಿಯ ಆಕಾಶದಲ್ಲಿ ಮಿನುಗುವ ನಕ್ಷತ್ರಗಳು ಹಾಗೂ ಅವುಗಳ ನಡುವಿನ ರಹಸ್ಯಪೂರ್ಣ ನೀಲಿಯಾಳ, ಜಗತ್ತನ್ನೆಲ್ಲ ಸೌಮ್ಯ ಸೌಂದರ್ಯವನ್ನು ಕೊಟ್ಟು ತಂಪೆರೆಯುವ ಬೆಳದಿಂಗಳು, ಸಮುದ್ರದ ಪಾರವಿಲ್ಲದ ಹರವು, ಗಾಂಭೀರ್ಯ.

ಮೊದಲು ಕ್ರೂರವಾಗಿದ್ದ ಪ್ರಕೃತಿಯೇ ಈಗ ಪ್ರಸನ್ನವಾಗಿದೆ. ಆಗಿನ ಮುಗ್ಧ ಮಾನವನಿಗೆ ಇದನ್ನು ಕಂಡು ಆಶ್ಚರ್ಯ, ಸಂತೋಷ. ಅದು ಒಂದು ಬಗೆಯ ಮೂಕ ಅನುಭವ. ಅವನು ಅದನ್ನು ಬಣ್ಣಿಸಲಾರ, ವಿಶ್ಲೇಷಿಸಲಾರ. ಈ ರುದ್ರ ಸುಂದರ ಭೀಷಣ ಪ್ರಸನ್ನ ಪ್ರಪಂಚದ ವ್ಯಾಪಾರ– ಅವನಿಗೆ ಅದೊಂದು ಒಗಟೆ. ಇದೆಲ್ಲ ಯಾರ ಕೆಲಸ? ಯಾವ ಗಾರುಡಿಯ, ಯಾವ ಮಾಯಮಂತ್ರದ ಫಲ? ಇದರ ಹಿಂದೆ ಭವ್ಯವಾದದ್ದು ಏನೋ ಇರಬೇಕು. ಅದು ಶತ್ರುವೋ ಮಿತ್ರನೋ? ಅದರದ್ದು ಚಂಚಲ ಮನೋವೃತ್ತಿ. ಈ ಘಳಿಗೆ ಮೈದಡವುತ್ತಿರುವ ತಂಗಾಳಿ ಮರುಘಳಿಗೆ ಸುಂಟರಗಾಳಿಯಾಗಬಹುದು. ನಿಂತ ನೆಲ ಬಾಯ್ದೆರೆಯಬಹುದು! ಪ್ರಕೃತಿ ವ್ಯಾಪಾರದ ಹಿಂದೆ ಒಂದು 'ಶಕ್ತಿ' ಇದೆ ಎಂದು ಈಚಿನ ತತ್ವಜ್ಞರು ಹೇಳುವ ಮಾತು ಬಹುಶಃ ಆದಿ ಮಾನವನಿಗೆ ಹೊಳೆಯುತ್ತಿರಲಿಲ್ಲ. ಅವನ ಮನಸ್ಸು ಬಲಶಾಲಿಯಾದ ಯಾವುದೋ ಒಂದು ವಸ್ತುವನ್ನು ಅಥವಾ ವ್ಯಕ್ತಿಯನ್ನು ಕಲ್ಪಿಸಿಕೊಳ್ಳಬಲ್ಲದು, ಅಮೂರ್ತವಾದ ಶಕ್ತಿಯನ್ನಲ್ಲ. ಹಾಗೆ ಕಲ್ಪಿಸಿಕೊಂಡ ವಸ್ತುವಿನ ಅಥವಾ ವ್ಯಕ್ತಿಯ ವ್ಯಾಪಾರವೆಲ್ಲ ಮಾಯಾಮಂತ್ರದ ಕೆಲಸ!

ಬಹುಶಃ ಇಂಥದೇನೋ ಇರಬೇಕು–'ದೇವರು' ಎಂಬ ಕಲ್ಪನೆಯ ಪೂರ್ವ ಇತಿಹಾಸ. ಕಲ್ಪನೆಯ ಹಿಂದೆ ಭಯ, ಆಶ್ಚರ್ಯ, ರಕ್ಷಣೆಯನ್ನು ಬೇಡುವ ಮನೋವೃತ್ತಿ, ಇವೆಲ್ಲವನ್ನೂ ಗುರುತಿಸಬಹುದು. ಅಂತೂ ದೇವರನ್ನು ಎದುರು ಹಾಕಿಕೊಂಡರೆ ಅವನು ವಿಪತ್ತು ತಂದೊಡ್ಡುತ್ತಾನೆ ಎಂಬ ಭಯದಿಂದಲೋ, ಸುತ್ತಿನ ಅಪಾಯಕರ ಪ್ರಪಂಚದ ಕೋಟಲೆಯಿಂದ ನಮ್ಮನ್ನು ಪಾರುಮಾಡಿಯಾನು ಎಂಬ ನಿರೀಕ್ಷೆಯಿಂದಲೋ, ಅವನು ನಮ್ಮ ಉನ್ನತೋನ್ನತ ಮೌಲ್ಯಗಳ ಸಂಕೇತ ಎಂಬ ಭಾವನೆಯಿಂದಲೋ–ಒಂದಲ್ಲ ಒಂದು ಕಾರಣದಿಂದಾಗಿ ಅಥವಾ ಇವೆಲ್ಲ ಕಾರಣಗಳಿಂದಾಗಿ ಈ 'ದೇವರು' ಎಂಬ ಕಲ್ಪನೆ ನಮ್ಮ ಮನಸ್ಸಿನಲ್ಲಿ ಸುಳಿದಾಡುತ್ತಲೇ ಇರುತ್ತದೆ. ಸಾವಿರಾರು ವರ್ಷಗಳಿಂದ ನಮ್ಮೊಡನೆ ಇದ್ದದ್ದು, ಈಗಲೂ ಇರುವುದು ಈ ಕಲ್ಪನೆ"[೩] ಹೇಗೆ ದೇವರ ಕೃಪೆಗೆ ಪಾತ್ರರಾಗಿ ಅವನಿಂದ ತಮ್ಮ ಅಭಿವೃದ್ಧಿಗೆ ಪೂರಕ ವಾತಾವರಣವನ್ನು ಕರುಣಿಸುವಂತೆ ಅವನಲ್ಲಿ ಭಕ್ತಿಪೂರ್ವಕವಾಗಿ ಬೇಡಿಕೊಳ್ಳಲು ಇಡೀ ಸಮೂಹ ಒಂದೆಡೆ ಸೇರಿ ಅವನ ಹೆಸರಿನಲ್ಲಿ ಮಾಡುವ ಧಾರ್ಮಿಕ ವಿಧಿ ನಿಯಮಗಳ ಆಚರಣೆಗಳೇ ಜಾತ್ರೆಗಳು.

ಮಾನವ ತನ್ನ ಉಗಮದ ಅದಿಯಲ್ಲಿ ಪ್ರಕೃತಿಯ ಪ್ರತಿಯೊಂದು ಘಟನೆಗಳ ಹಿಂದೆ ದೇವರ ಇಲ್ಲವೆ ಅಸುರರ ಪ್ರಭಾವವಿದೆ ಎಂದು ನಂಬಿದ್ದ. ಈ ಬಗೆಯ ಪ್ರಭಾವ ಪ್ರಕೃತಿಯ ಚರಾಚರಗಳಲ್ಲೂ ಆವರಿಸಿದೆ ಎಂಬ ಭಾವನೆ ಅವನಲ್ಲಿತ್ತು. ಪ್ರಕೃತಿಯ ಸಹಜ ಕ್ರಿಯೆಗಳಾದ ಸೂರ್ಯೋದಯ,

ಸೂರ್ಯಾಸ್ತ, ಮಳೆ, ಬಿರುಗಾಳಿ, ಪ್ರವಾಹ, ಋತುಮಾನಗಳು, ಭೂಕಂಪ, ಭೂಕುಸಿತ, ಜ್ವಾಲಾಮುಖಿ ಮೊದಲಾದ ಕ್ರಿಯೆಗಳನ್ನು ಯೋಜಿಸುವ ಮತ್ತು ಕಾರ್ಯರೂಪಕ್ಕೆ ತರುವ ಯಾವುದೋ ಅಮೂರ್ತಶಕ್ತಿ ಪ್ರಕೃತಿಯ ಪ್ರತಿಯೊಂದು ಅಣುವಿನಲ್ಲು ತುಂಬಿದೆಯೆಂದು ಭಾವಿಸಿ ಅದನ್ನು ಸಂತೃಪ್ತಿಪಡಿಸಲು ವಸ್ತುಪೂಜೆಯನ್ನು ನೆರವೇರಿಸುತ್ತಾ ಬಂದಿದ್ದಾನೆ. ಇಂತಹ ಪೂಜಾ ವಿಧಾನದ ಆಚರಣೆಗಳಲ್ಲಿ ಸಮುದಾಯದ ಸಮಸ್ತರೂ ಮುಂದೆ ಎದುರಾಗಲಿರುವ ಸಂಕಟದ ಸುಳಿಯಿಂದ ಪಾರಾಗಬೇಕೆಂಬ ಭಯದಿಂದ ಒಂದುಗೂಡಿ ಕೈಗೊಂಡ ವಿಶೇಷ ಪೂಜೆಯ ಆಚರಣೆಗಳೇ ಜಾತ್ರೆಗಳಾಗಿ ಮುಂದುವರೆದುಕೊಂಡು ಬಂದಿವೆ.

ಧಾರ್ಮಿಕ ಮೌಲ್ಯಗಳ ನೈಸರ್ಗಿಕ ಘಟನೆಗಳನ್ನು ತಮ್ಮ ಮೂಲ ದಾಖಲೆಯನ್ನಾಗಿಸಿಕೊಂಡಿವೆ. "ಧಾರ್ಮಿಕ ಮೌಲ್ಯಗಳೇ ದೇವರು"[೪]. ನೈಸರ್ಗಿಕ ಶಕ್ತಿಯನ್ನು ಪೂಜಿಸತೊಡಗಿದ ವಿಶೇಷ ಸಂದರ್ಭಗಳು ಜಾತ್ರೆಗಳೆನಿಸಿಕೊಂಡಿವೆ. ನಿರಂತರವಾಗಿ ನಡೆಯುತ್ತಿದ್ದ ನಿಸರ್ಗದ ವಿವಿಧ ಘಟನೆಗಳ ಹಿಂದಿರಬಹುದಾದ ಕಾರ್ಯ-ಕಾರಣ ಸಂಬಂಧಗಳನ್ನು ಅರ್ಥೈಸಲಾಗದೆ ಹಾಗೂ ಕಂಡುಹಿಡಿಯಲಾಗದೆ ಅದಕ್ಕೆ ದೇವರೆ ಕಾರಣವೆಂದು ಭಾವಿಸಿ ಅದನ್ನು ಆರಾಧಿಸಲು ಹೊರಟ ಸಂದರ್ಭಗಳು ಜಾತ್ರೆಗಳಾಗಿ ಹೊರಹೊಮ್ಮಿವೆ. ಅತಿವೃಷ್ಟಿ ಇಲ್ಲವೇ ಅನಾವೃಷ್ಟಿಗಳಂತಹ ಸನ್ನಿವೇಶಗಳನ್ನು ನಾವು ಇಲ್ಲಿ ಉದಾಹರಿಸಬಹುದು. ಮತವೇ ಪ್ರಧಾನವೆಂದು ಭಾವಿಸಿ ಜೀವಿಸಿದ್ದ ಅವಧಿಯನ್ನು ಸಮಾಜಶಾಸ್ತ್ರಜ್ಞರಾದ ಆಗಸ್ಟ್‌ಕೋಮ್ಟ್ ಧರ್ಮಶಾಸ್ತ್ರೀಯ ಹಂತ ಎಂದು ಗುರುತಿಸಿದ್ದಾರೆ. ಅಲ್ಲದೆ ಈ ಅವಧಿಯಲ್ಲಿ;

- ವಸ್ತು ಪೂಜೆ
- ಬಹುದೇವತಾರಾಧನೆ
- ಏಕದೇವತಾರಾಧನೆ

ಎಂಬ ಮೂರು ಉಪ ಹಂತಗಳನ್ನು ಧರ್ಮಶಾಸ್ತ್ರೀಯ ಹಂತದಲ್ಲಿ ಸೂಚಿಸಿದ್ದಾರೆ.

**ವಸ್ತುಪೂಜೆ**

ಜಗತ್ತಿನ ಪ್ರತಿಯೊಂದು ಚರಾಚರ ಅಣುರೇಣುತೃಣಕಾಷ್ಟಗಳಲ್ಲಿ ದೈವಶಕ್ತಿ ಇದೆಯೆಂದು ಭಾವಿಸಿ ಆರಾಧಿಸುವುದು. ಪ್ರಸ್ತುತ ಭಾರತೀಯ ಗ್ರಾಮೀಣ ಭಾಗಗಳಲ್ಲಿ ಇದು ಹೆಚ್ಚಾಗಿ ಕಂಡುಬರುತ್ತದೆ. ಇದನ್ನು ಇಂದಿಗೂ ಜನ ಬಹುವಾಗಿ ನಂಬಿದ್ದಾರೆ. ಮರ, ಗಿಡ, ಹುತ್ತ, ಕಲ್ಲು, ನೇಗಿಲು,..... ಇತ್ಯಾದಿಗಳ ಪೂಜೆ.

**ಬಹುದೇವತಾರಾಧನೆ**

ದೇವರು, ದೇವತೆ, ಪ್ರಕೃತಿ ಹಾಗೂ ಮನುಷ್ಯನ ಶಕ್ತಿಯನ್ನು ವರ್ಗೀಕರಿಸತೊಡಗಿದ. ದೇವರು ಹಾಗೂ ದೇವತೆಗಳ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾದಾಗ ಅವುಗಳನ್ನು ಮಹತ್ವದ ಆಧಾರದ

ಮೇಲೆ, ಶಕ್ತಿಯ ಆಧಾರದ ಮೇಲೆ ವರ್ಗೀಕರಿಸಿ ಪೂಜಿಸಲಾರಂಭಿಸಿದ. ಇದರಿಂದ ಪ್ರತಿಯೊಂದು ದೇವಾನುದೇವತೆಗಳಿಗೆ ಅದರದೇ ಆದ ನಿಶ್ಚಿತ ಕಾರ್ಯ ಮತ್ತು ಕಾರ್ಯಕ್ಷೇತ್ರದ ವ್ಯಾಪ್ತಿಯನ್ನು ನಿರ್ಧರಿಸಿದ.

**ಏಕದೇವತಾರಾಧನೆ**

ದೇವರು ಅಮೂರ್ತ ಶಕ್ತಿ. ದೇವರೊಬ್ಬನೆ ನಾಮ ಹಲವು ಎಂಬ ನಿಲುವು ''ಎಲ್ಲ ದೇವರೂ ಒಂದೇ, ತಮಗೆ ನೆರವು ನೀಡುವ, ಅನ್ನ ನೀಡುವ, ಆಶ್ರಯ ನೀಡುವ ವ್ಯಕ್ತಿ, ವಸ್ತು, ಪ್ರಾಣಿ ಎಲ್ಲವೂ ದೇವರುಗಳೇ.''[೫] ಈ ಕಾಲವನ್ನು ನಾವು ಇತಿಹಾಸದಲ್ಲಿ ಸೂಕ್ಷ್ಮ ಶಿಲಾಯುಗದ ಕಾಲವೆಂದು ಕರೆದಿದ್ದೇವೆ. ''ಸೂಕ್ಷ್ಮ ಶಿಲಾಯುಗವು ಬೇಸಾಯ ಆಧಾರಿತ ಸಮಾಜವನ್ನು ರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸಿತು.''[೬] ಮಾನವ ಸಾಂಘಿಕ ಜೀವನವನ್ನು ಆರಂಭಿಸಿ ನಾಗರಿಕತೆ ಬೆಳೆಯಲಾರಂಭಿಸಿದಂತೆ ''ಒಂದು ಸ್ಥಳದಲ್ಲಿ ಸ್ಥಿರವಾಗಿ ವಾಸಿಸುವುದು ಮತ್ತು ಸಣ್ಣ ಗುಂಪುಗಳಿಂದ ಬೃಹತ್ ಪ್ರಮಾಣದ ಗುಂಪುಗಳಾಗಿ ಬೆಳವಣಿಗೆಯಾದುದು''[೭] ಹೀಗೆ ಎಲ್ಲರೂ ಸೇರಿ ತಮ್ಮ ನೆಲೆಗಳಲ್ಲಿ ಆಚರಿಸುವ ಸಂತೋಷ ಸಮಾರಂಭಗಳು, ದೇವರ ಮೇಲಿನ ನಂಬಿಕೆಯಿಂದ, ಭೀತಿ ನಿವಾರಣೆಗಾಗಿ ಮಾಡುವ ದೇವತಾರಾಧನೆ, ಭೂತಾರಾಧನೆಗಳು ಬೆಳೆದು ಕ್ರಮೇಣವಾಗಿ ಜಾತ್ರೆಗಳು ಹುಟ್ಟಿಕೊಂಡಿರಬೇಕು.

''ಬುಡಕಟ್ಟು ಜನಾಂಗಗಳ ಸಾಮಾಜಿಕ ಬದುಕಿನಲ್ಲಿ ಜಾನಪದ ಸಂಪೂರ್ಣ ಕರಗಿಹೋಗಿದೆ. ಇವರ ಸಾಮಾಜಿಕ ಬದುಕು ಹಾಗೂ ಜಾನಪದ ವಾಗರ್ಥಗಳಂತೆ ಅವಿನಾಭಾವಿಯಾಗಿ ಬೆರೆತಿವೆ. ಇವರ ಬೇಟೆ, ಬೇಸಾಯ ಪದ್ಧತಿ, ಕುಟುಂಬ ಪದ್ಧತಿ, ಆಡಳಿತ ಪದ್ಧತಿ, ಧಾರ್ಮಿಕ ಪದ್ಧತಿ ಈ ಮುಂತಾದ ಸಾಮಾಜಿಕ ವ್ಯವಸ್ಥೆಯಲ್ಲಿ ಜಾನಪದದ ಸೊಗಡು ದಟ್ಟವಾಗಿದೆ. ಜಾನಪದದ ಪ್ರಮುಖ ಲಕ್ಷಣವಾದ ಸಾಮಾಜಿಕಕ್ರಿಯೆ ಇಲ್ಲಿ ಪ್ರಧಾನ ಪಾತ್ರವಾಗಿರುತ್ತದೆ.''[೮] ಬುಡಕಟ್ಟು ಜನರ ಧಾರ್ಮಿಕ ಪದ್ಧತಿಯ ಒಂದು ಪ್ರಧಾನ ಭಾಗವಾಗಿರುವ ಸಾಂಸ್ಕೃತಿಕ ಕಾರ್ಯವನ್ನು ವಿಧಿ ವಿಧಾನ ನಿಯಮಗಳಿಗೆ ಅನುಗುಣವಾಗಿ ಆಚರಣೆಗೆ ತರುವ ಜಾತ್ರೆಗಳ ಆಚರಣೆಯ ಸಮಯದಲ್ಲಿ ಅಗತ್ಯ ಆರಾಧನೆಯ ನಡುವೆ ಮನುಷ್ಯ ಸಂಸ್ಕೃತಿಯ ಸಂಬಂಧ ಬೆಸೆದುಕೊಂಡಿದೆ. ಭಾರತೀಯ ಸಾಂಸ್ಕೃತಿಕ ನೆಲೆ ಶ್ರೀಮಂತವಾಗಿರುವುದೇ ಜಾತ್ರೆ, ಹಬ್ಬ, ಉತ್ಸವಗಳ ಮೂಲಕ. ಧಾರ್ಮಿಕ ನೆಲೆಗಿಂತ ಜೀವಾಧಾರಿತ ಮತ್ತು ವೃತ್ತಿಯಾಧಾರಿತ ನೆಲೆಗಳು ಇಲ್ಲಿ ಪ್ರಮುಖ ಪಾತ್ರವಹಿಸಿವೆ. ಬಹುಶಃ ಭಾರತದಂತಹ ಬಹುಮುಖಿ ಸಂಸ್ಕೃತಿಯುಳ್ಳ ರಾಷ್ಟ್ರಗಳಲ್ಲಿ ಮಾತ್ರ ಕಾಣದೊರೆಯುವ ಈ ಬಗೆಯ ಜೀವನ ವಿಧಾನಕ್ಕೆ ಜಾತ್ರೆಗಳಂತಹ ಆಚರಣೆಗಳ ಪಾರಂಪರಿಕ ದೇಣಿಗೆಗಳು ಅಪಾರ.

## ೩.೨ ಜಾತ್ರೆ:ಸ್ವರೂಪ

ಜಾತ್ರೆ ವೈವಿಧ್ಯತೆಗಳ ತಾಣ. ದುಷ್ಟ ಶಕ್ತಿಗಳನ್ನು ದೇವರು ದಮನ ಮಾಡಿದುದರ ಹಿಂದೆ ಭಕ್ತರ ರಕ್ಷಣೆಯ ಉದ್ದೇಶವಿದೆ. ಈ ಕಾರಣಕ್ಕಾಗಿಯೇ ಜಾತ್ರೆಗಳು ಆಚರಣೆಯಲ್ಲಿವೆ. ಪ್ರತಿ ಸಮಾಜದಲ್ಲಿಯೂ ಆಚರಣೆಯಲ್ಲಿರುವ ಎಲ್ಲಾ ಜಾತ್ರೆಗಳು ಒಂದೇ ತೆರನಾದವುಗಳಲ್ಲ. ಜಾತ್ರೆಗಳ ಲಕ್ಷಣಗಳು ಒಂದೇ ಆಗಿದ್ದರೂ ಅವುಗಳ ಸ್ವರೂಪದಲ್ಲಿ ವ್ಯತ್ಯಾಸಗಳಿವೆ. ಸಾಮಾಜಿಕ ಸಾಮರಸ್ಯ ಎಲ್ಲಾ ಜಾತ್ರೆಗಳ ಉದ್ದೇಶ. ಆದರೂ ಅವುಗಳ ಆಚರಣೆಯ ವಿಧಿ ವಿಧಾನಗಳು ಭಿನ್ನ. ಜಾತ್ರೆಗಳ ಸಾಮಾಜಿಕ ವಿಧಿ ವಿಧಾನಗಳ ಸ್ವರೂಪವನ್ನು ಅನುಸರಿಸಿ ಹಂ.ಪ.ನಾಗರಾಜಯ್ಯ ಅವರು ಜಾತ್ರೆಗಳನ್ನು ಶಿಷ್ಟ ದೇವರ ಜಾತ್ರೆಗಳು ಮತ್ತು ಗ್ರಾಮೀಣ ದೇವರ ಜಾತ್ರೆಗಳೆಂದು ಎರಡು ವಿಭಾಗವಾಗಿ ಗುರುತಿಸಿದ್ದಾರೆ. ಅಲ್ಲದೆ "ಶಿಷ್ಟ ಮತ್ತು ಗ್ರಾಮೀಣ ಜಾತ್ರೆಗಳು ಭಿನ್ನವಾಗಿರುತ್ತವೆ ಎಂದು ತಿಳಿಸಿ ಶಿಷ್ಟ ದೇವರ ಜಾತ್ರೆಗಳಿಗೆ ಪುರಾಣವಾದ ಹಿನ್ನೆಲೆಯಿರುತ್ತದೆ. ಪೂಜಾ ರೀತಿಗಳೆಲ್ಲವೂ ಸಹಶಾಸ್ತ್ರೋಕ್ತವಾಗಿಯೇ ನಡೆಯುತ್ತವೆ. ಆರ್ಯ ಮತ್ತು ಶಿಷ್ಟದೇವರ ಜಾತ್ರೆಗಳಿಗಿಂತ, ದ್ರಾವಿಡ ಹಾಗೂ ಗ್ರಾಮದೇವತೆಗಳ ಜಾತ್ರೆಗಳು ಜಾನಪದ ಅಧ್ಯಯನಕ್ಕೆ ಉತ್ತಮ ಗ್ರಾಸಒದಗಿಸುತ್ತವೆ"[೯] ಎಂಬ ಸೂಕ್ಷ್ಮ ಮಾಹಿತಿಯನ್ನು ತಿಳಿಸಿದ್ದಾರೆ.



ಆರ್ಯರ ಆಗಮನದ ನಂತರದಲ್ಲಷ್ಟೇ ಭಾರತೀಯರ ಸಾವಾಜಿಕ ಆಚರಣೆಗಳು ನಿಯಮಬದ್ಧತೆಗಳನ್ನು ಅನುಸರಿಸತೊಡಗಿದವು. ಈ ಕಾರಣಕ್ಕಾಗಿಯೇ ಆರ್ಯರ ಶಿಷ್ಟ ದೇವರ ಜಾತ್ರೆಯ ಆಚರಣೆಗಳು ಪ್ರತಿವರ್ಷ ಗೊತ್ತುಪಡಿಸಿದ ದಿನ ಆಚರಿಸಲ್ಪಡುವವು. ಆದರೆ ಗ್ರಾಮದೇವರ ಜಾತ್ರೆಗಳು ಕೆಲವು ಗ್ರಾಮಗಳಲ್ಲಿ ಪ್ರತಿ ವರ್ಷ ನಡೆದರೆ ಇನ್ನೂ ಕೆಲವು ಊರುಗಳಲ್ಲಿ ೩,೫,೭,೯,೧೨,೧೫ ವರ್ಷಗಳಿಗೊಮ್ಮೆ ನಡೆಯುತ್ತವೆ. ಸೋಮವಾರಪೇಟೆ ತಾಲ್ಲೂಕಿನ ನಗರಳ್ಳಿ ಗ್ರಾಮದ ಶ್ರೀ ಸುಬ್ಬಮ್ಮದೇವಿಯ ಜಾತ್ರೆ ೧೨ ವರ್ಷಕ್ಕೊಮ್ಮೆ ನಡೆಯುತ್ತದೆ. ಇವುಗಳ ಆಚರಣೆಯಲ್ಲಿ ನಿರ್ಧಿಷ್ಟ ಸಾಮಾಜಿಕ ನಿಯಮಗಳೇನೂ ಇಲ್ಲ. ಬದಲಾಗಿ ಗ್ರಾಮೀಣರು ತಮ್ಮ ಅನುಕೂಲಕರ ಸಮಯದಲ್ಲಿ ತಮ್ಮ ಗ್ರಾಮದೇವತೆಯ ಕಾರ್ಯವನ್ನು ನೆರವೇರಿಸುವರು.

"ಶಿಷ್ಟದೇವರುಗಳ ಜಾತ್ರೆಗಳಲ್ಲಿ ರಥೋತ್ಸವ ಕೇಂದ್ರಬಿಂದುವಾಗಿದ್ದು, ಗ್ರಾಮದೇವರುಗಳ ಜಾತ್ರೆಗಳಲ್ಲಿ ಅದನ್ನೇ ತೇರು ಎಂದು ಕರೆಯಲಾಗುತ್ತದೆ. ತೇರಿಗೆ ಬಂಡಿ, ಉಚ್ಚಾಯ, ಕುರ್ಜು ಎಂಬ ಹೆಸರುಗಳೂ ಇವೆ. ತೇರು ದ್ರಾವಿಡ ಪದವಾಗಿದ್ದು ಇದಕ್ಕೆ ತೆಲುಗು, ತಮಿಳು, ಮಲೆಯಾಳಂ, ಭಾಷೆಗಳಲ್ಲಿ ಜ್ಞಾತಿ ಪದಗಳಿವೆ"[೧೦] ಎಂದು ಹಂ.ಪ.ನಾಗರಾಜಯ್ಯ ತಿಳಿಸಿದ್ದಾರೆ. ಕನ್ನಡದ ತೇರು ಎಂಬ ಪದಕ್ಕೆ ತಮಿಳು ಪದವಾದ 'ವಂಡಿ' ಸಮನಾರ್ಥಕ ಪದವಾಗಿದ್ದು, 'ವಂಡಿ' ಎಂಬ ತಮಿಳು ಪದದ ಕನ್ನಡ ರೂಪಾಂತರ ಬಂಡಿ ಎಂದಾಗುತ್ತದೆ. ಕನ್ನಡದಲ್ಲಿ ಜಾತ್ರೆಯನ್ನು ಬಂಡಿ ಎಂಬ ಹೆಸರಿನಿಂದಲೂ ಕರೆಯಲಾಗುತ್ತಿದ್ದು ಈ ಪದವು ತಮಿಳುನಾಡಿನಲ್ಲಿ 'ಪಂಡಿಗೈ'ಎಂಬ ಜಾತ್ರೆಯ ಪದಕ್ಕೆ ಪೂರಕವಾಗಿ ವ್ಯಾಪಕವಾಗಿ ಬಳಕೆಯಲ್ಲಿದೆ.

ಎಸ್.ಎಸ್.ಹಿರೇಮಠರವವರು "ಜಾತ್ರೆಗಳ ತೇರು, ಮಸಣ ಸಂಬಂಧಿ ಆಚರಣೆ ಮತ್ತು ನಂಬಿಕೆಯ ಆಶಯವನ್ನು ಒಳಗೊಂಡಿದೆ"[೧೧] ಎಂದು ತಮ್ಮ 'ಜಾತ್ರೆಗಳು' ಕೃತಿಯಲ್ಲಿ ತಿಳಿಸಿರುತ್ತಾರೆ. ಇದೇ ಬಗೆಯ ನಂಬಿಕೆಯು ತಮಿಳುನಾಡಿನಲ್ಲಿ ಜನಜನಿತವಾಗಿವೆ. ಜನರ ಸಂಕಷ್ಟಗಳಿಗೆ ಸ್ಪಂದಿಸಿ ತಮ್ಮ ತಪಃಶಕ್ತಿಯಿಂದ ಪವಾಡಗಳನ್ನು ಮಾಡಿ ಸಮುದಾಯದ ಅಭಿವೃದ್ಧಿಗೆ ಅವಿರತವಾಗಿ ಶ್ರಮಿಸಿ ಸಾವನ್ನಪ್ಪಿದ ಯೋಗಿಗಳನ್ನು, ಪವಾಡಪುರುಷರನ್ನು, ದೈವಾಂಶ ಸಂಭೂತರನ್ನು ಜನಸಾಮಾನ್ಯರು ದೇವರೆಂದು ಪೂಜಿಸುವುದು ನಿರ್ವಿವಾದ. ಈ ಕಾರಣಕ್ಕಾಗಿ ಅವರ ಅಂತ್ಯಸಂಸ್ಕಾರಗಳ ಸಮಯದಲ್ಲಿ ಅವರ ಮೃತ ಶರೀರವನ್ನು ತೇರುಗಳಲ್ಲಿ ಪೂಜಿಸಿ ಶೃಂಗರಿಸಿ ಸಾಗಿಸುವಾಗ ಅಪಾರ ಸಂಖ್ಯೆಯ ಜನರು ಜಾತ್ರೆಯೋಪಾದಿಯಲ್ಲಿ ಸೇರಿರಬೇಕು. ಅವರು ಮಾಡಿದ ಉಪಕಾರದ ಗುಣವನ್ನು ನೆನೆದು ತಪ್ಪದೆ ಅವರ ಅಗಲಿಕೆಯ ದಿನವನ್ನು ಸ್ಮರಿಸಿ ಸದಾ ನಮ್ಮನ್ನು ಕಾಯುತ್ತಿರುವ ಎಂದು ವಿಶೇಷ ಪೂಜೆಸಲ್ಲಿಸಲು ಸಮುದಾಯದವರೆಲ್ಲರು ಒಂದುಗೂಡಿ, ಜಾತ್ರೆಯ ವಾತಾವರಣ ಏರ್ಪಟ್ಟು ಸಂಪ್ರದಾಯ ಬದ್ಧವಾಗಿ ಬೆಳೆದುಬಂದಿದೆ.

ಅಸಮಾನತೆಯನ್ನು ಒಳಗೊಂಡಿರುವ ಸಮಾಜದಲ್ಲಿ ದೇವರ ದರ್ಶನ ಭಾಗ್ಯ ಕೆಲವೇ ಜಾತಿಯವರಿಗೆ ಸೀಮಿತವಾಗಿದೆ. ಜಾತ್ರೆಯ ದಿನದಂದು ತೇರುಗಳಲ್ಲಿ ಅಸೀನರಾದ ದೇವರ ಮೂರ್ತಿಯ ದರ್ಶನಭಾಗ್ಯ ಕಡೆಗಣಿಸಿದ ವರ್ಗದವರಿಗು ಪ್ರಾಪ್ತವಾಗುತ್ತದೆ. ಇಂತಹ ಜಾತ್ರೆಗಳಿಗೆ ಜನರೆಲ್ಲಾ ಒಂದು ಕಡೆ ಸೇರುವುದು ಮುಖ್ಯ. ತಮ್ಮಲ್ಲಿರುವ ತಾರತಮ್ಯಗಳನ್ನು ಬಿಟ್ಟು, ತಮ್ಮಲ್ಲಿನ ದ್ವೇಷಾಸೂಯೆಗಳನ್ನು ಮರೆತು ಒಗ್ಗೂಡಿ ಜನ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ. ಅವರಿಗೆ ಅದೊಂದು ಪವಿತ್ರ ಸೇವಾ ಕಾರ್ಯ. ದೇವರ ಜಾತ್ರೆಯು ಪವಿತ್ರವೆನ್ನುವ ಭಾವನೆ ಜನಮನದಲ್ಲಿ ಬೇರೂರಿದೆ. ಅದ್ಭುತವಾದ ಪರಿವರ್ತನೆಯನ್ನು ಜಾತ್ರೆಗಳ ಸ್ವರೂಪವನ್ನು ಕುರಿತು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. "ಭಿನ್ನತೆ ಕಾಣುವುದು, ಭಿನ್ನಮತಗಳ ಜನರು ತಮ್ಮ ದೇವತೆಗಳಿಗೆ ಸಲ್ಲಿಸುವ ಆರಾಧನೆಯ ವಿಧಾನಗಳಲ್ಲಿ, ಹರಕೆಯೊಪ್ಪಿಸುವ ರೀತಿ ನೀತಿಗಳಲ್ಲಿ, ಭಿನ್ನ ದೇವತೆಗಳಿಗೆ ಸಂಬಂಧಿಸಿದ ಕಥಾನಕ ನಿರೂಪಣೆಯಲ್ಲಿ, ಧಾರ್ಮಿಕ ಆಚರಣೆಯ ವಿಧಿ ವಿಧಾನಗಳಲ್ಲಿ"[೧೨] ಎಂದು ಎನ್.ಆರ್.ನಾಯಕ ಅವರು ಜಾತ್ರೆಗಳ ಸ್ವರೂಪವನ್ನು ಸ್ಪಷ್ಟ ಪಡಿಸಿದ್ದಾರೆ.

ಜಾತ್ರೆ ಶಿಷ್ಟದೇವರ ಹೆಸರಿನಲ್ಲಿ ನಡೆಯಲಿ ಅಥವಾ ಗ್ರಾಮೀಣ ದೇವರ ಹೆಸರಿನಲ್ಲಿ ನಡೆಯಲಿ ಅದು ಸಮಾಜದ ಎಲ್ಲಾ ವಯೋಮಾನದವರ ಆಸೆ ಮತ್ತು ಕನಸುಗಳನ್ನು ಈಡೇರಿಸುತ್ತವೆ. ಈ ಸಮಯದಲ್ಲಿ ಎಲ್ಲರಲ್ಲೂ ಸಡಗರ, ಸಂಭ್ರಮ ಎದ್ದು ಕಾಣುತ್ತದೆ. ಜಾತ್ರೆಯಲ್ಲಿ ಪುರುಷರಿಗೆ ಪೂರಕವಾಗಿ ಎಂಬಂತೆ ಸಾಹಸ ಪ್ರದರ್ಶನಕ್ಕೆ ವೇದಿಕೆಗಳು ಸಿದ್ದವಾಗಿದ್ದರೆ ಅಲ್ಲಿ ನೆರೆದ ಜನರು ಸ್ಪರ್ಧಾಳುಗಳಿಗೆ ಸಿಳ್ಳೆ, ಕೇಕೆ, ಹರ್ಷೋದ್ಗಾರ, ಮೌನದ ಮೂಲಕ ತಮ್ಮ ಬೆಂಬಲ ಸೂಚಿಸುವರು. ಮತ್ತೊಂದೆಡೆ ಮಹಿಳೆಯರಿಗೆ ಪೂರಕ ಎಂಬಂತಹ ಗೃಹ ಬಳಕೆಯ ಸಾಮಗ್ರಿಗಳು, ಪಾತ್ರೆಯ ಅಂಗಡಿಗಳು,

ಬಳೆಯ ಅಂಗಡಿಗಳು ಇರುತ್ತವೆ. ಇನ್ನು ಮಕ್ಕಳ ತಿಂಡಿ ತಿನಿಸುಗಳನ್ನು ಒಳಗೊಂಡ ಟೆಂಟುಗಳು, ಬಾಂಬೆ ಷೋ, ಅಲಂಕಾರಿಕ ಸೌಂದರ್ಯ ವಸ್ತುಗಳು, ಹಚ್ಚೆ, ಮೆಹಂದಿ ಮುಂತಾದ ಅಂಗಡಿಗಳು ತಲೆ ಎತ್ತಿರುತ್ತವೆ. ಕಾರ, ಮಂಡಕ್ಕಿ, ಬೂಂದಿ, ಆಟದ ಸಾಮಾನಿನ ಅಂಗಡಿಗಳಿದ್ದರೆ, ಯುವತಿಯರ ಗುಂಪುಗಳ ಹಿಂದೆ ಯುವಕರ ಬೆನ್ನು ಹತ್ತಿರುತ್ತದೆ. ಅಲ್ಲದೆ ಯುವಕ ಯುವತಿಯರಿಗಾಗಿಯೇ ಎಂಬಂತೆ ಅಲ್ಲಲ್ಲಿ ಸಿನಿಮಾ ಇನ್ನು ಮುದುಕರಿಗಾಗಿ ಅಥವಾ ವಯಸ್ಕರಿಗಾಗಿ ಎಲೆ ಅಡಿಕೆ ಅಂಗಡಿಗಳು ಆನೆಯ ಆಶೀರ್ವಾದ ದೇವರ ಉತ್ಸವ ಮೂರ್ತಿಸಾಗುವ ತೇರು, ರಥ, ಉಚ್ಛಾಯ, ಪಲ್ಲಕ್ಕಿಯಂತಹ ಪುಣ್ಯ ಪ್ರಾಪ್ತಿಯ ಅನೇಕ ಸನ್ನಿವೇಶಗಳ ಕೂಟ ಅದಾಗಿರುತ್ತದೆ.

ಹೀಗೆ ವಯಸ್ಸು ಮತ್ತು ಲಿಂಗಾಧಾರಿತ ವ್ಯತ್ಯಾಸಗಳನ್ನು ನಾವು ಜಾತ್ರೆಯ ಸಮಯದಲ್ಲಿ ಕಾಣುತ್ತೇವೆ. ಜೊತೆಗೆ ಸಾಮಾಜಿಕ ಸ್ತರವ್ಯವಸ್ಥೆ ಎಂಬಂತೆ ಜಾತ್ರೆ ಕೆಲಸಗಳು ಜಾತಿ ಆಧಾರಿತವಾಗಿ ಹಂಚಲ್ಪಟ್ಟಿರುತ್ತವೆ. ಆದರೂ ತೇರನ್ನು ಎಳೆಯುವ ಮತ್ತು ದಾಸೋಹದ ಸನ್ನಿವೇಶದಲ್ಲಿ ಎಲ್ಲಾ ವಯೋಮಾನ, ಜಾತಿ ಮತ್ತು ಮತದ ಜನರು ಒಂದುಗೂಡಿ ಕೆಲಸ ಕಾರ್ಯಗಳನ್ನು ಕೈಗೊಳ್ಳುವುದರಿಂದ ಜಾತ್ರೆಗಳು ಮೂಲಭೂತವಾಗಿ ಜಾತ್ಯಾತೀತ ಕಲ್ಪನೆಯ ಉದ್ದೇಶವನ್ನು ಒಳಗೊಂಡಿವೆ ಎನ್ನಿಸದಿರದು.

ಶಿಷ್ಟದೇವರ ಜಾತ್ರೆ ಮತ್ತು ಗ್ರಾಮೀಣ ದೇವರ ಜಾತ್ರೆಗಳ ಆಚರಣೆಯ ಸ್ವರೂಪಗಳಲ್ಲೆ ಮೂಲಭೂತವಾಗಿ ವ್ಯತ್ಯಾಸಗಳಿವೆ. ಈ ಭಿನ್ನತೆಗಳನ್ನು ಜಾತ್ರೆಯ ಸಮಯದಲ್ಲಿ ಅನುಸರಿಸುವ ವಿಧಿ ವಿಧಾನಗಳು, ನೀತಿ ನಿಯಮಗಳ ಆಧಾರದ ಮೇಲೆ ಗುರುತಿಸಲು ಸಾಧ್ಯ. ಶಿಷ್ಟದೇವರ ಜಾತೆಗಳು ಮೇಲ್ಪಂಕ್ತಿಯನ್ನು ಸೂಚಿಸುತ್ತವೆ. ಈ ಜಾತ್ರೆಯ ಆಚರಣೆಗಳಲ್ಲಿ ದೀಪೋತ್ಸವ, ದ್ವಜಾರೋಹಣ, ಗಣಪತಿ ಪೂಜೆ, ಕಲ್ಯಾಣೋತ್ಸವ, ಉಯ್ಯಾಲೋತ್ಸವ, ತೆಪ್ಪೋತ್ಸವ, ನವಗ್ರಹಯಜ್ಞ, ಕಲಶಸ್ಥಾಪನೆ, ಬ್ರಹ್ಮರಥೋತ್ಸವ, ಮಂಟಪೋತ್ಸವ, ರುದ್ರಾಕ್ಷಿ ಮಂಟಪೋತ್ಸವ, ಹನುಮಂತ ವಾಹನೋತ್ಸವ, ಬಲಿಹರಣ, ಸೂರ್ಯಮಂಡಲೋತ್ಸವ ಆಚರಣೆಯ ವಿಧಿ ವಿಧಾನಗಳನ್ನು ಅನುಸರಿಸಲಾಗುತ್ತದೆ. ಗ್ರಾಮೀಣ ದೇವರ ಜಾತೆಗಳ ಕೆಳವರ್ಗದ ಸಮುದಾಯವನ್ನು ಕೇಂದ್ರಬಿಂದುವನ್ನಾಗಿಸಿಕೊಂಡಿದೆ. ಗ್ರಾಮೀಣ ದೇವರ ಜಾತ್ರೆಯ ಆಚರಣೆಯಲ್ಲಿ ಕಂಕಣ ಕಟ್ಟುವುದು, ಸಾರುಕೊಡುವುದು, ದೀಪ ಹಚ್ಚುವುದು, ಸೇಸೆಯಿಕ್ಕುವುದು, ಓಕುಳಿಯಾಟ, ಉರುಳುಸೇವೆ, ಬಾಯಿಬೀಗ, ಬೇವಿನುಡುಗೆ, ಎಡೆಯೊಪ್ಪಿಸುವುದು, ಅಲಗುಸೇವೆ, ಗಾವುಸಿಗಿತ, ಧೂಪದ ಸೇವೆ, ಹೂಳೆಮರಿಬಲಿ, ಪ್ರಾಣಿಬಲಿ, ಕೆಂಡ ಹಾಯುವುದು, ತಮಟೆಬಾರಿಸುವುದು, ಮಂಡೆಸೇವೆ, ಸಿಡಿಯಾಡುವುದು, ವೇಷಧಾರಿ ಕುಣಿತ ಮೊದಲಾದ ಆಚರಣೆಯ ವಿಧಿ ವಿಧಾನಗಳನ್ನು ಅನುಸರಿಸಲಾಗುತ್ತದೆ. ಇವುಗಳಷ್ಟೇ ಅಲ್ಲದೆ ಮುಸಲ್ಮಾನರು ಆಚರಿಸುವ 'ಉರುಸ್' ಕ್ರೈಸ್ತರ 'ಪೆಸ್ತಾ' ಜೈನರ 'ಮಹಾಮಸ್ತಾಭಿಷೇಕ' ಇಂತಹ ಜಾತ್ರೆಗಳ ಆಚರಣೆಯ ಸ್ವರೂಪದಲ್ಲಿ ಭಿನ್ನತೆಗಳಿವೆ. ಜೊತೆಗೆ ಮೋಜಿನ ಜಾತ್ರೆಗಳು, ವಸ್ತು ಪ್ರದರ್ಶನದ ಜಾತ್ರೆಗಳು, ದನಗಳ ಜಾತ್ರೆ ಇತ್ಯಾದಿ ಜಾತ್ರೆಗಳ ಸಾಮಾಜಿಕ ಆಚರಣೆಯ ಸ್ವರೂಪ ಮತ್ತು ವಿಧಿ ಆಚರಣೆಗಳಲ್ಲಿ ವೈವಿಧ್ಯತೆಯನ್ನು ಕಾಣುತ್ತೇವೆ.

## ಜಾತ್ರೆಗಳ ಸೈದ್ಧಾಂತಿಕ ಹೋಲಿಕೆ

### ಎ) ರಚನಾತ್ಮಕ ಸಿದ್ಧಾಂತ

ಸಮಾಜದ ಸಂಗತಿಗಳನ್ನು ಅರ್ಥಮಾಡಿಕೊಳ್ಳಲು ಸಾಮಾಜಿಕ ರಚನೆಯ ಪರಿಕಲ್ಪನೆ ಮಹತ್ವದ್ದಾಗಿದೆ. ಸಮಾಜದಲ್ಲಿನ ವಿವಿಧ ಸಮೂಹಗಳ ಮತ್ತು ಸಂಸ್ಥೆಗಳು ಜಾತ್ರೆಯ ಆಚರಣೆಯಲ್ಲಿ ಹೇಗೆ ತಮ್ಮ ಪಾತ್ರವನ್ನು ಗುರುತಿಸಿಕೊಂಡಿವೆ ಎಂಬುದನ್ನು ಈ ವಿಧಾನಗಳು ತಿಳಿಸುತ್ತವೆ. ಸಮಾಜದಲ್ಲಿನ ಸಾಮಾನ್ಯತತ್ವಗಳು ಹಾಗೂ ನಂಬಿಕೆಗಳು ಜಾತ್ರೆಯ ಆಚರಣೆಯಲ್ಲಿ ಹೇಗೆ ಸಮ್ಮಿಲನಗೊಂಡಿವೆ ಎಂಬುದನ್ನು ರಚನಾತ್ಮಕ ಪರಿಕಲ್ಪನೆಯು ಸ್ಪಷ್ಟಪಡಿಸುತ್ತದೆ. ಜನರು ಸಾಮಾಜಿಕ ಸಂಬಂಧಗಳನ್ನು ವ್ಯವಸ್ಥಿತವಾಗಿ ಜೋಡಿಸಿಕೊಂಡಿರುವಂತೆ ಜಾತ್ರೆಗಳ ಕಾರ್ಯರಚನೆಯ ಕ್ರಮವನ್ನು ಅನುಸರಿಸುವುದು ಆಚರಣೆಯ ಸಮಯದಲ್ಲಿ ಕಂಡುಬರುತ್ತದೆ.

ಪ್ರಸ್ತುತದಲ್ಲಿ ಅಸ್ತಿತ್ವದಲ್ಲಿರುವ ಸಾಮಾಜಿಕ ಸಂಬಂಧಗಳು ಕ್ರಮಬದ್ಧವಾಗಿ ಹೆಣೆದುಕೊಂಡಿರುವಂತೆ ಜಾತ್ರೆಯ ಕಾರ್ಯ ಕಲಾಪಗಳನ್ನು ವಿವಿಧ ಜನಸಮುದಾಯಗಳು ಹಂಚಿಕೊಂಡು ನಿರ್ವಹಿಸುವ ಮೂಲಕ ಜಾತ್ರೆ ಎಂಬ ವ್ಯವಸ್ಥೆ ಪೂರ್ಣಪ್ರಮಾಣದಲ್ಲಿ ಆಚರಣೆಗೆ ಬರುತ್ತದೆ. ಸಾಮಾಜಿಕ ರಚನೆಯು ವ್ಯವಸ್ಥೆಯ ಆಧಾರ ಮತ್ತು ಕಾರ್ಯಗಳ ನಡುವಿನ ಪರಸ್ಪರ ಹೊಂದಾಣಿಕೆಯ ಸಂಬಂಧಗಳನ್ನು ತಿಳಿಸುತ್ತದೆ. ಸಾಮಾಜಿಕ ವ್ಯವಸ್ಥೆಯಲ್ಲಿ ವಿಭಿನ್ನ ಅಂತಸ್ತು, ಪಾತ್ರ, ಸಮೂಹ, ಹಾಗೂ ಸಂಸ್ಥೆಗಳು ತಮ್ಮ ಪಾಲಿನ ಕಾರ್ಯಗಳನ್ನು ವ್ಯವಸ್ಥಿತವಾಗಿ ನಿರ್ವಹಿಸುವುದರಿಂದ ಸಾಮಾಜಿಕ ವ್ಯವಸ್ಥೆಯು ಚಲನಾಶೀಲತೆಯಿಂದ ಕೂಡಿರುತ್ತದೆ. ಅಂತೆಯೇ, ಜಾತ್ರೆಯ ವಿಭಿನ್ನ ಅಂತಸ್ತು, ಪಾತ್ರ ಹಾಗೂ ಸಮೂಹಗಳು ಪರಸ್ಪರ ಭಿನ್ನಾಭಿಪ್ರಾಯಗಳನ್ನು ಮರೆತು ಒಂದು ಗೂಡಿ ಸಹಕಾರಿಯುತವಾಗಿ ತಮ್ಮ ಪಾಲಿನ ಕಾರ್ಯವನ್ನು ವ್ಯವಸ್ಥಿತವಾಗಿ ನಿರ್ವಹಿಸುತ್ತಾ ಬಂದಿರುವುದರಿಂದ ಜಾತ್ರೆಗಳು ಕೂಡ ಸಾಮಾಜಿಕ ವ್ಯವಸ್ಥೆಯೊಂದಿಗೆ ಚಲನಾಶೀಲತೆಯಿಂದ ಕೂಡಿವೆ.

ರ್‍ಯಾಡ್‌ಕ್ಲಿಪ್‌ಬ್ರೌನ್‌ರವರು, 'ವಿವಿಧ ಭಾಗಗಳನ್ನು ಕ್ರಮಬದ್ಧವಾಗಿ ಸಂಘಟಿಸುವುದೇ ರಚನೆ' ಎಂದಿದ್ದಾರೆ. ಅಂದರೆ ಸಾಮಾಜಿಕ ವ್ಯವಸ್ಥೆ ಏಣಿ-ಶ್ರೇಣಿಗಳಿಂದ ಕೂಡಿದ್ದು, ಪ್ರತಿಯೊಂದು ಭಾಗವು ಅದರದೇ ಆದ ಪಾತ್ರವನ್ನು ಪ್ರತ್ಯೇಕವಾಗಿ ಬಿಂಬಿಸದೆ, ಒಂದು ಮತ್ತೊಂದಕ್ಕೆ ಪೂರಕವಾಗಿ ಕಾರ್ಯನಿರ್ವಹಿಸುತ್ತದೆ. ಅಂತೆಯೇ ಜಾತ್ರೆಯ ಆಚರಣೆಯಲ್ಲಿಯೂ ಇಂತಹ ಸನ್ನಿವೇಶಗಳು ಕಂಡುಬರುತ್ತವೆ, ಯಾವುದೇ ಒಂದು ವ್ಯವಸ್ಥೆಯ ಕ್ರೌರ್ಯವನ್ನು ತಿಳಿಯುವಲ್ಲಿ ಅದರ ರಚನೆ ಮಹತ್ವದ್ದು ಎಂಬ ರ್‍ಯಾಡ್‌ಕ್ಲಿಪ್‌ಬ್ರೌನ್‌ರವರ ಮಾತು ಜಾತ್ರೆಗಳ ವ್ಯವಸ್ಥೆಗೂ ಅನ್ವಯವಾಗುತ್ತದೆ.

**ಬ್ರೌನ್ ರವರ ರಚನಾತ್ಮಕ ಅಂಶಗಳು**

೧) ರಚನೆಯು ವಿವಿಧ ಭಾಗಗಳಿಂದ ಕೂಡಿರುತ್ತದೆ. ಅಂತೆಯೇ ಜಾತ್ರೆಯು ವಿಭಿನ್ನ ಜನ ಸಮುದಾಯಗಳ ಕೂಟವಾಗಿರುವುದು ಆಚರಣೆಯ ಸಮಯದಲ್ಲಿ ಕಂಡು ಬರುತ್ತದೆ.

೨) ವಿವಿಧ ಭಾಗಗಳ ಕ್ರಮಬದ್ಧ ಸಂಘಟನೆ. ಈ ಅಂಶವನ್ನು ಜಾತ್ರಾ ಸಮಯದಲ್ಲಿ ಆಚರಿಸುವ ರಥೋತ್ಸವ, ಅನ್ನದಾಸೋಹ ಮುಂತಾದ ಕಾರ್ಯಗಳ ಸಮಯದಲ್ಲಿ ಎಲ್ಲಾ ವರ್ಗದವರು ಜಾತಿ ಭೇದವನ್ನು ಮರೆತು ಒಗ್ಗೂಡಿ ದುಡಿಯುವುದು ಕಂಡು ಬರುತ್ತದೆ.

೩) ಏಣಿ-ಶ್ರೇಣಿ, ಸಮಾಜವು ಸಾಮಾಜಿಕ ಸ್ತರ ವಿನ್ಯಾಸ ಪ್ರಕ್ರಿಯೆಗೆ ಒಳಪಟ್ಟಿರುವಂತೆ ಜಾತ್ರೆಯ ವ್ಯವಸ್ಥೆಯಲ್ಲಿಯೂ ಏಣೀ-ಶ್ರೇಣಿಯನ್ನು ಕಾಣಬಹುದು. ಈ ಏಣಿ-ಶ್ರೇಣಿ ವ್ಯವಸ್ಥೆಯನ್ನು ಜನರು ನಿರ್ವಹಿಸುವ ಕಾರ್ಯಗಳ ಆಧಾರದ ಮೇಲೆ ಗುರುತಿಸಬಹುದಾಗಿದ್ದರೂ ಜಾತ್ರೆಯು ಆಚರಣೆಗೊಳ್ಳಲು ಮೇಲುವರ್ಗ ಮತ್ತು ಕೆಳವರ್ಗದವರ ಸಹಭಾಗಿತ್ವ ಅತ್ಯವಶ್ಯಕವಾಗಿರುವುದು ಕಂಡು ಬರುತ್ತದೆ.

೪) ವಿವಿಧ ಭಾಗಗಳು ಮತ್ತು ವ್ಯವಸ್ಥೆಯ ನಡುವಿನ ನಿಕಟ ಸಂಬಂಧ. ಸಮಾಜದಲ್ಲಿ ವಿಭಿನ್ನ ಭಾಗಗಳು ಮತ್ತು ವ್ಯವಸ್ಥೆಯ ನಡುವೆ ಪರಸ್ಪರ ಪೂರಕ ಸಂಬಂಧವಿರುವಂತೆ ಜಾತ್ರೆಯ ಸಮಯದಲ್ಲಿ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಅಂಶಗಳು ಜಾತ್ರಾ ವ್ಯವಸ್ಥೆಯೊಂದಿಗೆ ನಿಕಟ ಸಂಬಂಧ ಹೊಂದಿರುವುದು ಕಂಡುಬರುತ್ತದೆ.

ಈ ಮೇಲೆ ತಿಳಿಸಿದ ಎರಡೂ ವ್ಯವಸ್ಥೆಯ ಪ್ರತಿ ಭಾಗಗಳಿಗೂ ಅದರದೇ ಆದ ಕಾರ್ಯಗಳಿದ್ದು, ಈ ಕಾರ್ಯಗಳನ್ನು ಕ್ರಮಬದ್ಧವಾಗಿ ಸಂಘಟಿಸಿ ಕಾರ್ಯರೂಪಕ್ಕೆ ತರುವುದು ಅತ್ಯಗತ್ಯ. ಇಲ್ಲವಾದಲ್ಲಿ ಸಾಮಾಜಿಕ ವ್ಯವಸ್ಥೆ ಅಥವಾ ಜಾತ್ರಾ ವ್ಯವಸ್ಥೆ ನಿರ್ವಹಣೆಗೊಳ್ಳುವುದು ಅಸಾಧ್ಯವಾಗುತ್ತದೆ.

ರ್‍ಯಾಡ್‌ಕ್ಲಿಪ್‌ಬ್ರೌನ್ ರವರು ಸಮಾಜದ ಸದಸ್ಯರನ್ನು ಆಯಾ ಸಾಮಾಜಿಕ ರಚನೆಯ ಭಾಗಗಳು ಎಂದು ತಿಳಿಸಿದ್ದಾರೆ. ಅಂದರೆ ವ್ಯಕ್ತಿ ಕೇವಲ ಶಾರೀರಿಕ ವ್ಯವಸ್ಥೆಗೆ ಬದಲಾಗಿ ಆ ವ್ಯಕ್ತಿಯು ಸಮಾಜದ ಸದಸ್ಯನಾಗಿ ಗಳಿಸಿರುವ ಪಾತ್ರ. ಅಂತೆಯೇ ಜಾತ್ರೆಯ ಆಚರಣೆಯಲ್ಲಿ ಪ್ರತಿ ಸಮುದಾಯಗಳ ಒಬ್ಬ ಸದಸ್ಯನು ತಮ್ಮ ಸಾಂಪ್ರದಾಯಿಕ ಆಚರಣೆಯಲ್ಲಿ ತನ್ನ ಪಾತ್ರವನ್ನು ನಿರ್ವಹಿಸುವುದರಿಂದ ಜಾತ್ರಾ ಆಚರಣೆಯ ಒಂದು ಭಾಗವಾಗಿ ಕಂಡು ಬರುತ್ತಾರೆ. ಈ ಪಾತ್ರದ ಆಧಾರದ ಮೇಲೆ ಆ ವ್ಯಕ್ತಿಯ ಸಾಮಾಜಿಕ ಸ್ಥಾನಮಾನ ಮತ್ತು ನಿರ್ವಹಿಸುವ ಕಾರ್ಯಗಳು ಸಾಮಾಜಿಕ ವ್ಯವಸ್ಥೆ ಮತ್ತು ಜಾತ್ರಾ ವ್ಯವಸ್ಥೆಗಳೆರಡರಲ್ಲಿಯೂ ನಿರ್ಧಾರವಾಗುತ್ತದೆ. ಕುಟುಂಬ ರಚನೆಯಲ್ಲಿ ತಂದೆ-ತಾಯಿ, ಗಂಡ-ಹೆಂಡತಿ, ಅಣ್ಣ-ತಮ್ಮ, ಅಕ್ಕ-ತಂಗಿ ಇತ್ಯಾದಿ ಭಾಗಗಳು ಮತ್ತು ಪಾತ್ರಗಳು ಕಂಡು ಬರುವಂತೆ ಜಾತ್ರಾ ವ್ಯವಸ್ಥೆಯಲ್ಲಿ ಪೂಜಾರಿ-ಗೌಡ, ತಳವಾರ, ದಳವಾಯಿ, ಶಾನುಭೋಗ, ದಾಸಯ್ಯ, ಅಕ್ಕಸಾಲಿಗ, ಮಡಿವಾಳ, ಛಲವಾದಿ, ಮಣೆಗಾರ ಇತ್ಯಾದಿ ಭಾಗಗಳು ಕಂಡು ಬರುತ್ತವೆ.

ಸಾಮಾಜಿಕ ವ್ಯವಸ್ಥೆಯ ಜೀವನ ನಿರಂತರ ಮುಂದುವರಿಕೆಯೂ ವ್ಯಕ್ತಿಯ ವ್ಯವಸ್ಥಿತ ಹೊಂದಾಣಿಕೆಯಿಂದ ಸಾಧ್ಯವಾಗುವಂತೆ ಜಾತ್ರೆಗಳ ಆಚರಣೆಯ ಮುಂದುವರಿಕೆಯು ಜನರ ವ್ಯವಸ್ಥಿತ ಹೊಂದಾಣಿಕೆಯನ್ನೇ ಅವಲಂಬಿಸಿದೆ. ಸಮಾಜದಲ್ಲಿನ ವ್ಯಕ್ತಿಗಳ ಸಾಮಾಜಿಕ ಕಾರ್ಯಗಳ ನಿರ್ವಹಣೆಯಿಂದ ಸಾಮಾಜಿಕ ವ್ಯವಸ್ಥೆ ಕ್ರಿಯಾಶೀಲವಾಗಿರುವಂತೆ ಜಾತ್ರೆಯಲ್ಲಿನ ಪರಂಪರಾನುಗತ ಕಾರ್ಯಗಳ ನಿರ್ವಹಣೆಯನ್ನು ಆಯಾ ಜನವರ್ಗಗಳು ಸ್ವಯಂ ಪ್ರೇರಿತವಾಗಿ ನಿರ್ವಹಿಸುವುದರಿಂದ ಜಾತ್ರಾವ್ಯವಸ್ಥೆಯು ಕ್ರಿಯಾಶೀಲತೆಯಿಂದ ಕೂಡಿರುತ್ತದೆ, ನಿರಂತರವಾಗಿ ಮುಂದುವರೆಯುತ್ತದೆ. ವ್ಯಕ್ತಿಯ ದೈಹಿಕ ವ್ಯವಸ್ಥೆಯ ರಚನೆಯಲ್ಲಿ ಬದಲಾವಣೆಗಳಾದರೂ ವ್ಯಕ್ತಿಯ ಸಾಮಾಜಿಕ ದೈಹಿಕ ವ್ಯವಸ್ಥೆಯ ಸಂಬಂಧಗಳು ಹಾಗೆಯೇ ಮುಂದುವರೆಯುವಂತೆ ಜನಸಮುದಾಯಗಳ ಸಾಮಾಜಿಕ ಸ್ಥಾನಮಾನದಲ್ಲಿ ಮಹತ್ವದ ಬದಲಾವಣೆಗಳಾದರೂ ಜಾತ್ರೆಯ ಸಮಯದಲ್ಲಿ ಆಚರಿಸಿಕೊಂಡು ಬರುತ್ತಿದ್ದ ಆ ಸಮುದಾಯದ ಪಾರಂಪರಿಕ ಕ್ರಿಯಾವಿಧಿಗಳ ಸಂಬಂಧವು ಹಾಗೆಯೇ ಮುಂದುವರಿದುಕೊಂಡು ಬರುತ್ತಿವೆ. ಸಾಮಾಜಿಕ ವ್ಯವಸ್ಥೆಯಲ್ಲಿ ವ್ಯಕ್ತಿಗಳು ಬದಲಾಗಿ ಆ ಸಾಮಾಜಿಕ ವ್ಯವಸ್ಥೆ ಹಾಗೆಯೇ ಇರುವಂತೆ ಜಾತ್ರೆಯ ಆಚರಣೆಗಳನ್ನು ನಿರ್ವಹಿಸುವ ವ್ಯಕ್ತಿಗಳು ಬದಲಾದರೂ ಜಾತ್ರೆಯ ಮಾದರಿ ಹಾಗೆಯೇ ಮುಂದುವರಿದುಕೊಂಡು ಬಂದಿದೆ.

**ಬಿ) ಕಾರ್ಯಾತ್ಮಕ ಸಿದ್ಧಾಂತ**

ಮಲಿನೌಸ್ಕಿ ಎಂಬ ಸಾಮಾಜಿಕ ಮಾನವಶಾಸ್ತ್ರಜ್ಞ ಸಾಮಾಜಿಕ ವ್ಯವಸ್ಥೆಯ ಕಾರ್ಯಾತ್ಮಕ ಪರಿಕಲ್ಪನೆಯನ್ನು ಮೊದಲ ಬಾರಿಗೆ ಬಳಸಿದರು. ವ್ಯಕ್ತಿಯ ವೈಯಕ್ತಿಕ ಹಾಗೂ ಸಾಮಾಜಿಕ ಮುಂದುವರಿಕೆ ಹಾಗೂ ಇವುಗಳ ಅಭಿವೃದ್ಧಿಯ ದೃಷ್ಟಿಯಿಂದ ಪ್ರತಿ ಸಾಮಾಜಿಕ ವ್ಯವಸ್ಥೆಯು ತನ್ನ ಸದಸ್ಯರಿಗೆ ಕೆಲವು ಅವಶ್ಯಕತೆಗಳನ್ನು ಈಡೇರಿಸಿಕೊಡುವಂತೆ ಸಮಾಜದ ಒಂದು ಅಂಗ ವ್ಯವಸ್ಥೆ ಯಾಗಿರುವ ಜಾತ್ರೆಗಳು ಸಹ ಆಯಾ ಸಮಾಜದ ಜನಸಾಮಾನ್ಯರ ಮೂಲಭೂತ ಅವಶ್ಯಕತೆಗಳಾದ ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಮೊದಲಾದ ಅವಶ್ಯಕತೆಗಳನ್ನು ಪೂರೈಸುವ ದೃಷ್ಟಿಯಿಂದ ಆಚರಣೆಗೊಳ್ಳುತ್ತವೆ. ಮನುಷ್ಯ ಸಮಾಜ ಜೀವಿಯಾಗಿ ಬದುಕಲು ಅಗತ್ಯವಾದ ಆಹಾರ, ವಸತಿ, ರಕ್ಷಣೆ ಇತ್ಯಾದಿಗಳನ್ನು ತನ್ನ ಸದಸ್ಯರಿಗೆ ಅಗತ್ಯಕ್ಕನುಗುಣವಾಗಿ ಒದಗಿಸಿ ಕೊಡುತ್ತದೆ. ಅಂತೆಯೇ ಈ ನಿಟ್ಟಿನಲ್ಲಿ ಜಾತ್ರೆಗಳು ಕಾರ್ಯಪ್ರವೃತ್ತವಾಗಿರುವುದು ಕಂಡುಬರುತ್ತದೆ.

ಮಲಿನೌಸ್ಕಿ ಅವರು ತಿಳಿಸಿರುವಂತೆ ಪ್ರತಿ ಸಮಾಜಗಳು ತನ್ನ ನಿರಂತರ ಮುಂದುವರಿಕೆಗಾಗಿ ಆಯಾ ಸಂಸ್ಕೃತಿಗಳು ಆಯಾ ಸಮಾಜದ ಜನ ಸಮುದಾಯಗಳಿಗೆ ಕೆಲವು ಮೂಲಭೂತ ಅವಶ್ಯಕತೆಗಳನ್ನು ಒದಗಿಸಿಕೊಡುತ್ತದೆ. ಅಂತೆಯೇ ಪ್ರತಿ ಸಮಾಜಗಳ ಸಂಸ್ಕೃತಿಯ ಒಂದು ಭಾಗವೆಂಬಂತೆ ಆಚರಣೆಗೊಳ್ಳುವ ಜಾತ್ರೆಗಳು ಈ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಿಕೊಂಡು ಬಂದಿರುವ ಕಾರಣದಿಂದಾಗಿಯೇ ಪ್ರಸ್ತುತದಲ್ಲಿಯೂ ಜಾತ್ರೆಗಳು ಪ್ರತಿ ಸಮಾಜದಲ್ಲಿಯೂ ಅಸ್ತಿತ್ವದಲ್ಲಿವೆ.

ಯಾವುದೇ ಬಗೆಯ ಸಾಮಾಜಿಕ ವ್ಯವಸ್ಥೆಯಾದರೂ ಪ್ರಾಥಮಿಕ ಅವಶ್ಯಕತೆಗಳಾದ ಆಹಾರ, ರಕ್ಷಣೆ, ವಿಶ್ರಾಂತಿ, ಮೊದಲಾದವುಗಳನ್ನು ತನ್ನ ಸದಸ್ಯರಿಗೆ ಅಗತ್ಯವಾಗಿ ಪೂರೈಸುವ ಕಾರ್ಯವನ್ನು ಸಮರ್ಥವಾಗಿ ನಿರ್ವಹಿಸಿಕೊಂಡು ಬರುತ್ತದೆ ಎಂದು ಮಲಿನೌಸ್ಕಿಯವರು ತಿಳಿಸಿರುವಂತೆ ಜಾತ್ರೆಗಳು ಸಹ ವರ್ಷವಿಡೀ ದುಡಿದು ದಣಿದ ಜನಸಮುದಾಯ ವರ್ಗದವರಿಗೆ ವಿಶ್ರಾಂತಿ ನೀಡುವ ಉದ್ದೇಶದ ಹಿನ್ನೆಲೆಯಲ್ಲಿ ಸುಗ್ಗಿ ಮುಗಿದ ತರುವಾಯ ಆಚರಣೆಗೊಳ್ಳುವುದು ಕಂಡು ಬರುತ್ತದೆ. ಜೊತೆಗೆ ಜಾತ್ರೆಯ ಸಮಯದಲ್ಲಿ ಇಷ್ಟ ದೈವಕ್ಕೆ ಭಕ್ತಿಪೂರ್ವಕವಾಗಿ ಪೂಜೆ ಸಲ್ಲಿಸುವುದರಿಂದ ತಮಗೂ ಮತ್ತು ತಮ್ಮ ಜಾನುವಾರುಗಳಿಗೂ ಯಾವುದೆ ಮಾರಣಾಂತಿಕ ರೋಗ ಬಾರದಂತೆ ರಕ್ಷಿಸಿ ಬೆಳೆ ಸಂವೃದ್ಧಿಯಾಗುತ್ತದೆ ಎಂಬ ನಂಬಿಕೆ ಪ್ರಸ್ತುತವು ಗ್ರಾಮೀಣ ಭಾಗದಲ್ಲಿ ಮುಂದುವರಿದುಕೊಂಡು ಬಂದಿರುವುದು ಕಾರ್ಯಕ್ಷೇತ್ರದ ಸಮಯದಲ್ಲಿ ದೃಢಪಡಿಸಿದೆ.

ಮಲಿನೌಸ್ಕಿ ಅವರೇ ತಿಳಿಸಿರುವಂತೆ ಪೌಷ್ಟಿಕತೆ ಎಂದರೆ ಕೇವಲ ಹಸಿವು ನೀಗಿಸುವ ಆಹಾರವಷ್ಟೇ ಆಗಿರದೆ ಅದು ವ್ಯಕ್ತಿಯ ದೈಹಿಕ ಮತ್ತು ಮಾನಸಿಕ ಬೆಳವಣಿಗೆಯ ಸಮತೋಲನವನ್ನು ಕಾಪಾಡುವಂತಿರಬೇಕು. ಈ ನಿಟ್ಟಿನಲ್ಲಿ ಜಾತ್ರೆಗಳು ವ್ಯಕ್ತಿ ಮತ್ತು ವ್ಯಕ್ತಿಯ ಗೌರವ ಸೂಚಕವಾದ ಕಾರ್ಯಗಳನ್ನು ಸಮಾಜದ ವಿವಿಧ ಜನ ವರ್ಗಗಳೊಂದಿಗೆ ಹಂಚಿಕೊಳ್ಳುವ ಮೂಲಕ ಎಲ್ಲಾ ವರ್ಗದವರ ಮಾನಸಿಕ ಬೆಳವಣಿಗೆ ಮತ್ತು ಸಂತೃಪ್ತಿಗೆ ಸಹಾಯಕವಾಗಿದೆ. ಸಮಾಜವು ವ್ಯಕ್ತಿಗೆ ಒಳ್ಳೆಯ ಪರಿಸರವನ್ನು ಅಂದರೆ ವ್ಯಕ್ತಿಯ ವ್ಯಕ್ತಿತ್ವದ ಸರ್ವತೋಮುಖ ಅಭಿವೃದ್ಧಿಗೆ ಪೂರಕವಾದ ವಾತಾವರಣವನ್ನು ಒದಗಿಸಿಕೊಡುವಂತಿರಬೇಕು ಎಂದು ಮಲಿನೌಸ್ಕಿ ತಿಳಿಸಿದ್ದಾರೆ. ಇದಕ್ಕೆ ಪೂರಕ ವಾತಾವರಣ ಜಾತ್ರೆಗಳ ಆಚರಣೆಯ ಸಮಯದಲ್ಲಿ ಕಂಡುಬರುತ್ತದೆ. ಅಂದರೆ ಜಾತ್ರೆ ಸಮಯದಲ್ಲಿ ಎಲ್ಲ ಜನವರ್ಗದವರು ಜಾತಿ ಭೇದಭಾವ ಮರೆತು ಕೂಡಿ ದುಡಿಯುವ, ಕೂಡಿ ಕುಣಿಯುವ, ಕೂಡಿ ಉಣ್ಣುವ, ಕೂಡಿ ತೇರೆಳೆಯುವ ಸಮಯದಲ್ಲಿ ಪರಸ್ಪರ ಸಹಕಾರ ಮನೋಭಾವದಿಂದ ಕಾರ್ಯ ಪ್ರವೃತ್ತರಾಗುವ ಸನ್ನಿವೇಶವನ್ನು ಜಾತ್ರೆ ಒದಗಿಸಿಕೊಡುವುದರ ಮೂಲಕ ಸಮಾಜದ ಎಲ್ಲಾ ವರ್ಗದವರ ಸರ್ವತೋಮುಖ ಅಭಿವೃದ್ಧಿಯ ದಾರಿಯನ್ನು ಸುಗಮಗೊಳಿಸಿ ಕೂಡಿಬಾಳಿದರೆ ಸ್ವರ್ಗಸುಖ ಎಂಬುದನ್ನು ಮನವರಿಕೆ ಮಾಡಿಕೊಡುತ್ತದೆ.

ಇವರು ತಿಳಿಸುವಂತೆ ಮಾನವನ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಮೊದಲಾದ ವಿಭಿನ್ನ ಬಯಕೆಗಳನ್ನು ಪೂರೈಸಿಕೊಡುವ ವ್ಯವಸ್ಥೆಯು ಪ್ರತಿ ಸಮಾಜದಲ್ಲಿಯೂ ಅವಶ್ಯಕತೆಯಿದೆ ಎಂದು ತಿಳಿಸಿರುವಂತೆ ಜಾತ್ರೆಗಳ ಆಚರಣೆಯ ಪ್ರಮುಖ ಉದ್ದೇಶವೇ ಸಮಾಜದ ಮಾನವ ಸಹಜವಾದ ಕಾರ್ಯ, ಸಾಂಸ್ಕೃತಿಕ ಕಾರ್ಯ, ಆರ್ಥಿಕ ಕಾರ್ಯ, ರಾಜಕೀಯ ಕಾರ್ಯ ಮೊದಲಾದ ಕಾರ್ಯಾತ್ಮಕ ಅವಶ್ಯಕತೆಗಳ ಈಡೇರಿಕೆಯ ಹಿನ್ನೆಲೆಯಲ್ಲಿ ಜಾತ್ರೆಗಳು ಎಲ್ಲಾ ಜನಸಮುದಾಯಗಳಲ್ಲೂ ಆಚರಣೆಗೊಳ್ಳುತ್ತಿವೆ. ಈ ಮೇಲೆ ತಿಳಿಸಿದ ಅವಶ್ಯಕತೆಗಳನ್ನು ವ್ಯವಸ್ಥಿತವಾಗಿ ಆಯಾ ಸಮಾಜದಲ್ಲಿ

ಜಾತ್ರೆಗಳು ದೇವರು, ಇಲ್ಲವೆ ಊರಿನ ಹೆಸರಿನಲ್ಲಿ ಆಚರಣೆಗೊಳ್ಳುವ ಮೂಲಕ ಅಲ್ಲಿಯ ಜನರ ಸಾಮಾಜಿಕ ಅವಶ್ಯಕತೆಗಳನ್ನು ಸಮರ್ಥವಾಗಿ ಪೂರೈಸುತ್ತವೆ.

ಮಲಿನೌಸ್ಕಿ ಅವರು ತಿಳಿಸಿರುವಂತೆ ಸಾಮಾಜಿಕ ಸಂಸ್ಥೆಗಳು ಪ್ರತಿ ಸಾಮಾಜಿಕ ವ್ಯವಸ್ಥೆಯ ಆಧಾರಾಂಶಗಳಾಗಿದ್ದು ತಮ್ಮ ಪಾಲಿನ ಕಾರ್ಯವನ್ನು ವ್ಯವಸ್ಥಿತವಾಗಿ ನಿರ್ವಹಿಸುವಂತೆ ಮತೀಯ ಸಂಸ್ಥೆಯ ಪ್ರಧಾನ ಕಾರ್ಯವಾಗಿ ಜಾತ್ರೆಯು ಜನರ ಭಕ್ತಿ-ಭಾವಗಳ ಈಡೇರಿಕೆಯ ಕಾರ್ಯವಾಗಿ ಆಚರಣೆಗೊಳ್ಳುತ್ತದೆ. ಇವರೆ ತಿಳಿಸಿರುವಂತೆ ಸಾಮಾಜಿಕ ವ್ಯವಸ್ಥೆಯ ಎಲ್ಲಾ ಅಂಶಗಳು ತಮ್ಮ ನಿಗಧಿತ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸದಿದ್ದಲ್ಲಿ ಸಮಾಜವು ಸಧೃಡವಾಗಿ ಬೆಳೆಯಲು ಸಾಧ್ಯವಿಲ್ಲ. ಸಾಮಾಜಿಕ ವ್ಯವಸ್ಥೆಯ ಮತಾಚರಣೆಯ ಭಾಗವಾಗಿ ಆಚರಣೆಗೊಳ್ಳುವ ಜಾತ್ರೆಗಳು ಜನರನ್ನು ಒಂದುಗೂಡಿಸುವ, ಸಾಮಾಜಿಕ ಸಾಮರಸ್ಯವನ್ನು ಉಂಟುಮಾಡುವ ಕಾರ್ಯವನ್ನು ಸಮರ್ಥವಾಗಿ ನಿರ್ವಹಿಸಿಕೊಂಡು ಬರುವ ಮೂಲಕ ಸಧೃಡ ಮತ್ತು ಸಮೈಕ್ಯ ಬೆಳವಣಿಗೆಗೆ ಸಹಕಾರಿಯಾಗಿದೆ.

**ಮಲಿನೌಸ್ಕಿಯವರು ಸೂಚಿಸಿರುವ ಸಂಸ್ಕೃತಿಯ ಸಾಧನಾತ್ಮಕ ಅವಶ್ಯಕತೆಗಳು**

ಪ್ರತಿ ಸಾಮಾಜಿಕ ವ್ಯವಸ್ಥೆಯ ಸಾಧನಾತ್ಮಕ ಅವಶ್ಯಕತೆಗಳನ್ನು ಮಲಿನೌಸ್ಕಿ ಅವರು ಎರಡು ಅಂಶಗಳ ಮೂಲಕ ಸೂಚಿಸಿದ್ದಾರೆ. ಅವುಗಳೆಂದರೆ,

೧) ವ್ಯಕ್ತಿಯ ಜೈವಿಕ ಅವಶ್ಯಕತೆಗಳನ್ನು ಪೂರೈಸುವುದು. ಎಲ್ಲಾ ಸಮಾಜ ಸಂಸ್ಕೃತಿಗಳು ತನ್ನ ಸಾಂಸ್ಕೃತಿಕ ನಿಯಮಗಳ ಪರಿಮಿತಿಯೊಳಗೆ ತನ್ನ ಸಮುದಾಯಗಳ ಸದಸ್ಯರಿಗೆ ಜೈವಿಕ ಅವಶ್ಯಕತೆಗಳಾದ ಆಹಾರ, ಲೈಂಗಿಕತೆಯ ಈಡೇರಿಕೆ, ರಕ್ಷಣೆ, ವಿಶ್ರಾಂತಿ ಮೊದಲಾದವುಗಳನ್ನು ಪೂರೈಸಿಕೊಡುತ್ತದೆ. ಅಂತೆಯೇ ಸಂಸ್ಕೃತಿಯ ಒಂದು ಭಾಗವಾಗಿ ಆಚರಣೆಗೊಳ್ಳುವ ಜಾತ್ರೆಗಳು ಈ ಎಲ್ಲಾ ಮಾನವ ಸಹಜ ಜೈವಿಕಾವಶ್ಯಕತೆಗಳ ಈಡೇರಿಕೆಯ ಉದ್ದೇಶದ ಹಿನ್ನೆಲೆಯಲ್ಲಿ ಆಚರಣೆಗೊಳ್ಳುವುದನ್ನು ಜಾತ್ರೆಗಳು ನಡೆಯುವ ಸಮಯದಲ್ಲಿ ಗುರುತಿಸಲಾಗಿದೆ.

೨) ಎಲ್ಲಾ ಅವಶ್ಯಕತೆಗಳ ಸಾಂಸ್ಕೃತಿಕ ಪ್ರತ್ಯುತ್ತರಗಳಾಗಿ ಪ್ರತಿ ಸಮಾಜದಲ್ಲಿಯೂ ಅಲ್ಲಿನ ಸಾಂಸ್ಕೃತಿಕ ನಿಯಮಗಳಿಗನುಗುಣವಾಗಿ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಅವಶ್ಯಕತೆಗಳನ್ನು ಜನರು ಈಡೇರಿಸಿಕೊಳ್ಳುವುದು ಕಂಡು ಬರುತ್ತದೆ. ಅಂತೆಯೇ ಸಮಾಜದ ಸಾಂಸ್ಕೃತಿಕ ನಿಯಮಗಳ ಪ್ರತಿಬಿಂಬವೆಂಬಂತೆ ಆಚರಣೆಗೊಳ್ಳುವ ಜಾತ್ರೆಗಳು ಇದೇ ಮಾದರಿಯನ್ನು ಅನುಸರಿಸಿ ಈ ಮೇಲಿನ ಅವಶ್ಯಕತೆಗಳನ್ನು ಪೂರೈಸುತ್ತವೆ.

ಈ ಕೆಳಗಿನ ವಿವರಣೆ ಎರಡು ಅಂಶಗಳನ್ನು ಈ ರೀತಿ ದೃಢಪಡಿಸುತ್ತದೆ. ಅದೇನೆಂದರೆ ಸಂಸ್ಕೃತಿಯು ವಾಸ್ತವಿಕತೆಯ 'ಸಾಧನವಾಗಿದ್ದು ವಸ್ತು, ವ್ಯವಸ್ಥೆ, ವಿಚಾರ, ಪದ್ಧತಿ, ನಂಬಿಕೆ, ಮೌಲ್ಯಗಳು,

ಮೊದಲಾದವುಗಳ ಹಾಗೂ ಆಯಾ ಸಾಮಾಜಿಕ ವ್ಯವಸ್ಥೆಯ ಈಡೇರಿಸುವಂತೆಯೆ ಸಂಸ್ಕೃತಿಯ ಪ್ರಕಟಿತ ರೂಪವಾಗಿ ಕಂಡುಬರುವ ಜಾತ್ರೆಗಳೂ ಸಹ ಈ ಬಗೆಯ ಜೈವಿಕ ಅಗತ್ಯತೆಗಳನ್ನು ಈಡೇರಿಸುವ ಸಾಧನಗಳಾಗಿ ಮುಂದುವರೆದಿವೆ.

ಸಾಂಸ್ಕೃತಿಕ ಪ್ರತ್ಯುತ್ತರವಾಗಿರುವ ಸಾಮಾಜಿಕ ವ್ಯವಸ್ಥೆಯು ಎಂತಹ ಕಾರ್ಯಗಳನ್ನು ನಿರ್ವಹಿಸುತ್ತದೆ. ಎಂದರೆ ವ್ಯಕ್ತಿಯ ವರ್ತನೆಯನ್ನು ಶರೀರಶಾಸ್ತ್ರದ ಅಧ್ಯಯನದಿಂದಲೂ ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಅಂದರೆ ಅವನ ವರ್ತನೆಯನ್ನು ಅವನ ಮೂಲ ಸಾಂಸ್ಕೃತಿಕ ನಿರ್ಧಾರಿತ ತತ್ವದಿಂದ ಮತ್ತು ವ್ಯಕ್ತಿಯನ್ನು ರೂಪಿಸುವ ಪ್ರಕ್ರಿಯೆಯ ವಿಶ್ಲೇಷಣೆಯಿಂದ ಅಲ್ಲಿಯ ಜನರ ವರ್ತನೆಗಳನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಜಾತ್ರೆಯ ಸಮಯದಲ್ಲಿ ಅವರು ನಿರ್ವಹಿಸುವ ಸಾಂಸ್ಕೃತಿಕ ಕ್ರಿಯಾತ್ಮಕ ವರ್ತನೆಯಿಂದಲೂ ಅವರನ್ನು ಅರ್ಥಮಾಡಿಕೊಳ್ಳಬಹುದು. ಅಂದರೆ ಗುಂಪಿನ ಅಸ್ತಿತ್ವ, ಸಾಂಸ್ಕೃತಿಕ ಕೊಡು ಕೊಳ್ಳುವಿಕೆಯ ತತ್ವದ ಆಧಾರದ ಮೇಲೆ ಸಂಘಟಿತ ಸಂಸ್ಕೃತಿಯನ್ನು ಅನಿವಾರ್ಯವಾಗಿ ಮಾಡುತ್ತಾರೆ ಎಂದು ಮಲಿನೌಸ್ಕಿ ತಿಳಿಸಿದ್ದಾರೆ.

### ಸಿ) ಸಾಂಕೇತಿಕ ಅಂತರ್ ಕ್ರಿಯಾ ಸಿದ್ಧಾಂತ

ಸಮಾಜ ಜೀವಿಯಾಗಿರುವ ಮಾನವನ ಜೀವನವು ಆಂತರಿಕ ಕ್ರಿಯೆಗಳಿಂದ ಕೂಡಿದೆ. ತಮ್ಮ ದಿನನಿತ್ಯದ ಒಡನಾಟದ ಸಮಯದಲ್ಲಿ ವ್ಯಕ್ತಿಗಳು ಕ್ರಿಯೆ ಮತ್ತು ಪ್ರಕ್ರಿಯೆಗಳ ಮೂಲಕ ತಮ್ಮ ಅಭಿಪ್ರಾಯ, ಮನೋವೇದನೆ, ಹಾಗೂ ದೃಷ್ಟಿಕೋನಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವುದು ಕಂಡುಬರುತ್ತದೆ. ಈ ಬಗೆಯ ಅಂತರ್‌ಕ್ರಿಯೆಯು ವಿವಿಧ ರೂಪದ ಸಂಕೇತಗಳ ಮೂಲಕ ಸೃಷ್ಟಿಸಿ ಅವುಗಳ ಮೂಲಕ ಜಾತ್ರೆಯಂತಹ ಆಚರಣೆಗಳನ್ನು ಜಾರಿಗೊಳಿಸಿ ಅರ್ಥಪೂರ್ಣವಾದ ಅಂತರ್ ಕ್ರಿಯೆಯಲ್ಲಿ ತೊಡಗುವುದು ಕಂಡು ಬರುತ್ತದೆ. ಈ ಜಾತ್ರೆಗಳಲ್ಲಿ ಭಾಗವಹಿಸುವಾಗ ವ್ಯಕ್ತಿಗಳು ತಮ್ಮ ಮನಸ್ಸು, ಸ್ವಪ್ರಜ್ಞೆಯನ್ನು ರೂಪಿಸಿಕೊಳ್ಳುತ್ತಾರೆ. ಈ ಬಗೆಯ ಸಂಕೇತಗಳ ಅಧ್ಯಯನದಿಂದ ವ್ಯಕ್ತಿ, ವರ್ತನೆ, ಹಾಗೂ ಸಮಾಜವನ್ನು ಅರ್ಥಮಾಡಿಕೊಳ್ಳುತ್ತೇವೆ. ಸಂಕೇತವೆಂಬುದು ಏನನ್ನಾದರು ಗುರುತಿಸಲು ಇರುವ ಒಂದು ಮಾಧ್ಯಮ. ಈ ಸಂಕೇತವು ದೇವರಾಗಿದ್ದರೆ ಅದರ ಹೆಸರಿನಲ್ಲಿ ಆಚರಿಸುವ ಜಾತ್ರೆಗಳ ಸಮಯದಲ್ಲಿ ಸೇರುವ ಜನರ ಸಾಮಾಜಿಕ ಅಂತರ್‌ಕ್ರಿಯೆ ಹಾಗೂ ವರ್ತನೆ ಅರ್ಥಪೂರ್ಣವಾದದ್ದೆನಿಸುತ್ತದೆ.

### ಮಾನವನ ಸ್ವಭಾವ ಹಾಗೂ ಸಾಮಾಜಿಕ ಪ್ರಕ್ರಿಯೆ

ಚಾರ್ಲ್ಸ್ ಹಾರ್ಟನ್ ಕೂಲೆ ಅವರು 'ಸ್ವಪ್ರಜ್ಞೆ; ಸಾಮಾಜಿಕ ಭಾವನೆ ಒಟ್ಟೊಟ್ಟಿಗೆ ಜನಿಸುವವು. ಹಲವು ವ್ಯಕ್ತಿಗಳು ಪರಸ್ಪರ ಒಂದುಗೂಡುವಿಕೆಯಿಂದ ಸಮಾಜ ಸೃಷ್ಟಿಯಾಗಿದೆ ಎಂದಿರುವಂತೆ ಒಂದು ಸಾಮಾನ್ಯ ಸಂಕೇತದ ಆಧಾರದ ಮೇಲೆ ಜನರು ಪರಸ್ಪರ ಒಂದುಗೂಡಿ ಆರಾಧಿಸಲು

ತೊಡಗಿದರೆ ಜಾತ್ರೆ ಅಸ್ತಿತ್ವಕ್ಕೆ ಬರುತ್ತದೆ. ಈ ಹಿನ್ನೆಲೆಯಲ್ಲಿ ವ್ಯಕ್ತಿ ಹಾಗೂ ಸಮಾಜದ ನಡುವಿನ ಸಂಬಂಧವನ್ನು ಜಾತ್ರೆಯ ಸನ್ನಿವೇಶದಲ್ಲಿ ಸ್ಪಷ್ಟವಾಗಿ ತಿಳಿಯಲು ಸಾಧ್ಯವಾಗುತ್ತದೆ. ಅವರೆ ತಿಳಿಸಿರುವಂತೆ ಸಮಾಜದಿಂದ ಪ್ರತ್ಯೇಕಿತನಾದ ವ್ಯಕ್ತಿಯಾಗಲಿ, ವ್ಯಕ್ತಿಗಳಿಂದ ಪ್ರತ್ಯೇಕಿತವಾದ ಸಮಾಜವಾಗಲಿ ಇರುವುದು ಅಸಂಭವವಾಗಿರುತ್ತದೆ ಸಮಾಜದ ವಿಭಿನ್ನ ಜನಸಮುದಾಯಗಳು ಸೇರುವಿಕೆಯಿಂದ ಮಾತ್ರ ಜಾತ್ರೆ ಜರುಗುತ್ತವೆ. ಜನರು ಸೇರುವಿಕೆಯಿಲ್ಲದೆ ಜಾತ್ರೆ ಅಸ್ತಿತ್ವಕ್ಕೆ ಬರಲು ಸಾಧ್ಯವಿಲ್ಲ. ಜನ ಮರಳೋ ಜಾತ್ರೆ ಮರುಳೋ, ಜನ ಸೇರಿದರೆ ಜಾತ್ರೆ, ಹಬ್ಬದೂಟ ಜಾತ್ರೆಯ ನೋಟ ಎಂಬ ಸಾಮಾಜಿಕ ನುಡಿಗಟ್ಟುಗಳು ಜನ ಸೇರುವಿಕೆಯಿಂದ ಜಾತ್ರೆ ಜರುಗುತ್ತದೆ ಎಂಬುದನ್ನು ತಿಳಿಸುತ್ತವೆ.

**ಸಿ.ಹೆಚ್.ಕೂಲೆ** ಅವರ ಅಭಿಪ್ರಾಯದಲ್ಲಿ ಸದಸ್ಯ ವ್ಯಕ್ತಿಗಳ ಸಾಮೂಹಿಕ ಮನೋಭಾವವಿಲ್ಲದೆ ಯಾವುದೇ ಒಂದು ಸಮಾಜವಾಗಲಿ ಅಥವಾ ಸಮೂಹವಾಗಲಿ ಅಸ್ತಿತ್ವದಲ್ಲಿರಲಾರವು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಅಂತೆಯೇ ಸಮಾಜದ ನಿರ್ಧಿಷ್ಟ ದೃಷ್ಟಿಕೋನಗಳನ್ನು ವ್ಯಕ್ತಪಡಿಸಿದ ಜಾತ್ರೆಯಾಗಲಿ ಅಥವಾ ಜಾತ್ರೆಯ ಆಚರಣೆಯಲ್ಲಿ ಭಾಗವಹಿಸಿದ ವ್ಯಕ್ತಿಗಳಾಗಲಿ ಇರಲು ಸಾಧ್ಯವಿಲ್ಲ. ಸಿ.ಹೆಚ್.ಕೂಲೆ ಅವರ ಈ ಅಭಿಪ್ರಾಯದ ಹಿನ್ನೆಲೆಯಲ್ಲಿ ವ್ಯಕ್ತಿ ಮತ್ತು ಜಾತ್ರೆ, ಜಾತ್ರೆ ಮತ್ತು ವ್ಯಕ್ತಿ, ಸಮಾಜ ಮತ್ತು ಜಾತ್ರೆ, ಜಾತ್ರೆ ಮತ್ತು ಸಮಾಜ, ಜಾತ್ರೆ ಮತ್ತು ವ್ಯಕ್ತಿ ಹಾಗೂ ಸಮಾಜ, ವ್ಯಕ್ತಿ ಮತ್ತು ಸಮಾಜ ಹಾಗೂ ಜಾತ್ರೆಗಳು ಎಂಬ ಪದ ಪ್ರಯೋಗದ ಪರಿಕಲ್ಪನೆಗಳು ಪರಸ್ಪರ ವಿರುದ್ಧಾರ್ಥವಲ್ಲದ ವ್ಯತ್ಯಾಸದಿಂದ ಕೂಡಿರದೆ ಪೂರಕವಾಗಿದೆ.

ಸಾಮಾಜಿಕ ವ್ಯವಸ್ಥೆಯನ್ನು ಸಂಕೇತಿಸಲು ಸಿ.ಹೆಚ್.ಕೂಲೆಯವರು 'ಸಾಮಾಜಿಕ' ರಂನ ಪರಿಕಲ್ಪನೆಯು ಮೂರು ಅರ್ಥಗಳಿಂದ ಕೂಡಿದ ಒಂದು ವ್ಯವಸ್ಥೆ ಎಂದು ತಿಳಿಸಿದ್ದಾರೆ. ಅವುಗಳೆಂದರೆ,

೧) ಸಮಾಜವು ಮಾನವತೆಯ ಸಾಮೂಹಿಕ ಅಂಶವನ್ನು ಸೂಚಿಸುತ್ತದೆ, ಅಂತೆಯೇ ಜಾತ್ರೆಯು ಸಹ ಮಾನವೀಯ ಮೌಲ್ಯಗಳಿಂದೊಡಗೂಡಿದ ಜನರ ಮನಸ್ಥಿತಿಯನ್ನು ಎತ್ತಿಹಿಡಿಯುತ್ತದೆ.

೨) ಜನರ ಮಧ್ಯೆ ನಡೆಯುವ ಮುಖಾಮುಖಿ ಸಾಮಾಜಿಕ ಅಂತರ್ ಕ್ರಿಯೆಯನ್ನು ಸಾಮಾಜಿಕ ವ್ಯವಸ್ಥೆ ಸಂಕೇತಿಸುವಂತೆ ಜಾತ್ರೆಯಲ್ಲಿ ಸೇರಿದ ಜನರು ಸಹ ಪರಸ್ಪರ ಅಂತಕ್ರಿಯೆಗೆ ಒಳಗಾಗುವ ಮೂಲಕ ಸಾಂಸ್ಕೃತಿಕ ವಿನಿಮಯದ ಜೊತೆಗೆ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಆಧ್ಯಾತ್ಮಿಕ ವಿಷಯಗಳ ಕೊಡುಕೊಳ್ಳುವಿಕೆಯಲ್ಲಿ ತೊಡಗುವುದನ್ನು ಕಾಣುತ್ತೇವೆ.

೩) ಸಾಮೂಹಿಕ ಕಲ್ಯಾಣಕ್ಕೆ ಹಿತಕರವಾದುದು. ಸಾಮಾಜಿಕ ಎಂಬ ಪದದ ಪರಿಕಲ್ಪನೆ ಸಮಾಜದ ಅಭಿವೃದ್ಧಿಯ ದೃಷ್ಟಿಯಿಂದ ಎಲ್ಲಾ ವ್ಯಕ್ತಿಗಳನ್ನು ಪರಸ್ಪರ ಸಾಮೀಪ್ಯಗೊಳಿಸುವ ಒಂದುಗೂಡಿಸುವ ಮತ್ತು ಐಕ್ಯಗೊಳಿಸುವುದನ್ನು ಸಂಕೇತಿಸುತ್ತದೆ. ಅಂತೆಯೇ ಜಾತ್ರೆಯು ಸಹ ಒಂದು ನಿರ್ಧಿಷ್ಟ ದೇವರ ಹೆಸರಿನ ಸಂಕೇತವಾದ ನಿಯಮದನ್ವಯ ಸಾಮಾಜಿಕ ವ್ಯವಸ್ಥೆಯ ಜನರನ್ನು ಜಾತಿಭೇದ, ಭಾಷೆಭೇದ, ಮತಭೇದವ ಮರೆಸಿ ಶಾಂತಿ, ಸಹಕಾರ, ಸಹಬಾಳ್ವೆ, ಸಹೋದರತ್ವ

ಗುಣಗಳೊಂದಿಗೆ ಅಲ್ಲಿಯ ಜನರನ್ನು ಒಂದುಗೂಡಿಸಿ ಅವರ ಅಗತ್ಯತೆಗಳನ್ನು ಈಡೇರಿಸುವ ಮೂಲಕ ಸಮಗ್ರ ಸಮಾಜದ ಅಭಿವೃದ್ಧಿಗೆ ಶ್ರಮಿಸುವ ಹಿತವನ್ನೊಳಗೊಂಡಿರುವುದು ಕಂಡುಬರುತ್ತದೆ.

ವ್ಯಕ್ತಿ ಹಾಗೂ ಸಮಾಜದ ನಡುವಿನ ಸಂಬಂಧವನ್ನು ಸಿ.ಹೆಚ್.ಕೂಲೆ ಅವರು ಎರಡು ಪ್ರಮುಖ ಅಂಶಗಳಿಂದ ಖಚಿತಪಡಿಸಿದ್ದಾರೆ. ಅವುಗಳೆಂದರೆ,

೧) ಸಮಾಜವು ಮಾನಸಿಕವಾದುದು, ಅಂತೆಯೇ ಜಾತ್ರೆಯು ಸಹ ಮಾನಸಿಕ ಕಲ್ಪನೆಯ ಅಭಿವ್ಯಕ್ತಿಯ ಪ್ರಕಟಿತ ರೂಪವಾಗಿದೆ ಪ್ರತಿಸಮಾಜದಲ್ಲಿಯೂ ಆಚರಣೆಯಲ್ಲಿದೆ.

೨) ಮನವು ಸಾಮಾಜಿಕವಾದುದರಂತೆಯೇ ಪ್ರತಿಸಮಾಜ ಮಾನವನ ಭಾವನಾತ್ಮಕತೆಯ ಪ್ರತಿಬಿಂಬವೆಂಬಂತೆ ಜಾತ್ರೆಗಳು ಸಾಮಾಜಿಕ ಸನ್ನಿವೇಶಗಳಾಗಿ ಆಚರಣೆಗೊಳ್ಳುವುದನ್ನು ಕಾಣುತ್ತೇವೆ.

### ೩.೩ ಜಾತ್ರೆ : ಹುಟ್ಟು ಮತ್ತು ಬೆಳವಣಿಗೆ

ಜನಸಾಮಾನ್ಯರು ಪರಸ್ಪರ ಸಹಕಾರ, ಸಹಬಾಳ್ವೆ, ಸಹೋದರತ್ವ, ಪ್ರೀತಿ, ಮಮತೆ, ಕರುಣೆ ಇವುಗಳಿಂದ ಕೂಡಿದ ಜೀವನವನ್ನು ಸುಖ-ಶಾಂತಿ, ನೆಮ್ಮದಿಯಿಂದ ಕಳೆಯಲು ಸಮೂಹದ ಎಲ್ಲರನ್ನು ಒಂದುಗೂಡಿಸುವ ಪೂರಕ ಸಾಮಾಜಿಕ ಸನ್ನಿವೇಶಗಳೇ ಜಾತ್ರೆಗಳು ಎಂದು? ಎಲ್ಲಿ? ಹೇಗೆ ಹುಟ್ಟಿಕೊಂಡವು? ಎಂಬ ಪ್ರಶ್ನೆಗಳು ಮೇಲು ನೋಟಕ್ಕೆ ಸರಳವಾಗಿ ಕಂಡರೂ ಇವುಗಳಿಗೆ ನಿಖರವಾದ ಉತ್ತರ ಸುಲಭ ಸಾಧ್ಯವಿಲ್ಲ.

ಇತಿಹಾಸಪೂರ್ವ ಕಾಲದಿಂದಲೂ ಮಾನವ ಜೀವಿಸಿದ್ದನೆಂಬುದಕ್ಕೆ ಅನೇಕ ದಾಖಲೆಗಳು ನಮಗೆ ದೊರಕಿದ್ದು ಜಾತ್ರೆಗಳ ಉಗಮದ ಕುರಿತಾಗಿ ನಾವು ಇತಿಹಾಸದಿಂದ ಮಾಹಿತಿ ಪಡೆಯಬಹುದಾದರೂ ಇತಿಹಾಸ ಒಂದರಿಂದಲೇ ಪೂರ್ಣ ಪ್ರಮಾಣದ ಉತ್ತರವನ್ನು ಪಡೆಯಲು ಸಾಧ್ಯವಿಲ್ಲ. ಇತಿಹಾಸದಿಂದ ಬಹುಶಃ ಅರ್ಧಭಾಗದ ಉತ್ತರವನ್ನು ಪಡೆಯಬಹುದು. ಜಾತ್ರೆಗಳ ಉಗಮದ ಕುರಿತಾಗಿ ಇನ್ನುಳಿದ ಉತ್ತರವನ್ನು ಕಂಡುಕೊಳ್ಳಲು ಊಹೆ ಮತ್ತು ತರ್ಕಗಳ ಮೊರೆಹೋಗದೆ ಅನ್ಯಮಾರ್ಗವಿಲ್ಲ. ಜಾತ್ರೆಯ ಆಚರಣೆಗಳು ಪ್ರಸ್ತುತ ದಿನಗಳಲ್ಲಿ ಅಧ್ಯಯನದ ಮೂಲ ವಸ್ತು ವಿಷಯಗಳಾಗಿ ಮಾನ್ಯತೆ ಪಡೆಯುತ್ತಿದ್ದು ಇವುಗಳ ಮೂಲಸ್ಥಿತಿಯನ್ನು ಯಥಾವತ್ತಾಗಿ ತಿಳಿಸುವ ಯಾವುದೇ ಸಹಾಯಕ, ಪೂರಕ ಸಾಮಗ್ರಿಗಳು ನಮಗೆ ದೊರಕುವುದಿಲ್ಲ, ಅಲ್ಲಲ್ಲಿ ಹರಡಿಕೊಂಡಿರುವ, ಅಲ್ಲಲ್ಲಿ ಪ್ರಚಲಿತದಲ್ಲಿರುವ ವಿರಳವಾದ ಆಧಾರಗಳನ್ನು ಆಧರಿಸಿ ಉಳಿದದ್ದನ್ನು ಊಹಿಸಬೇಕಾಗುತ್ತದೆ. ಇಷ್ಟರಿಂದಲೇ ನಾವು ಅಧ್ಯಯನದ ವಸ್ತುಸ್ಥಿತಿಗೆ ಪೂರ್ಣಪ್ರಮಾಣದಲ್ಲಿ ತಲುಪುತ್ತೇವೆ ಎಂಬ ಯಾವುದೇ ಭರವಸೆ ಇಲ್ಲದಿರುವುದರಿಂದ ನಾವು ಜಾತ್ರೆಯ ಎಷ್ಟು ಸಾಧ್ಯವೋ ಅಷ್ಟು ಹತ್ತಿರಕ್ಕೆ ಹೋಗಲು ಪ್ರಯತ್ನಿಸಬೇಕು.

ಜಾತ್ರೆಗಳ ಹುಟ್ಟು ಮತ್ತು ಬೆಳವಣಿಗೆಗೆ ಸಂಬಂಧಿಸಿದಂತಹ ಮಾಹಿತಿ ದೇವಾಲಯಗಳ ಇತಿಹಾಸದೊಡನೆ, ಮತಾಚರಣೆಯ ಮೌಲ್ಯಗಳೊಡನೆ, ಸಾಮಾಜಿಕ ನಂಬಿಕೆ ಮತ್ತು ಆಚರಣೆಯಿಂದ ತಿಳಿದು ಬಂದರೆ, ಉಳಿದದ್ದು ಊಹೆ ಮತ್ತು ತರ್ಕಗಳಲ್ಲಿ ಹಂಚಿಕೆಯಾಗಿದೆ. ಭೂಮಿಯ ಮೇಲೆ ಮಾನವ ಸಮೂಹವು ಅಸ್ತಿತ್ವಕ್ಕೆ ಬಂದ ಕೋಟ್ಯಾಂತರ ವರ್ಷಗಳ ಆದಿಭಾಗದಲ್ಲಿ ಪ್ರಕೃತಿಯ ವಿಸ್ಮಯಗಳನ್ನು ನೋಡಿ ಹೆದರಿದ ಮಾನವ ಅದರ ವಿಕೋಪಗಳಿಂದ ಪಾರಾಗಲು ಯೋಚಿಸಿದ. ಬಲಿಕೊಡುವುದರಿಂದ ಪ್ರಕೃತಿಯ ಶಕ್ತಿಯನ್ನು ಒಲಿಸಿಕೊಳ್ಳಬಹುದು ಎಂದು ನಂಬಿದ. ಈ ನಂಬಿಕೆಯ ಹಿನ್ನೆಲೆಯಲ್ಲಿ ಪ್ರಕೃತಿಯ ಆಚರಣೆಗಳು, ಹಬ್ಬಗಳು, ಜಾತ್ರೆಗಳು ಹುಟ್ಟಿಕೊಂಡಿರಬೇಕು.

ಆರಂಭದಲ್ಲಿ ಭಯದ ಕಾರಣಕ್ಕಾಗಿ ಪ್ರಕೃತಿಯ ವಸ್ತುಗಳೆಲ್ಲವನ್ನು ಪೂಜಿಸಿದ್ದರಿಂದ ಬಹುದೇವತಾರಾಧನೆಯನ್ನು ಕೈಗೊಂಡ. ಕೊನೆಗೆ ಮಾನವನು ತನ್ನ ವಿಕಾಸದ ಹಂತದಲ್ಲಿ ಬಹುಮುಖಿ ಚಿಂತನೆಗಳ ಅನುಭವದ ಫಲಶೃತಿಯಿಂದ ಏಕದೇವತಾರಾಧನೆಯ ತತ್ವಕ್ಕೆ ಮನಸನ್ನು ಸ್ಥಿರಗೊಳಿಸಿದೆ. ಗುಡಿಕಟ್ಟಿ ದೇವರ ಮೂರ್ತಿಯನ್ನು ಆ ಗುಡಿಯಲ್ಲಿ ಪ್ರತಿಷ್ಠಾಪಿಸಿ ವಿವಿಧ ಹೆಸರುಗಳಿಂದ ಪೂಜಿಸಿರಬೇಕು. ದೇವರ ವಿಶೇಷ ಪೂಜಾ ಸಮಾರಂಭಗಳಲ್ಲೇ ಜಾತ್ರೆಗಳಾಗಿ ಜಾರಿಗೊಂಡಿರಬೇಕು. ಬಹುಶಃ ದೇವಾಲಯಗಳಿಲ್ಲದ ಊರು ಭಾರತದಲ್ಲಿರಲಿಕ್ಕಿಲ್ಲ.

ಮಾನವ ವಿಕಾಸ ಹೊಂದುತ್ತಾ ಸಮೂಹ ಜೀವನಕ್ಕೆ ಅಡಿ ಇಟ್ಟು ನಾಗರಿಕತೆ ಅಂಕುರಿಸಿದಂತೆ ಮಾನವರೆಲ್ಲರೂ ತಾವು ವಾಸಮಾಡುತ್ತಿದ್ದ ಪ್ರದೇಶದಲ್ಲಿ ಆಚರಿಸುವ ಸಮಾರಂಭಗಳು, ದೇವರ ಮೇಲಿನ ನಂಬಿಕೆಯಿಂದ ಮತ್ತು ಭಯದ ನಿರ್ಮೂಲನೆಗಾಗಿ ಆಚರಿಸುವ ದೇವರ ಆರಾಧನೆಯೇ ಕ್ರಮೇಣವಾಗಿ ಬೆಳೆದು ಮುಂದೊಂದುದಿನ ಈ ಆಚರಣೆಗಳ ಒಂದು ಭಾಗವೇ ಜಾತ್ರೆಗಳಾಗಿ ಪರಿವರ್ತನೆಯಾಗಿರಬೇಕು ಎಂಬುದು ಬಹುತೇಕ ಚಿಂತಕರ ಅಭಿಪ್ರಾಯವಾಗಿದೆ.

ಜಾತ್ರೆಯಂತಹ ಸಾಂದರ್ಭಿಕ ವಿಶೇಷ ಆಚರಣೆಗಳನ್ನು ಮನುಷ್ಯ ತನ್ನ ಜೀವನದ ಅನುಭವದಲ್ಲಿ ಕಂಡುಕೊಂಡ. ತನ್ನಲ್ಲಿ ಅಡಗಿರುವ ಉದಾರತೆ ಹಾಗೂ ಸಮಾಜದ ನಿಕಟವರ್ತಿಗಳ ನಡುವೆ ತಮ್ಮ ಜೀವನ ಸಾಮೀಪ್ಯತೆಯನ್ನು ಮತ್ತು ಅನನ್ಯತೆಯ ಅವಿನಾಭಾವ ಸಂಬಂಧವನ್ನು ಕಂಡುಕೊಂಡ, ಜಾರಿಗೆ ತಂದ ಸಾಮಾಜಿಕ ನಿಯಮಗಳನ್ನೊಳಗೊಂಡ ಆಚರಣೆಗಳೇ ಜಾತ್ರೆಗೆ ಪೂರಕ ಸಾಧನಗಳಾಗಿವೆ. ನಿಸರ್ಗದ ಮಡಿಲಲ್ಲಿ ತನ್ನ ಜೀವನ ಪ್ರಪಂಚವನ್ನು ಮತ್ತು ಸಾಮಾಜಿಕ ಜೀವನವನ್ನು ಕಂಡುಕೊಂಡ. ಮಾನವನ ದಿನನಿತ್ಯದ ಬದುಕಿಗೆ ತೊಡಕನ್ನುಂಟು ಮಾಡುತ್ತಿದ್ದ ಕಾಡಿನ ಬಲಿಷ್ಠ ಹಾಗೂ ಸಾದು ಪ್ರಾಣಿಗಳನ್ನು ಮತ್ತು ಜೀವನದ ಅಭಿವೃದ್ಧಿಗೆ ಪೂರಕವಾಗಿ ಸಹಕರಿಸುತ್ತಿದ್ದ ಕೆಲವು ಪ್ರಾಣಿಗಳನ್ನು ತನ್ನ ಸಮೂಹದ ನೆಲೆಯಲ್ಲಿ ಅವುಗಳ ಆಕಾರವನ್ನೇ ಹೋಲುವ ಅದರ ಪುತ್ತಳಿಯನ್ನು ಬಲಿಷ್ಠಶಕ್ತಿ ಕ್ಷೀಣಿಸಿ ಅದರ ಮೂಲ ಶಕ್ತಿ ನಮ್ಮ ಕೈವಶವಾಗುತ್ತದೆ. ಅಲ್ಲದೆ ಅವು ನಮ್ಮ ಅಭಿವೃದ್ಧಿಯದಾರಿಗೆ ಪೂರಕವಾಗಿ ಸಹಕರಿಸುತ್ತವೆ ಎಂದು ನಂಬಿ ಅವುಗಳನ್ನೇ ತಮ್ಮ ದೇವರುಗಳನ್ನಾಗಿ ಮಾಡಿಕೊಂಡು

ಅವುಗಳ ಹೆಸರಿನಲ್ಲಿ ಜಾತ್ರೆಗಳಂತಹ ಆಚರಣೆಗಳನ್ನು ಆಚರಿಸುತ್ತಾ ಬಂದಿದ್ದಾರೆ. ಭಾರತದಲ್ಲಿ, ನಾಗರಹಾವನ್ನೂ, ಪೆರು ದೇಶದಲ್ಲಿ ಬೆಕ್ಕನ್ನು ದೇವರೆಂದು, ಮೆಕ್ಸಿಕೋ ಮತ್ತು ಆಫ್ರಿಕಾದ ಕೆಲವು ಬಣಗಳವರು ಮೊಸಳೆಯನ್ನೂ ದೇವರೆಂದು ಆರಾಧಿಸುವುದನ್ನು ಕಾಣುತ್ತೇವೆ.

"ಒಮ್ಮೊಮ್ಮೆ ಬಿರುಗಾಳಿ ಬೀಸಿದಾಗ ಅದರ ರಭಸಕ್ಕೆ ಮರಗಿಡಗಳು ಬುಡಮೇಲಾಗುವವು. ಗಾಳಿ ಬೀಸಿದಾಗ ಮೈಗೆ ಒತ್ತಿ ಸರಿಯುವುದು. ಆದರೆ ಅದು ಕಣ್ಣಿಗೆ ಕಾಣಿಸುವುದಿಲ್ಲ, ಹಾಗಾದರೆ ಈ ಗಾಳಿ ಎಂಬುದೇನು? ಅದಕ್ಕೆ ಎಷ್ಟೇಕೆ ಸಿಟ್ಟು? ಅದು ಶಾಂತವಾಗಲು ಅದಕ್ಕೆ ಏನು ಬೇಕು ಎಂದು ಆದಿಮಾನವ ಚಿಂತಿಸಿದನು. ಆಕಾಶದಲ್ಲಿ ಗುಡುಗು, ಮಿಂಚು ಆದಾಗ ಇದೆಲ್ಲ ಆಗುವುದೇತಕ್ಕೆ, ಮುಗಿಲಿನ ದೇವತೆ ಸಿಟ್ಟಾಗಿ ಹೀಗೆ ಮಾಡುತ್ತಿರಬೇಕು, ಭೂಮಿ ಪ್ರಳಯವಾಗುವಂಥ ಗುಡುಗು, ಸಿಡಿಲು, ಮಿಂಚಾಗಿ ಮಳೆಬಂದಾಗ ಆ ದೇವತೆಯನ್ನು ಬೇಡಿಕೊಂಡು ಇದರಿಂದ ಪಾರುಮಾಡಲು ಹರಕೆಗಳನ್ನು ಹೊತ್ತರು. ಇಟಲಿ,ಗ್ರೀಸ್,ತುರ್ಕಿ ಮೊದಲಾದ ಪ್ರದೇಶಗಳಲ್ಲಿ ಜ್ವಾಲಾಮುಖಿಗಳು ಸ್ಫೋಟಗೊಂಡು ಅನಾಹುತ ಮಾಡಲು ಯಾವುದೋ ಒಂದು ಶಕ್ತಿ ಇದೆ ಎಂದು ಭಾವಿಸಿ, ಆ ಶಕ್ತಿಯೇ ದೈವ ಎಂದು ಆ ದೈವದ ಕೋಪತಾಪಗಳಿಂದ ಭೂಕಂಪ ಜ್ವಾಲಾಮುಖಿಗಳು ಆಗುವವೆಂದು ಅಂದಿನ ಜನ ಬಗೆದಿದ್ದರು. ಅದಕ್ಕಾಗಿ ಅವರು ಈ ಎಲ್ಲಾ ದೈವಗಳ ಭಯದಿಂದ ಪಾರಾಗಲು ತಾವು ಭಿತ್ತಿ ಬೆಳೆದುದನ್ನು ದೇವರಿಗೆ ಕಾಣಿಕೆ ನೀಡಿ ಆನಂತರ ತಾವು ಸ್ವೀಕರಿಸುವ ಪದ್ಧತಿ ಇಂದಿಗೂ ನಮ್ಮ ಹಳ್ಳಿಗಳಲ್ಲಿದ್ದುದ್ದನ್ನು ಕಾಣುತ್ತೇವೆ."[೧೩] ಕಾರಂತರ ಈ ಹೇಳಿಕೆಗೆ ಸಮರ್ಥನೆ ಎಂಬಂತೆ ಅಧ್ಯಯನದ ಕಾರ್ಯಕ್ಷೇತ್ರದ ಸಮಯದಲ್ಲಿ ಈ ಬಗೆಯ ನಂಬಿಕೆಗಳು, ಆಚರಣೆಗಳು, ಪದ್ಧತಿಗಳು ಜನಮಾನಸದಲ್ಲಿ ಜೀವಂತವಾಗಿ ಆಚರಣೆಯಲ್ಲಿರುವುದು ತಿಳಿದು ಬಂದಿದೆ.

ಅಲೆಮಾರಿಯಾಗಿದ್ದ ಮಾನವ ಬೇಟೆಯ ವೃತ್ತಿಯಿಂದ ಜೀವನ ಸಾಗಿಸುತ್ತಿದ್ದ. ಒಂದೆಡೆ ನೆಲೆ ನಿಂತು ಸಾಂಘಿಕ ಜೀವನಕ್ಕೆ ಕಾಲಿಟ್ಟಾಗ ಬೇಟೆಯಾಡುವ ವೃತ್ತಿಗೆ ತಿಲಾಂಜಲಿ ಹೇಳಿ ವ್ಯವಸಾಯ ವೃತ್ತಿಯನ್ನು ಕಂಡುಕೊಂಡ. ಈ ಸಮಯದಲ್ಲಿ ಗ್ರಾಮ, ಪಟ್ಟಣ, ಸಮೂಹ, ಸಮುದಾಯ, ಸಮಾಜಗಳು ತಲೆ ಎತ್ತತೊಡಗಿದವು. ಈ ಅವಧಿಯಲ್ಲಿ ಅಮೂರ್ತವಾಗಿದ್ದ ದೇವರ ಕಲ್ಪನೆಗೆ ಗುಡಿಗಳನ್ನು ಕಟ್ಟಿ ವ್ಯವಸ್ಥಿತ ರೂಪಕೊಟ್ಟು ತಮ್ಮ ವಾಸಸ್ಥಾನದ ಪರಿಸರದಲ್ಲಿ ಪ್ರತಿಷ್ಠಾಪಿಸಿ ಆರಾಧಿಸತೊಡಗಿದ. ವ್ಯವಸಾಯ ಎಂಬ ಹೊಸ ಜೀವನಕ್ಕೆ ಅಡಿಯಿಟ್ಟ ಮಾನವನಿಗೆ ಈ ಹಿಂದಿನ ಆಶ್ಚರ್ಯಗಳ ಜೊತೆಗೆ ಹೊಸ ಬಗೆಯ ಆಶ್ಚರ್ಯಗಳು ಕಾದಿದ್ದವು.

ಧಾನ್ಯಗಳನ್ನು ಭೂಮಿಯಲ್ಲಿ ಭಿತ್ತಿದಾಗ ಅವು ಮೊಳಕೆಯೊಡೆಯುವುದು ಸಸಿ ಬೆಳೆದು ಫಲನೀಡುವುದು, ಹೆಣ್ಣು ಗಂಡುಗಳು ಸೆಳೆತಕ್ಕೊಳಗಾಗಿ ಸಮಾಗಮ ಹೊಂದಿದ್ದರ ಪ್ರತಿಫಲವಾಗಿ ಹೆಣ್ಣು ಗರ್ಭಧರಿಸಿ ತದ್ರೂಪಿ ವಂಶೋದ್ಧಾರಕ ಸಂತತಿ ಹುಟ್ಟಿಬರುವುದು. ಇದೆಲ್ಲ ಯಾವ ಮಾಯಶಕ್ತಿಯ ಕೆಲಸ ಇದಕ್ಕೂ ದೇವರ ಶಕ್ತಿಯೇ ಕಾರಣವೆಂದು ಯೋಚಿಸಿ ಕರುಳ ಬಳ್ಳಿಯ ಸಂಬಂಧದ

ಸೆಳೆತಕ್ಕೊಳಗಾಗಿ ಮತ್ತು ಜೀವನ ವೃತ್ತಿಯಾಗಿ ಆಯ್ಕೆ ಮಾಡಿಕೊಂಡ ವ್ಯವಸಾಯದ ಫಸಲು ವೃದ್ಧಿಸಿ ತಮ್ಮ ಸಮುದಾಯಕ್ಕೆ ಯಾವುದೇ ಕೇಡು ಬಾರದಂತೆ ರಕ್ಷಿಸು ಎಂದು ದೇವರಲ್ಲಿ ಬೇಡಿಕೊಂಡ. ಕಾಕತಾಳೀಯ ಎಂಬಂತೆ ಸಾಕಷ್ಟು ಮಳೆಯಾಗಿ ಫಸಲು ಹುಲುಸಾಗಿ ಕೈ ಸೇರಿದಾಗ ಇದಕ್ಕೆಲ್ಲ ತಾವು ನಂಬಿದ ದೇವರೇ ಕಾರಣವೆಂದು ತಿಳಿದು ಸ್ತುತಿಯ ನಂತರ ಸಮೂಹ ಬಾಂಧವರೊಂದುಗೂಡಿ ದೇವರ ಹೆಸರಿನಲ್ಲಿ ಜಾತ್ರೆಗಳನ್ನು ಆಚರಿಸತೊಡಗಿದ್ದಾರೆ.

ಭಾರತೀಯ ಸಮಾಜವು ಹಲವು ಮತಗಳ ನೆಲೆಬೀಡು. (ಅನೇಕ ವಿದ್ವಾಂಸರು ಹಾಗೂ ಶ್ರೀಸಾಮಾನ್ಯರು ಮತ ಎಂಬ ಪದವನ್ನು ಧರ್ಮ ಎಂದು ತಪ್ಪಾಗಿ ಪ್ರಯೋಗಿಸುತ್ತಾರೆ.) ಧರ್ಮ ಎಂಬ ಪದ ಸಂಸ್ಕೃತದ 'ಧೃ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. 'ಧೃ' ಎಂದರೆ ಧರಿಸು, ಬೆಂಬಲಿಸು, ಪೋಷಿಸು, ಎತ್ತಿಹಿಡಿ ಎಂಬ ಅರ್ಥವನ್ನು ಕೊಡುತ್ತದೆ. ಎತ್ತಿ ಹಿಡಿಯುವಂತಹದು, ಧರಿಸುವಂತಹುದು ಅಂದರೆ ಸ್ಥಿರವಾಗಿ.

ನಿಲ್ಲಿಸುವಂತಹ ಸಾಮರ್ಥ್ಯ ಈ ಎಲ್ಲಾ ಅರ್ಥದ ಛಾಯೆಯನ್ನು ಈ ಮಾತು ಹೊಂದಿದೆ. ವ್ಯಕ್ತಿ ಮತ್ತು ಸಮಾಜವನ್ನು ಉತ್ತಮ ಸ್ಥಿತಿಯಲ್ಲಿ ಎತ್ತಿ ಹಿಡಿಯುವ ಶಕ್ತಿಯೇ ಧರ್ಮವಾಗಿದೆ.

"ಧರ್ಮ ಪದವನ್ನು ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸುವುದುಂಟು. ಕರ್ತವ್ಯ, ಸ್ವಭಾವ, ಆಚಾರ, ದಾನ ಈ ಎಲ್ಲಾ ಅರ್ಥಗಳು ಧರ್ಮಕ್ಕೆ ಇವೆ."[೧೪] ಎಮಿಲಿಡರ್ಖಿಂ ಅವರ ಪ್ರಕಾರ ಧರ್ಮವೆಂಬುದು ಅಂತರಾವಲಂಬಿಯಾದ ಒಂದು ಅಖಂಡ ವ್ಯವಸ್ಥೆಯಾಗಿದೆ. ಪವಿತ್ರವಾದ ವಸ್ತುಗಳೊಂದಿಗೆ ಸಂಬಂಧವಿರುವ ನಂಬಿಕೆಗಳಿಂದಲೂ ಹಾಗೂ ಆಚರಣೆಗಳಿಂದಲೂ ರಚಿತವಾಗಿದೆ. ಎಂದು ತಮ್ಮ The Elementary Forms of Religious Lifeಎಂಬ ಗ್ರಂಥದಲ್ಲಿ ತಿಳಿಸಿದ್ದಾರೆ. ಸಂವೇಗಾತ್ಮಕ ಅಭಿವ್ಯಕ್ತಿಗಳು ತಮ್ಮ ಆಚರಣೆಗಳಿಂದ ಕೂಡಿದ ವ್ಯವಸ್ಥೆಯೇ ಧರ್ಮ, ಈ ವ್ಯವಸ್ಥೆಯ ಮೂಲಕ ಜನಸಮೂಹವು ಮನುಷ್ಯ ಜೀವನದ ಅಂತಿಮ ಸಮಸ್ಯೆಗಳನ್ನು ಪರಿಹರಿಸಲು ಯತ್ನಿಸುತ್ತೇವೆ. ಇಂತಹ ಸಾಧ್ಯತೆಯೇ ಧರ್ಮ(ಮತ)ವಾಗಿದೆ. ಜನರ ಧಾರ್ಮಿಕ ಆಚರಣೆಗಳನ್ನು ಭಿನ್ನ ಭಿನ್ನತರನಾದವುಗಳಾಗಿದ್ದರೂ ಅಂತಿಮವಾಗಿ ಎಲ್ಲರ ಬದುಕನ್ನು ನಿರ್ದೇಶಿಸುವ ಮತ್ತು ನಿಯಂತ್ರಿಸುವ ಕೇಂದ್ರಶಕ್ತಿ ಮತವೇ ಆಗಿದೆ.

ಸೃಷ್ಟಿಯಲ್ಲಿ ಅಡಗಿರುವ ಕಣ್ಣಿಗೆ ಕಾಣದ ಸತ್ಯವೇ ದೇವರು. ಪ್ರಕೃತಿಯನ್ನು ನಾವು ದೇವರೆಂದು ನಂಬಿದ್ದೇವೆ. "ಕನ್ನಡದ ದೇವರು ಎಂಬ ಪದಕ್ಕೆ ಇಂಗ್ಲೀಷ್‌ನ ಗಾಡ್ ಪದದ ಹೊರತಾಗಿ ಬೇರ ಪದ ಲಭ್ಯವಿಲ್ಲ. ದೇವರು ದುಷ್ಟರನ್ನು ಶಿಕ್ಷಿಸುತ್ತಾನೆ ಎಂಬ ಭಯವಿದ್ದರೆ ನಾವು ಎಚ್ಚರಿಕೆಯಿಂದ ನಡೆದುಕೊಳ್ಳುತ್ತೇವೆ."[೧೫] ಪ್ರಸ್ತುತ ದೈವಭಯದಿಂದ ಜನರು ಒಳ್ಳೆಯವರಾಗಿದ್ದಾರೆ. ದೇವರಿಗೆ ಮೊರೆಯಿಟ್ಟರೆ ಅವನು ಕೈಬಿಡುವುದಿಲ್ಲ ಎಂಬ ನಂಬಿಕೆ ಜನರಲ್ಲಿ ಬಲವಾಗಿದೆ. ಆಧುನಿಕ ದಿನದಲ್ಲೂ ದೇವರನ್ನು ನಂಬುವ ಜನ ಕೋಟಿಗಟ್ಟಲೇ ಇದ್ದಾರೆ. ಮಸೀದಿಗಳಿಗೆ, ಚರ್ಚ್‌ಗಳಿಗೆ, ದೇವಾಲಯಗಳಿಗೆ ಹೋಗುವ

ಜನರ ಸಂಖ್ಯೆ ಹಿಂದಿಗಿಂತಲೂ ಇಂದು ಹೆಚ್ಚಾಗಿದೆ. ವಿಲ್‌ಡ್ಯೂರಾಂಟ್‌ರವರು ನಮ್ಮ ಕಾಲದ ಅತ್ಯಂತ ಮಹತ್ವದ ಪ್ರಶ್ನೆ ಸಮಾಜವಾದ ವಿರುದ್ಧ ವ್ಯಕ್ತಿವಾದ ಅಲ್ಲ, ಯೂರೋಪ್ ವಿರುದ್ಧ ಅಮೆರಿಕ ಅಲ್ಲ, ಪೂರ್ವದೇಶಗಳ ವಿರುದ್ಧ ಪಶ್ಚಿಮದೇಶಗಳು ಅಲ್ಲ, ಅದಾವುದೆಂದರೆ ಮಾನವರು ದೇವರಿಲ್ಲದೆ ಬದುಕಬಲ್ಲರೇ? ಎಂಬುದಾಗಿದೆ ಎಂದು ತಮ್ಮ 'ಜೀವನದ ಅರ್ಥ' ಎಂಬ ಕೃತಿಯಲ್ಲಿ ತಿಳಿಸಿದ್ದಾರೆ. ಭಾರತದಲ್ಲಿ ಸರಿಸುಮಾರು ಮೂವತ್ತುಮೂರು ಕೋಟಿ ದೇವರುಗಳು ನೆಲೆಸಿದ್ದಾರೆಂದು ಇಲ್ಲಿಯ ಜನರ ವಾಡಿಕೆ. ಬಹುಶಃ ಒಂದಲ್ಲ ಒಂದು ಕಾರಣದಿಂದಾಗಿ ಆಯಾಸಮಾಜಗಳು ಇಷ್ಟೂ ದೇವರುಗಳ ಹೆಸರಿನಲ್ಲಿ ಹಬ್ಬ, ಉತ್ಸವ, ಜಾತ್ರೆಗಳಂತಹ ಆಚರಣೆಗಳನ್ನು ಕೈಗೊಳ್ಳುತ್ತಾರೆ. "ಅನೇಕರು ದೇವರಿಗೆ ದೇವಮಾನವರಿಗೆ ನಡೆದುಕೊಳ್ಳುವುದನ್ನು ನೋಡಿದರೆ ದೇವರ ಹುಟ್ಟಿಗೆ ಪ್ರಕೃತಿ ಭಯವು ಮೂಲಭೂತವಾಗಿ ಕಾರಣವಾದರೂ ಇನ್ನೂ ಹಲವಾರು ಅಂಶಗಳು ಇದಕ್ಕೆ ಪ್ರೇರಕ ಶಕ್ತಿಯಾಗಿ ಸಹಕರಿಸುತ್ತವೆ ಎನ್ನುವುದು ವೇದ್ಯವಾಗುತ್ತದೆ. ಇಂದಿನ ದಿನಮಾನದಲ್ಲೂ ಪ್ರತಿನಿತ್ಯ ಅನೇಕ ಹೊಸ ಹೊಸ ದೇವರುಗಳು ಹುಟ್ಟಿಕೊಳ್ಳುತ್ತಿವೆ."[೧೬] ಇದು ಆಧುನಿಕ, ವೈಚಾರಿಕ ಮತ್ತು ವೈಜ್ಞಾನಿಕ ಯುಗದಲ್ಲಿ ದೇವರ ಹೆಸರಿನಲ್ಲಿ ದಿನದಿಂದ ದಿನಕ್ಕೆ ವೈಭವದಿಂದ ಆಚರಿಸಲ್ಪಡುವ ಜಾತ್ರೆಗಳಲ್ಲಿ ಭಾಗವಹಿಸುವಿಕೆಯ ಜನರ ಮನೋಭಾವದ ಒಲವನ್ನು ಹೊಂದಿರುವುದು ಆಶ್ಚರ್ಯವನ್ನುಂಟು ಮಾಡಿದೆ.

ವೈಚಾರಿಕತಯು ಕುರುಡು ಸಂಪ್ರದಾಯ ಮತ್ತು ಗೊಡ್ಡು ನಂಬಿಕೆಗಳಿಗೆ ಕಡಿವಾಣ ಹಾಕಿ ಜೀವನ ಸತ್ಯತೆಯ ಕಾರ್ಯ, ಕಾರಣ, ಸಂಬಂಧ ಮತ್ತು ಪರಿಣಾಮ ಹಾಗೂ ಪರಿಹಾರ ಸೂಚಿಸುವಂತಹದ್ದಾಗಿದೆ. ಆದರೆ ಜಾತ್ರೆಗಳು ಮತದ ತಳಹದಿಯ ಮೇಲೆ ನಿಂತರು ದೇವರ ಹೆಸರಿನಲ್ಲಿ ನಡೆಯುವ ಪ್ರಾಮಾಣಿಕ ದುಡಿಮೆ, ಪರೋಪಕಾರ, ಸಹನೆ, ಸಹಬಾಳ್ವೆ, ಕರ್ತವ್ಯ ಪ್ರಜ್ಞೆ, ಸ್ವಾಭಿಮಾನ ಮೊದಲಾದ ಮಾನವನ ದಿನನಿತ್ಯದ ಬದುಕಿಗೆ ಪೂರಕವಾದ ಉತ್ತಮ ನೈತಿಕ ಮೌಲ್ಯಗಳ ತಳಹದಿಯ ಮೇಲೆ ನಿಂತಿದ್ದು ಮತಗಳಿಂದ ಪ್ರಭಾವಿತವಾಗಿವೆ. ವಿಜ್ಞಾನದ ಗಡಿದಾಟಿ ವಿಹರಿಸಬಲ್ಲ ಹಾಗೂ ಸಮಾಜವನ್ನು ಸದಾ ಕ್ರಿಯಾಶೀಲವಾಗಿಡಬಲ್ಲ ಹಾಗೂ ಮಾನವನ ಅವಶ್ಯಕತೆಗಳನ್ನು ಈಡೇರಿಸುವ ಜೊತೆಗೆ ಸಮುದಾಯದ ಅಭಿವೃದ್ಧಿಗೆ ಪೂರಕವಾದ ವಾತಾವರಣವನ್ನು ಸೃಷ್ಟಿಸಬಲ್ಲ ಸಾಧನಗಳ ಒಂದು ಭಾಗವಾಗಿ ಜಾತ್ರೆಗಳು ಕಾರ್ಯನಿರ್ವಹಿಸುತ್ತಿವೆ. ಬಹುಶಃ ಈ ಕಾರಣದಿಂದಾಗಿಯೇ ಇರಬೇಕು ನಾನು ದೇವರನ್ನು ನಂಬುವುದಿಲ್ಲ ಆದರೆ ಆತನಿಗೆ ಹೆದರುತ್ತೇನೆ ಮತ್ತು ಅವನ ಆರಾಧನೆಯ ವಿಶೇಷ, ವಿಶಿಷ್ಟ ಮತ್ತು ವೈವಿಧ್ಯಮಯ ನಿಯಮಗಳ ಒಂದು ಭಾಗವಾಗಿರುವ ಜಾತ್ರೆಗಳ ಆಚರಣೆಯನ್ನು ನಾನು ಪ್ರಶ್ನಿಸಲಾರೆ ಎಂದು ಸಮಾಜಶಾಸ್ತ್ರದ ಪಿತಾಮಹರಾದ ಆಗಸ್ಟ್‌ಕೋಮ್ಟ್ ಹೇಳಿದ್ದಾರೆ. ಸಮಾಜಶಾಸ್ತ್ರದ ಸ್ಥಾಪಕತಜ್ಞರುಗಳೇ ಒಪ್ಪಿಗೆ ಸೂಚಿಸಿದಂತೆ ಮಾನವ ತನ್ನ ವಾಸ್ತವ ಬದುಕಿನಲ್ಲಿ ದೇವರ ಸ್ಥಾನ ಮತ್ತು ಜೀವನಾವಶ್ಯಕತೆಗಳನ್ನು ಮನಗಂಡು ಜೀವನದ ಮೂಲ ಉದ್ದೇಶವನ್ನು ಅರಿತು ತನ್ನ ಜೀವನದ ಅಂತಿಮ ಗುರಿಯನ್ನು ಈಡೇರಿಸಿಕೊಳ್ಳಲು ಜಾತ್ರೆಗಳು ಸಹಾಯಕವಾಗಿದೆ.

ನಮ್ಮ ಸಮಾಜ ಪುರುಷ ಪ್ರಧಾನವಾದದ್ದಾದರೂ ಗಂಡು ದೇವರುಗಳ ಜಾತ್ರೆಗಳ ಆಚರಣೆಗಳಷ್ಟೇ ಒಂದು ಹೆಜ್ಜೆ ಮುಂದೆ ಸಾಗಿ ಹೆಣ್ಣು ದೇವತೆಗಳ ಜಾತ್ರೆಗಳ ಆಚರಣೆಗಳೂ ಭಾರತದಾದ್ಯಂತ ಜನಮಾನಸದಲ್ಲಿ ಬೇರೂರಿದೆ. ಭಾರತದಲ್ಲಿ ಅಷ್ಟೇ ಅಲ್ಲದೆ ಜಗತ್ತಿನ ಎಲ್ಲಾ ದೇಶ, ಜನಾಂಗ, ಮತ್ತು ಸಮಾಜಗಳಲ್ಲೂ ಸ್ತ್ರೀ ಪ್ರಧಾನ ದೇವತೆಗಳಿಗೆ ಗ್ರಾಮದೇವತೆಯ ಹೆಸರಿನಲ್ಲಿ ಜಾತ್ರೆಗಳನ್ನು ಆಚರಿಸಲಾಗುತ್ತದೆ. ಇದಕ್ಕೆ ಸ್ತ್ರೀ ದೇವತೆಯಾದ ಜಗನ್ಮಾತೆ ಆದಿಶಕ್ತಿಯಿಂದ ಮಾನವ ಜೀವಕೋಟಿ ಸೃಷ್ಟಿಯಾಯಿತು ಎಂಬುದು ಒಂದು ಕಾರಣವಾದರೆ, ಸೃಷ್ಟಿಯ ಕಾರ್ಯ ಹೆಣ್ಣಿನಿಂದ ಮಾತ್ರ ಸಾಧ್ಯ ಎಂಬುದು ಮತ್ತೊಂದು ಕಾರಣ. ಪ್ರೀತಿ, ಮಮತೆ, ಕರುಣೆ, ವಾತ್ಸಲ್ಯ, ತ್ಯಾಗ ಶೌರ್ಯ, ಪರಾಕ್ರಮ, ರಕ್ಷಣೆ ಇತ್ಯಾದಿ ಜೀವನದ ನೈತಿಕ ಮೌಲ್ಯಗಳ ಪ್ರತಿರೂಪ ಹೆಣ್ಣಾಗಿರುವುದು ಮೂರನೆಯ ಕಾರಣ. ಈ ಕಾರಣದಿಂದಾಗಿ ಪ್ರಪಂಚದಾದ್ಯಂತ ಸ್ತ್ರೀದೇವತೆಯ ಜಾತ್ರಾ ಮಹೋತ್ಸವಗಳನ್ನು ಜನರು ಆಚರಿಸುತ್ತಾರೆ.

ಪ್ರಪಂಚದ ಮಹಾನ್ ನಾಗರಿಕತೆಗಳ ಮತ್ತು ಮಹಾನ್ ಸಾಮ್ರಾಜ್ಯಗಳ ನಿರ್ಮಾಣ ಮತ್ತು ನಿರ್ನಾಮಗಳಲ್ಲಿ ಹೆಣ್ಣುಮಗಳ ಪಾತ್ರ ಸಾಮಾನ್ಯವಾದುದೇನು ಆಗಿರಲಿಲ್ಲ ಎಂಬುದು ಎಲ್ಲಾ ಕಾಲದ ಇತಿಹಾಸದಿಂದಲೂ ದೃಢಪಟ್ಟಿದೆ. ಒಲಿದರೆ ನಾರಿ ಮುನಿದರೆ ಮಾರಿಯಾಗಿ ದುಷ್ಟರಿಗೆ ಶಿಕ್ಷೆ ವಿಧಿಸಿ, ಭಕ್ತರಿಗೆ ರಕ್ಷಕಳಾಗಿ, ಚಂಡಿ, ಚಾಮುಂಡಿ, ಕಾಳಿ, ದುರ್ಗೆ ಇತ್ಯಾದಿ ರೌದ್ರಾವತಾರದಿಂದ ಅವಳನ್ನು ಶಾಂತಗೊಳಿಸಲು ಕುರಿ, ಕೋಳಿ, ಕೋಣಗಳನ್ನು ಬಲಿಕೊಟ್ಟು ಅವಳನ್ನು ಒಲಿಸಿಕೊಳ್ಳಲು, ಸಹಜ ಸ್ಥಿತಿಗೆ ನೆಲೆಗೊಳಿಸಲು ಜಾತ್ರೆಗಳು ನಡೆಯುತ್ತವೆ.

ದೇವಾನುದೇವತೆಗಳೊಂದಿಗಿನ ತಮ್ಮ ಪೂರ್ವದ ಸಂಬಂಧವನ್ನು ಉಳಿಸಿಕೊಳ್ಳಲು ತಮ್ಮ ಅಸ್ತಿತ್ವಕ್ಕಾಗಿ ಅವರ ಸಹಾಯ ಮತ್ತು ಸಹಕಾರವನ್ನು ನೆನೆದು ಭಕ್ತಿಯಿಂದ ಮತಗಳ ವಿಧಿ ವಿಧಾನಗಳಂತೆ ದೇವರ ಜಾತ್ರಾ ಕಾರ್ಯವನ್ನು ನೆರವೇರಿಸುತ್ತಿದ್ದರು. ಇಲ್ಲವಾದರೆ ಅವರ ಕೋಪಕ್ಕೆ ಗುರಿಯಾಗಬಹುದು ಎಂಬ ಭಯವು ಬಹುಸಂಖ್ಯಾತರ ಮನಸ್ಸು ಜಾತ್ರಾ ಆಚರಣೆಯ ಕಡೆಗೆ ಸೆಳೆದಿದೆ ಮತ್ತು ಸೆಳೆಯುತ್ತಿದೆ. ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ ಪ್ರಾಚೀನ ಕಾಲದ ಬುಡಕಟ್ಟು ಸಮುದಾಯಗಳಲ್ಲಿ ಅಸ್ತಿತ್ವದಲ್ಲಿತ್ತೆಂಬುದನ್ನು ಪ್ರಸ್ತುತದಲ್ಲಿಯೂ ನಾವು ಕಾಣಬಹುದು. ವೇದಗಳ ಕಾಲದಲ್ಲಿಯೂ ಮಾತೃಪ್ರಧಾನ ಕುಟುಂಬ ಮತ್ತು ಮಾತೃದೇವತೆಯ ಪೂಜಾ ಪದ್ಧತಿ ಜಾರಿಯಲ್ಲಿದ್ದು ಇವುಗಳ ಹೆಸರಿನಲ್ಲಿ ನಡೆಯುತ್ತಿದ್ದ ಆಚರಣೆಗಳೇ ಜಾತ್ರೆಗಳಾಗಿ ಹೊರಹೊಮ್ಮಿವೆ.

ನಾಗರಿಕತೆಗಳ ಹುಟ್ಟು ಮತ್ತು ಅವುಗಳ ಮಹಾ ಮಹೋನ್ನತಿಯ ಕಾಲದಲ್ಲಿಯೂ ಶಕ್ತಿ ಸ್ವರೂಪಿಯಾದ ಮಾತೃದೇವತೆ ಆಚರಣೆಗಳು ರೂಢಿಯಲ್ಲಿದ್ದ ಬಗ್ಗೆ ಇತಿಹಾಸದಿಂದ ಪುರಾವೆಗಳು ದೊರೆತಿದ್ದು ಈ ಆಚರಣೆಗಳೇ ಜಾತ್ರೆಗಳ ಉಗಮಸ್ಥಾನಗಳಾಗಿವೆ. ಬಹುತೇಕ ಎಲ್ಲಾ ಮತದ ಒಂದು ಭಾಗವಾಗಿ ಆ ಸಮಾಜದ ವ್ಯವಸ್ಥೆಯ ಸಾಮಾಜಿಕ ಮತಗಳನ್ನು ಅವಲಂಬಿಸಿದ್ದು ಈ

ಮತದ ಒಂದು ಭಾಗವಾಗಿ ಆ ಸಮಾಜದ ಸಂಸ್ಕೃತಿ ರೂಪ ತಳೆಯುತ್ತದೆ. ಸಂಸ್ಕೃತಿ ಮಾನವ ಸಮಾಜದ ಉಸಿರು. ಸಂಸ್ಕೃತಿಯಿಲ್ಲದೆ ಮಾನವ ಸಮಾಜವನ್ನು ಊಹಿಸಲು ಅಸಾಧ್ಯ. ಈ.ಬಿ.ಟೇಲರ್ ರವರು ''ಜ್ಞಾನ, ನಂಬಿಕೆ, ಕಲೆ, ನೈತಿಕ ನಿಯಮಗಳು, ಕಾನೂನು ಪದ್ಧತಿ ಮತ್ತು ಮಾನವನು ತನ್ನ ಸಮಾಜದ ಸದಸ್ಯನಾಗಿ ಪಡೆದುಕೊಂಡಿರುವ ಇತರ ಎಲ್ಲಾ ಸಾಮರ್ಥ್ಯಗಳನ್ನು ಒಳಗೊಂಡಿರುವ ಅಖಂಡವಾದ ಸಂಕೀರ್ಣ ವ್ಯವಸ್ಥೆಯೇ ಸಂಸ್ಕೃತಿ''[೧೭] ಎಂದಿದ್ದಾರೆ. ರಾಬರ್ಟ್ ರೆಡ್‌ಪೀಲ್ಡ್ ರವರು ''ಸಾಂಪ್ರದಾಯಿಕ ತಿಳುವಳಿಕೆಗಳ ವ್ಯವಸ್ಥಿತ ಸಂಚಯವೇ ಸಂಸ್ಕೃತಿ. ಆ ತಿಳಿವಳಿಕೆಗಳ ಕಲೆ ಮತ್ತು ಮಾನವ ನಿರ್ಮಿತ ವಸ್ತುಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುವುದಲ್ಲದೆ ಸಂಪ್ರದಾಯದ ಮುಖಾಂತರ ಮುಂದುವರೆದು ಮಾನವ ಸಮೂಹಕ್ಕೆ ವೈಶಿಷ್ಟ್ಯ ನೀಡುತ್ತವೆ''[೧೮] ಎಂದಿದ್ದಾರೆ. ಪ್ರಾಚೀನದಿಂದ ಆಧುನಿಕದವರೆಗೂ ಜಗತ್ತಿನ ಎಲ್ಲಾ ಸಮೂಹ, ಸಮುದಾಯ, ಸಮಾಜಗಳು ಒಂದಲ್ಲ ಒಂದು ರೀತಿಯ ತನ್ನದೇ ಆದ ಸಂಸ್ಕೃತಿಯನ್ನು ಒಳಗೊಂಡಿದೆ. ಪ್ರತಿ ಸಮಾಜದ ಸಂಸ್ಕೃತಿಯ ಹುಟ್ಟು ಬೆಳವಣಿಗೆ ಮತ್ತು ಮಹಾಪೂರದ ಹಿಂದೆ ಸ್ತ್ರೀ ಪಾತ್ರವೇ ಪ್ರಧಾನವಾಗಿದೆ. ಉತ್ತಮ ನೈತಿಕಗಳ ಕೇಂದ್ರ ಮೂಲ ಸ್ತ್ರೀ ಆಗಿದ್ದು ಈ ಆಶ್ಚರ್ಯಮಯ ನೈತಿಕಳೇ ಕಾಲಾಂತರದಲ್ಲಿ ಮತಗಳಾಗಿ, ಮತದ ಪ್ರೇರಣೆಯಿಂದ ದೇವರ ಕಲ್ಪನೆ ಹುಟ್ಟಿ ಇದರ ಆರಾಧನೆಯ ವಿಶಿಷ್ಟ ಸನ್ನಿವೇಶಗಳೇ ಜಾತ್ರೆಗಳಾಗಿ ಬೆಳೆದು ಬಂದಿರಬೇಕು. ಜಾತ್ರೆಗಳು ಹುಟ್ಟು ಮತ್ತು ಬೆಳವಣಿಗೆಯಲ್ಲಿ ಸ್ತ್ರೀ ಮಹತ್ವದ ಪಾತ್ರ ನಿರ್ವಹಿಸಿದ್ದಾಳೆ ಎಂಬುದನ್ನು ನಾವು ಕಡೆಗಣಿಸುವಂತಿಲ್ಲ.

''ದೇವಾಲಯಗಳು ಇತಿಹಾಸದೊಡನೆ ಜಾತ್ರೆಗಳ ಸಂಬಂಧ ಕಲ್ಪಿಸುವುದೂ ಉಂಟು. ವೇದಗಳ ಕಾಲದಲ್ಲಿ ದೇವಾಲಯಗಳಿಲ್ಲದಿದ್ದರೂ ಜಾತ್ರೆಗಳು ಇರಲಿಲ್ಲವೆಂದು ಹೇಳುವುದು ಕಷ್ಟ. ಸಾಮಾನ್ಯವಾಗಿ ಗ್ರಾಮದೇವತೆಗಳಿಗೆ ದೇವಾಲಯಗಳಿರುವುದಿಲ್ಲ. ಊರ ಹೊರಗೆ ಎತ್ತರವಾದ ಜಗುಲಿಯ ಮೇಲೆ ಕಲ್ಲಿನಿಂದಲೋ ಮಣ್ಣಿನಿಂದಲೋ ಅಸ್ಪಷ್ಟಮೂರ್ತಿಯನ್ನು ನಿರ್ಮಿಸಿ, ಅಥವಾ ಮೊರಡುಗಲ್ಲನ್ನೇ ನಿಲ್ಲಿಸಿ ಅದರಲ್ಲಿಯೇ ಸೃಷ್ಟಿ, ಸ್ಥಿತಿ, ಲಯಕಾರಿ ಶಕ್ತಿಯನ್ನು ಗ್ರಾಮೀಣರು ಕಾಣುತ್ತಾರೆ. ತಮ್ಮ ಎಲ್ಲಾ ವ್ಯಥೆಗಳನ್ನು ಬದಿಗೊತ್ತಿ ಮನಸ್ಸಿಗೆ ಶಾಂತಿ, ಸಮಾಧಾನ ತಂದುಕೊಳ್ಳುತ್ತಾರೆ. ಊರಿನ ಹೊರಗಿದ್ದುಕೊಂಡೇ ಊರಿನ ಕ್ಷೇಮವನ್ನು ನೋಡಿಕೊಳ್ಳುತ್ತಿರುವ ದೇವತೆಗಳಿಗೆ ವೇದಪೂರ್ವ ಕಾಲದಿಂದಲೂ ಪೂಜೆಯ, ಜೊತೆ ಜೊತೆಗೆ ಅವುಗಳಿಗೆ ಸಂಬಂಧಿಸಿದ ಜಾತ್ರೆಗಳು ಅವಿರತವಾಗಿ ನಡೆಯುತ್ತಿದ್ದಿರಬೇಕು''[೧೯] ಎಂಬ ಸಿ.ಎಂ.ಗೋವಿಂದರೆಡ್ಡಿಯವರ ಮಾತುಗಳಲ್ಲಿ ಸತ್ಯಾಂಶವಿದೆ.

ಯಾವುದೇ ದುಷ್ಟ ಶಕ್ತಿ, ಅಪಾಯಕರ ಸನ್ನಿವೇಶಗಳನ್ನು ಮತ್ತು ವಿಜ್ಞಾನಗಳನ್ನು ಊರಿಂದಾಚೆಯೇ ತಡೆದು ನಮ್ಮನ್ನು ರಕ್ಷಿಸಲೆಂದು ಊರ ಹೊರಗಿನ ಗಡಿಯಲ್ಲಿ ಪೂರ್ವಜರು ದೇವತಾ ಮೂರ್ತಿಯನ್ನು ಪ್ರತಿಷ್ಠಾಪಿಸುತ್ತಿದ್ದಿರಬೇಕು. ತಮ್ಮನ್ನು ರಕ್ಷಿಸಿ ಸದಾ ತಮ್ಮ ಅಭಿವೃದ್ಧಿಯನ್ನು ಬಯಸುತ್ತಿರುವ ದೇವರಿಗೆ ಮರೆಯದೆ ವರ್ಷದ ಕೊನೆಯಲ್ಲಿ ಅಥವಾ ವರ್ಷದಲ್ಲಿ ಯಾವುದಾದರೂ

ಗೊತ್ತುಪಡಿಸಿದ ದಿನದಂದು ಪ್ರತಿವರ್ಷವೂ ತಪ್ಪದೇ ಸಮುದಾಯಗಳ ಜನರೆಲ್ಲ ಒಂದುಗೂಡಿ ಜಾತ್ರೆಗಳಂತಹ ಸಮಾರಂಭ ಮಾಡುತ್ತಿರಬೇಕು. "ಊರಿನ ಆದಿ ದೈವಕ್ಕೆ ತೃಪ್ತಿಯಾಗುವಂತೆ ತ್ರಿಕರಣ ಶುದ್ಧಿಯಾಗಿ ಪೂಜೆ ಸಲ್ಲಿಸಿದ್ದಾದರೆ ದೇವರ ಹೆಸರಿನಲ್ಲಿ ದಾನ ಧರ್ಮ, ಅನ್ನಸಂತರ್ಪಣೆಗಳನ್ನು ನೆರವೇರಿಸಿದ್ದಾದರೆ, ಭಕ್ತರು ದೇವತೆಯ ಕೃಪಾದೃಷ್ಟಿಗೆ ಒಳಗಾಗುತ್ತಾರೆಂದು, ಸಾಮೂಹಿಕಾರಾಧನೆಯ ಅರ್ಚನೆ ಮತ್ತು ಉತ್ಸವಗಳಿಂದ ಊರಿಗೆ ರೋಗರುಜಿನಗಳು ಸುಳಿಯದಂತೆ ದೇವತೆಯ ಕಾವು ದೊರೆಯುತ್ತದೆಂದು, ಮಳೆಬೆಳೆಗಳಾಗಿ ನೆಲ ಫಲವತ್ತಾಗಿ ಸಂಪತ್ತು ವೃದ್ಧಿಸುತ್ತದೆಂಬ, ಯಾವುದೋ ಮೂಲವ್ಯಾಧಿ, ಕ್ಷಾಮ ಡಾಮರ, ಶತ್ರು ಭಯಗಳಿಂದ ಊರು ಪಾರಾಗುತ್ತದೆಂಬ ನಂಬಿಕೆಯೇ ಜಾತ್ರೆಯ ಉಗಮ ವಿಕಾಸಗಳಿಗೆ ಸ್ಫೂರ್ತಿಯಾಗಿದೆ."[೨೧] ಎಂಬ ದೇ.ಜ.ಗೌ ಅವರ ಮಾತು ಸತ್ಯವೆನಿಸುತ್ತದೆ. ಇಂತಹ ಇನ್ನೂ ಅನೇಕ ಅಂಶಗಳ ಹಿನ್ನೆಲೆಯಲ್ಲಿ ಜಾತ್ರೆಗಳು ಹುಟ್ಟಿ ಬೆಳೆದು ಬಂದಿವೆ.

ಜಾತ್ರೆಗಳು ನಮ್ಮ ನಾಡಿನ ಜೀವಂತ ಸಂಸ್ಕೃತಿಯ ಸಂಕೇತಗಳಾಗಿವೆ. ಪ್ರೀತಿ, ಸ್ನೇಹ, ಸಹಕಾರ, ಸಹಬಾಳ್ವೆ, ಸೌಹಾರ್ದಯುತ ಸಂತೋಷದ ತಾಣಗಳಾಗಿರುವ  ಜಾತ್ರೆಗಳು ಕೆಲವೊಮ್ಮೆ ಅಮಾನುಷ ವಿಧಿಯಾಚರಣೆಗಳನ್ನು ಒಳಗೊಂಡಿರುವುದೂ ಉಂಟು. ದೇವದಾಸಿ, ಬಲಿ, ಪದ್ಧತಿ, ಬೆತ್ತಲ ಸೇವೆ, ಬೇವಿನಉಡಿಗೆ, ಇತ್ಯಾದಿ. ದೇವರ ಜಾತ್ರೆಯ ಜೊತೆ ಜೊತೆಗೆ ಕೆಲವು ಜಾತ್ರೆಗಳಲ್ಲಿ ದನದ ಜಾತ್ರೆಗಳೂ ನಡೆಯುತ್ತವೆ. ಈ ಎರಡೂ ಬಗೆಯ ಜಾತ್ರೆಗಳು ವಿಧಿಯಾಚರಣೆಯಲ್ಲಿ ಭಿನ್ನತೆಯ ಅಂಶಗಳಿಂದ ಕೂಡಿದ್ದರೂ ಪರಸ್ಪರ ಪೂರಕವಾದವುಗಳು. ಈ ಬಗೆಯ ಜಾತ್ರೆಗಳು ಗ್ರಾಮೀಣ ಕೃಷಿಕರು ಮತ್ತು ದೇವರ ನಡುವಿನ ಅನ್ಯೋನ್ಯತೆಯ ಸಂಕೇತಗಳಾಗಿವೆ.

ದೇವರ ಕುರಿತಾದ ಜಾತ್ರೆಗಳು ದೇವರ ಬಗ್ಗೆ ಜನರು ಹೊಂದಿರಬಹುದಾದ ಭಕ್ತಿ ಮತ್ತು ಜೀವನದ ಪರಮಗುರಿಯಾದ ಸ್ವರ್ಗದ ಸೇತುವೆಗಳಾಗಿವೆ. ಅಲ್ಲದೆ ಜೀವನದಲ್ಲಿ ಹಣಗಳಿಸುವುದಕ್ಕಿಂತ ಹಾಗೂ ವೈಯಕ್ತಿಕ ಸುಖಕ್ಕಿಂತ ಶ್ರೇಷ್ಠವಾದುದು ಒಂದಿದೆ ಎಂಬುದನ್ನು ಈ ಬಗೆಯ ಜಾತ್ರೆಗಳು ತಿಳಿಸುತ್ತವೆ. ಆದರೆ ದನದ ಜಾತ್ರೆಗಳು ವ್ಯಾಪಾರ ಮತ್ತು ಪ್ರದರ್ಶನದ ಉದ್ದೇಶಗಳನ್ನು ಪ್ರಧಾನವಾಗಿಟ್ಟುಕೊಂಡು ಆಚರಿಸಲ್ಪಡುತ್ತವೆ. ಸಾಹಸ ಪ್ರದರ್ಶನವನ್ನೇ ಗುರಿಯಾಗಿ ಹೊಂದಿರುವ ಮತ್ತೊಂದು ಬಗೆಯ ಜಾತ್ರೆಗಳ ಆಚರಣೆಗಳೂ ಇವೆ. ಮುಸಲ್ಮಾನ ಬಾಂಧವರು ಆಚರಿಸುವ 'ಉರುಸ್'ಗಳು, ಕ್ರೈಸ್ತ ಬಂಧುಗಳು ಆಚರಿಸುವ 'ಫೆಸ್ತಾ' ಮತ್ತು ಜೈನ ಸಮುದಾಯದವರು ಆಚರಿಸುವ 'ಮಹಾಮಸ್ತಕಾಭಿಷೇಕ'ಗಳನ್ನು ಸಮಾಜದಲ್ಲಿ ಜಾತ್ರೆಗಳಂತೆ ವೈಭವದಿಂದ ಆಚರಿಸಲಾಗುತ್ತದೆ.

ಮತಗಳ ಮೌಲ್ಯಗಳಾಧಾರಿತ ಜಾತ್ರೆಗಳು ಸಾಮಾಜಿಕ ಸಂಸ್ಕೃತಿಯ ಜೀವಂತಿಕೆಯ ಲಕ್ಷಣಗಳಾಗಿವೆ. ಜಾತ್ರೆಗಳ ಸಮಯದಲ್ಲಿ ನಡೆಯುವ ಮನೋರಂಜನೆಯ ವಿವಿಧ ಆಯಾಮಗಳಾಗಿ ಪ್ರಕಟಗೊಳ್ಳುವ. ಹರಿಕಥೆ. ಭಜನೆ. ಬಯಲಾಟ. ನೃತ್ಯ. ನಾಟಕ. ಕೋಲಾಟ. ಸಂಗೀತ. ಬೊಂಬೆಯಾಟ ಇತ್ಯಾದಿಗಳೆಲ್ಲವೂ

ಆಯಾ ಸಮಾಜದ ಸಂಸ್ಕೃತಿಯ ಹೆಗ್ಗುರುತುಗಳಾಗಿದ್ದು ಸಮಾಜಕ್ಕೆ ಒಂದು ನೆಲೆ ಬೆಲೆಯನ್ನು ತಂದುಕೊಡುತ್ತದೆ. ಜಾತ್ರೆ ಎಂಬುದು ಇಡೀ ಸಮುದಾಯವನ್ನು ನಿಶ್ಚಿತ ದಿನದಂದು ಒಂದೆಡೆ ಸೇರಿಸಿ ಪರಸ್ಪರ ಅನ್ಯೋನ್ಯತೆಯನ್ನು ಬಲವರ್ಧಿಸುವ ಸುಸಂದರ್ಭ. ಸಮಾಜದ ಇತರರೊಂದಿಗೆ ವ್ಯಕ್ತಿ ಸಂತೋಷವನ್ನು ಹಂಚಿಕೊಳ್ಳಲು ಹಾಗೂ ತನ್ನ ಮೂಲಭೂತ ಅವಶ್ಯಕತೆಗಳಿಗೆ ಪೂರಕವಾದ ಪದಾರ್ಥಗಳನ್ನು ಕ್ರಯ ವಿಕ್ರಯ ಮಾಡಿಕೊಳ್ಳುವ ಮೂಲಕ ತನ್ನ ವಸ್ತು ಸಮುದಾಯದ ಅಭಿವೃದ್ಧಿಗೆ ಪೂರಕವಾದ ಕರ್ತವ್ಯವನ್ನು ಜಾತ್ರೆಯ ವಿಶೇಷ ಸಂದರ್ಭಗಳಲ್ಲಿ ತಿಳಿಯುತ್ತಾನೆ.

### ೩.೪ ಜಾತ್ರೆ : ಅರ್ಥ ಮತ್ತು ವ್ಯಾಖ್ಯೆ

ಸಂಘಜೀವಿಯಾದ ಮಾನವನಿಗೆ ಆಹಾರ, ಉಡುಪು, ವಸತಿ, ರಕ್ಷಣೆ, ಸಂಸ್ಕೃತಿ ಮೊದಲಾದವುಗಳ ಜೊತೆಗೆ ಮಾನಸಿಕ ಉಲ್ಲಾಸ ಮತ್ತು ಉತ್ಸಾಹಗಳೂ ಅಷ್ಟೆ ಮುಖ್ಯ. ಮಾನವನ ಜೀವನೋತ್ಸಾಹಗಳಿಗೆ ಕಾರಣವಾಗಿರುವ ಹಲವು ಸನ್ನಿವೇಶಗಳಲ್ಲಿ, ಮತಗಳ ಮೌಲ್ಯಗಳಾಧಾರಿತ ದೇವರ ಆರಾಧನೆಯ ವಿಶೇಷ ಪೂಜಾ ಸಮಾರಂಭಗಳಾಗಿ ಜಾತ್ರೆಗಳನ್ನು ಗುರುತಿಸಬಹುದು. ಈ ಬಗೆಯ ಆಚರಣೆಗಳು ಹಲವು ಸಂದರ್ಭಗಳಲ್ಲಿ ವ್ಯಕ್ತಿ, ಹೊರಹಾಕಲು ಸಹಾಯಕವಾಗುತ್ತವೆ. ಯಾವುದೇ ವ್ಯಕ್ತಿ ತನ್ನ ಜೀವನದಲ್ಲಿ ಹಣವನ್ನು ಗಳಿಸುವುದು ಮಾತ್ರ ಮುಖ್ಯವಲ್ಲ ಜೊತೆಗೆ ತನ್ನೊಬ್ಬನ ಸುಖಕ್ಕಿಂತ ಮಿಗಿಲಾದುದು ಇದೆ. ವ್ಯಕ್ತಿಯ ಹಿತಕ್ಕಿಂತ ಸಮಷ್ಟಿಯ ಹಿತ ಮುಖ್ಯ ಎಂಬುದನ್ನು ಜಾತ್ರೆಯ ಆಚರಣೆಗಳು ತಿಳಿಸಿಕೊಡುತ್ತವೆ. ಜಾತ್ರೆಗಳು ಪ್ರಪಂಚದ ಎಲ್ಲಾ ಸಮಾಜಗಳಲ್ಲೂ ಆಚರಣೆಯಲ್ಲಿದ್ದು ಜನರು ತಮ್ಮ ಒಡಲಾಳದಲ್ಲಿರುವ ಮತೀಯ ಮತ್ತು ಸಾಂಸ್ಕೃತಿಕ ಮೌಲ್ಯಾಧಾತಿ ನಂಬುಗೆಯನ್ನು ಹೊರಹಾಕುವ ಸ್ವಯಂಪ್ರೇರಿತ ಪ್ರಕ್ರಿಯೆಗಳಾಗಿವೆ.

"ಎಲ್ಲಾ ಜಾತಿಯ ಜನವರ್ಗದವರು ಸೇರಿ ಜಾತ್ರೆಯನ್ನು ಮಾಡುವಲ್ಲಿ ಕಾಣುವ ಭಾವೈಕ್ಯತೆ ಅದ್ಭುತವಾದದ್ದು"[೨೧] ಎಂದು ಎಸ್.ಎಸ್.ಹಿರೇಮಠ ಅವರು ಅಭಿಪ್ರಾಯಪಟ್ಟಿದ್ದಾರೆ. ಸಮಷ್ಠಿಯ ಹಿತದಲ್ಲಿ ವ್ಯಕ್ತಿಯ ಹಿತ ಅಡಗಿದೆ ಎಂಬ ಸಂಜೀವಿನಿಯನ್ನು ತನ್ನ ಗರ್ಭದಲ್ಲಿ ಹುದುಗಿಸಿಕೊಂಡಿರುವ ಜಾತ್ರೆಯು ಸಮಾಜದ ಸರ್ವರಿಗೂ ಸಂತೋಷದ ಮಧುರ ಸಹಿ–ಕಹಿ ಅನುಭವಗಳನ್ನು ಹಂಚುತ್ತದೆ. ವರ್ಷವಿಡೀ ದುಡಿದು ದಣಿದ ಜನರಿಗೆ ನೆಮ್ಮದಿಯ ಅನುಭವ ಮಾಡಿಕೊಟ್ಟು ಉಲ್ಲಾಸ ವಿಶ್ರಾಂತಿಯ ಜೊತೆಗೆ ಭವಿಷ್ಯದ ನಾಳೆಗಳಿಗೆ ಇಂದಿನಿಂದಲೇ ಭದ್ರತೆಯ ಬುನಾದಿ ಹಾಕುವಲ್ಲಿ ತೊಡಗುವಂತೆ ಜನರನ್ನು ಪ್ರೇರೇಪಿಸುವ ಕಾರ್ಯವನ್ನು ಮಾಡುತ್ತದೆ.

"ಜಾತ್ರೆ ಎನ್ನುವುದು 'ಯಾತ್ರಾ' ಎಂಬ ಸಂಸ್ಕೃತ ಪದದಿಂದ ಬಂದಿದೆ"[೨೨] "ಸಂಸ್ಕೃತದ 'ಯಾತ್ರೆ' ಕನ್ನಡದಲ್ಲಿ ಜಾತ್ರೆಯಾಯಿತು"[೨೩] ಜಾತ್ರೆಯ ಮೂಲ ಪದವಾದ 'ಯಾತ್ರೆ'ಗೆ ಚಲನೆ,

ಪ್ರಯಾಣ, ತೀರ್ಥಯಾತ್ರೆ, ಹಬ್ಬ, ಮೆರವಣಿಗೆ, ಮನರಂಜನೆ ಎಂಬ ಅರ್ಥಗಳಿವೆ. ಸಮಾಜದಲ್ಲಿ 'ಜಾತ್ರೆ' ಮತ್ತು 'ಯಾತ್ರೆ' ಎಂಬ ಪದಗಳನ್ನು ಒಂದೇ ಎಂಬರ್ಥದಲ್ಲಿ ಜನ ಸಾಮಾನ್ಯರು ಬಳಸುತ್ತಿದ್ದು ಇವೆರಡರ ಮೂಲ ಉದ್ದೇಶಗಳಲ್ಲಿಯೇ ವ್ಯತ್ಯಾಸವಿರುವುದನ್ನು ಗುರುತಿಸಲು ಸಾಧ್ಯವಿದೆ.

ಯಾತ್ರೆ ಎಂಬುದು ತಮ್ಮ ಇಷ್ಟ ದೇವರ ಪ್ರಾರ್ಥನೆಯಿಂದಾಗಿ ನಮ್ಮ ಬಯಕೆಗಳು ಫಲಿಸಿದ್ದರ ಕಾರಣಕ್ಕಾಗಿ ಹೊರಡುವ ತೀರ್ಥಯಾತ್ರೆಯಾಗಿದೆ. ಇಲ್ಲವೆ ಭಕ್ತರಿಗೊದಗಿದ ವಿಘ್ನಗಳು ಬಗೆಹರಿದುದರ ಸಲುವಾಗಿ ಆರಾಧ್ಯ ದೈವದ ಮೇಲಿನ ತಮ್ಮ ನಂಬಿಕೆಯ ಪ್ರತೀಕವಾಗಿ ಮತ್ತು ಭವಿಷ್ಯದ ಜೀವನವನ್ನು ಹೀಗೆಯೇ ಕರುಣಿಸು ಎಂಬ ದೂರಾಲೋಚನೆಯ ಕಾರಣಕ್ಕಾಗಿ ದೈವಸನ್ನಿಧಿಗೆ ಪ್ರಯಾಣ ಬೆಳೆಸುವುದು ಯಾತ್ರೆ, ತಾವಂದುಕೊಂಡಿದ್ದ ಹರಕೆಯನ್ನು ತೀರಿಸುವ ಮತ್ತು ಆ ಮೂಲಕ ಮತ್ತಷ್ಟು ಪುಣ್ಯವನ್ನು ಸಂಪಾದಿಸುವ ಸಲುವಾಗಿ ಆರಾಧ್ಯ ದೇವಗಳ ದರ್ಶನ ಪಡೆಯುವ ಮೂಲಕ ವ್ಯಕ್ತಿ ಅಥವಾ ವ್ಯಕ್ತಿಗಳಿಂದೊಡಗೂಡಿದ ಬಂಧು ಬಾಂಧವರು ಆರೋಗ್ಯ ಮತ್ತು ನೆಮ್ಮದಿಯನ್ನು ಬೇಡುವ ಪ್ರಯತ್ನದ ಉದ್ದೇಶಿತ ಪ್ರಯಾಣವಾಗಿದೆ.

ಜಾತ್ರೆಗಳಲ್ಲಿ ಜನರು ಪುಣ್ಯಕ್ಷೇತ್ರಗಳ ದರ್ಶನದ ಜೊತೆಗೆ ಆಯಾ ಸಮಾಜ ಒಪ್ಪಿತ ಮತೀಯ ಮೌಲ್ಯಗಳ ಹಿನ್ನೆಲೆಯನ್ನು ಒಳಗೊಂಡಿರುವ ನಂಬಿಕೆ, ರೂಢಿ, ಸಂಪ್ರದಾಯ, ಆಚಾರ, ವಿಚಾರಗಳನ್ನೊಳಗೊಂಡ ಪಾರಂಪರಿಕ ನಿಯಮಾಧಾರಿತ ವಿಧಿಯಾಚರಣೆಗಳನ್ನು ಆಚರಿಸುತ್ತಾರೆ. ಇದರಿಂದಾಗಿ ತಮ್ಮ ಜೀವನದ ಅನೇಕ ಗೊಂದಲಗಳಿಗೆ, ಕಷ್ಟ ಸುಖಗಳಿಗೆ ಬಿಡಿಸಲಾಗದ ಮತ್ತು ವಿವರಿಸಲಾಗದ ಅರ್ಥವನ್ನು ಕಂಡುಕೊಂಡು ಜೀವನವನ್ನು ಸಾರ್ಥಕಗೊಳಿಸಿ ಕೊಳ್ಳುತ್ತಾರೆ. ಜೊತೆಗೆ ತಮ್ಮ ಸಾಮಾಜಿಕ ಜೀವನಕ್ಕೆ ಪೂರಕವಾದ ಬೇಕು ಬೇಡಗಳನ್ನು ಪೂರೈಸುವ ವ್ಯಾಪಾರ ವ್ಯವಹಾರ ಹಾಗೂ ವರ್ಷವಿಡಿ ಕೃಷಿ ಕ್ಷೇತ್ರದಲ್ಲಿ ದುಡಿದು ಬಳಲಿದ ಜೀವಕ್ಕೆ ಹಿಡಿಯಷ್ಟು ವಿಶ್ರಾಂತಿಯನ್ನು ಇಂತಹದೇ ಇನ್ನು ಅನೇಕ ಉದ್ದೇಶಗಳನ್ನು ಜಾತ್ರೆ ಒಳಗೊಂಡಿರುತ್ತದೆ.

ಜಾತ್ರೆ ಮತ್ತು ಯಾತ್ರೆಗಿರುವ ಸಂಬಂಧ ಉತ್ತರಧ್ರುವ ಮತ್ತು ದಕ್ಷಿಣ ಧ್ರುವಕ್ಕಿರುವ ಸಂಬಂಧದಂತೆ. ಈ ಎರಡರ ಫಲಾನುಭವಿಗಳು ಭಕ್ತರು ಇಲ್ಲವೆ ಜನರು, ಇಬ್ಬರೂ ಇರಬಹುದು. ಯಾತ್ರೆಗೆ ಹೋಗುವವರೆಲ್ಲ ಒಟ್ಟಿಗೆ ಹೋಗಬೇಕು. ನಿಗದಿಪಡಿಸಿದ ದಿನದಂದೇ ಗಳಿಗೆ, ಮಾಸ, ನಕ್ಷತ್ರದಂದೆ, ಹೋಗಬೇಕೆಂಬ ಸಾಮಾಜಿಕ ನಿಯಮಗಳೇನೂ ಇಲ್ಲ. ಈ ಕಾರಣದಿಂದ ಜನರು ತಮಗೆ ವಿರಾಮ ದೊರೆತಾಗ, ಅನುಕೂಲವಾದಾಗ ಮಾತ್ರ ಯಾತ್ರೆಗೆ ಹೋಗಿ ಬರುತ್ತಾರೆ. ಅಲ್ಲಿ ಜನ ಜಂಗುಳಿಯಾಗಿ, ಸದ್ದುಗದ್ದಲವಾಗಲಿ, ವಿಶ್ರಾಂತಿಗೆ ಸ್ಥಳಾವಕಾಶದ ಕೊರತೆಯಾಗಲಿ ಇರುವುದಿಲ್ಲ. ಏಕೆಂದರೆ ಒಬ್ಬರೇ ಅಥವಾ ಒಂದಿಬ್ಬರೇ ಯಾತ್ರೆಗೆ ಹೋಗಿ ಬರಬಹುದು.

ಎಲ್ಲ ಕಡೆಗಳಿಂದ ಅದೇ ದಿನದಂದು ಬರುವವರ ಸಂಖ್ಯೆಯೂ ವಿರಳವಾಗಿರುವ ಸಾಧ್ಯತೆಯಿಂದಾಗಿ ಯಾತ್ರಾ ಸ್ಥಳದಲ್ಲಿ ಪ್ರಶಾಂತ ವಾತಾವರಣವಿದ್ದು ಶಾಂತಿ ಮತ್ತು ನೆಮ್ಮದಿ ದೊರಕುತ್ತದೆ.

ಆದರೆ ಜಾತ್ರೆಯ ಚಿತ್ರಣ ಯಾತ್ರೆಯ ಸನ್ನಿವೇಶಕ್ಕೆ ತದ್ವಿರುದ್ಧ. ಜಾತ್ರೆ ಜನರಿದ್ದರೆ ಮಾತ್ರ ಜರುಗುತ್ತದೆ. ಜನರೇ ಜಾತ್ರೆಗೆ ಬಂಡವಾಳ, ಜಾತ್ರೆಯು ಪೂರ್ವಭಾವಿಯಾಗಿ ಚರ್ಚಿಸಿ ನಿಗದಿಪಡಿಸಿದ ದಿನ, ಸಮಯ, ಘಳಿಗೆ, ಮಾಸ, ನಕ್ಷತ್ರ ಇತ್ಯಾದಿ ಆಯಾ ಸಾಮಾಜಿಕ ಮತದ ನಿಯಮಾವಳಿಗಳ ವಿಧಿಯಾನುಸಾರ ಜನಸಾಗರದ ಮಧ್ಯೆ ನಡೆಯುತ್ತದೆ. ಜಾತ್ರೆ ಗೊತ್ತು ಪಡಿಸಿದ ದಿನದಂದು ವರ್ಷದಲ್ಲಿ ಒಂದು ಬಾರಿ ಮಾತ್ರ ನಡೆಯುತ್ತದೆ. ಇಂತಹ ವೇಳೆಯಲ್ಲಿ ಜನರು ತಮ್ಮ ಇಷ್ಟದೈವ ಅಥವಾ ಕುಲದೈವಕ್ಕೆ ಹರಕೆ ತೀರಿಸುವುದು ಇಲ್ಲವೆ ಬಲಿಕೊಡುವುದರ ಮೂಲಕ ತಮ್ಮ ಇಷ್ಟಾರ್ಥಗಳನ್ನು ನೆರವೇರಿಸಿಕೊಳ್ಳುತ್ತಾರೆ. ಇಂತಹ ಜಾತ್ರೆಗಳಿಗೆ ಸಾವಿರದಿಂದ ಲಕ್ಷಾಂತರ ಜನರು ಸೇರುವ ಸಾಧ್ಯತೆ ಇರುತ್ತದೆ.

''ಸಂಸ್ಕೃತದ 'ಪರಿಷದ್' ಶಬ್ದ ಪ್ರಾಕೃತದಲ್ಲಿ 'ಪರಿಸಾ' ಎಂದಾಗಿದೆ. 'ಪರಿಸಾ' ಎಂಬ ಪ್ರಾಕೃತ ಪದಕ್ಕೆ ಜನರ ದಟ್ಟಣೆ, ಸಭೆ, ಜಾತ್ರೆ, ಜಾತ್ರೆಯಲ್ಲಿ ಸೇರುವ ಜನರ ಗುಂಪು:[೨೪] ಎಂಬ ಅರ್ಥಗಳಿವೆ. ಪ್ರಾಚೀನದಿಂದ ಇಂದಿನವರೆಗೂ ಹಳ್ಳಿಗಾಡಿನಲ್ಲಿ ಜಾತ್ರೆಯನ್ನು 'ಪರಿಷೆ' ಎಂದು ಕರೆಯುವುದು ಸರ್ವೆ ಸಾಮಾನ್ಯವಾದ ಸಂಗತಿಯಾಗಿದೆ. ''ಜಾತ್ರೆಯ ಸರಹದ್ದಿನೊಳಗೆ ಪ್ರವೇಶಿಸುತ್ತಿದ್ದಂತೆ ಮೈ ಬೆವರಿದಂತಾಗಿ ವಿಶ್ರಾಂತಿಯ ಮಹತ್ವ ಅರ್ಥವಾಗತೊಡಗುತ್ತದೆ''[೨೫] ಎಂಬ ಬಿ.ತಿಪ್ಪಣ್ಣ ಮರಿಕುಂಟೆ ಅವರ ಮಾತು ಜಾತ್ರೆ ಎಂಬುದು ಜನರ ದಟ್ಟಣೆ, ಸದ್ದು ಗದ್ದಲಗಳಿಂದ ತುಂಬಿದ, ವ್ಯವಹಾರದಲ್ಲಿ ತೊಡಗಿದ ಜನರ ಪರಸ್ಪರ ಒಡನಾಟವನ್ನು ಸೂಚಿಸುತ್ತದೆ. ಈ ಬಗೆಯ ಅಂತಃಕ್ರಿಯೆಯು ಜನರ ಮೂಲಭೂತ ಅಗತ್ಯಗಳಾದ ಸಾಮಾಜಿಕ, ಆರ್ಥಿಕ, ವ್ಯಾವಹಾರಿಕ, ಸಾಂಸ್ಕೃತಿಕ ಇತ್ಯಾದಿ ಯಾವುದಾದರೊಂದು ಇಲ್ಲವೇ ಈ ಎಲ್ಲಾ ಅವಶ್ಯಕತೆಗಳ ಪೂರೈಕೆಗೆ ಸಹಾಯಕವಾಗುವ ಮೂಲಕ ವ್ಯಕ್ತಿಯ ಮತ್ತು ಸಮಾಜದ ಅಭಿವೃದ್ಧಿಗೆ ಸಹಕರಿಸುತ್ತದೆ. ಹಾಗಾಗಿ ಜಾತ್ರೆಗಳನ್ನು ಸಾಮಾಜಿಕ ಅಂತಃಕ್ರಿಯೆಯ ತಾಣಗಳೆಂದು ಕರೆಯಲಾಗಿದೆ.

ಜಾತ್ರೆ ಎಂಬ ಶಬ್ದ ಯಾತ್ರೆಯ ತದ್ಭವ ರೂಪ ಎಂದು ಕಿಟಲ್ ಶಬ್ದಕೋಶಕಾರರು ಅಭಿಪ್ರಾಯಪಟ್ಟಿದ್ದಾರೆ. 'ಜಾತ್ರೆ' 'ಪರಿಷೆ' 'ವರ್ಷೆ' ಈ ಶಬ್ದಗಳು ಸಂಸ್ಕೃತಿ ಮೂಲದಿಂದ ಬಂದಂತವು. ಯಾತ್ರಾದಿಂದ ಜಾತ್ರೆ ಬಂದಿರುವಂತೆ ಪರಿಷತ್ ಎಂಬ ಪದವು ರೂಪಾಂತರಗೊಂಡು ಕಾಲಾಂತರದಲ್ಲಿ ಪರಿಷೆ ವರ್ಷೆ ಎಂದು ಬದಲಾವಣೆಗೊಂಡಿರುವ ಸಾಧ್ಯತೆಗಳೆ ಹೆಚ್ಚಿವೆ. ''ಜಾತ್ರೆ ಎಂದರೆ ದೈವ ಸನ್ನಿಧಿಗೆ ಪ್ರಯಾಣ ಎಂಬ ಅರ್ಥ ಕೊಡುತ್ತದೆ''[೨೬] ಎಂದು ಜಿ.ಆರ್.ತಿಪ್ಪೆಸ್ವಾಮಿ ಅಭಿಪ್ರಾಯಿಸಿದ್ದಾರೆ. ಜನಸಾಮಾನ್ಯರ ದೈವಭಕ್ತಿಯ ಪರಾಕಾಷ್ಠತೆಯನ್ನು ಮೆರೆಯುವ ಪರಿಷೆಗಳೇ ಜಾತ್ರೆಗಳಾಗಿವೆ. ಜಾತ್ರೆ ಮತ್ತು ಪರಿಷೆ ಬೇರೆ ಬೇರೆಂಯಾದವುಗಳಲ್ಲ ಎಂಬುದು ಸಿ.ಎಸ್.ಶಿವಕುಮಾರಸ್ವಾಮಿಯವರ ಅಭಿಪ್ರಾಯ. ಇದರ ಜೊತೆಗೆ ಜನರ ಆರಾಧ್ಯ ದೈವಗಳ ಪ್ರಸಿದ್ಧಿಯ ತಾಣಗಳನ್ನು ಪುಣ್ಯಕ್ಷೇತ್ರಗಳೆಂದು ಕರೆಯುವುದುಂಟು. ಇವುಗಳನ್ನು ನೋಡಲು ದೂರದಲ್ಲಿರುವ

ದೇವರ ಸನ್ನಿದಿಗೆ ಪೂಜೆ ವಿಧಿ ವಿಧಾನಗಳು ನಡೆಯುವ ಸ್ಥಳಗಳಿಗೆ ನಿಗದಿಪಡಿಸಿದ ದಿನದಂದು ವರ್ಷಕ್ಕೊಮ್ಮೆ ಜನರು ಹೋಗಿ ಬರುವುದುಂಟು. ಈ ಬಗೆಯ ಆಚರಣೆಗಳನ್ನೇ ಜಾತ್ರೆಗಳೆಂದು ಜನಸಾಮಾನ್ಯರು ನಂಬಿದ್ದಾರೆ.

ಇಂಗ್ಲಿಷ್ ಭಾಷೆಯ 'ಫೇರ್' ಎಂಬ ಪದವು ಲ್ಯಾಟಿನ್ ಭಾಷೆಯ'ಫೆರಿಯಾ' ಎಂಬ ಶಬ್ದದಿಂದ ಬಂದದ್ದು, ದಿನ ನಿತ್ಯದ ಕೆಲಸಗಳಿಂದ ವಿಶ್ರಾಂತಿ ಹೊಂದಲು ಮತ್ತು ದಣಿದ ಮನಸ್ಸಿಗೆ ಕೊಂಚ ಮನರಂಜನೆಯಿಂದ ಮನತಣಿಸಲು ಹಾಗೂ ಸುಗ್ಗಿ ಮುಗಿದು ಫಲ ಕೈಸೇರಿದ ಖುಷಿಗಾಗಿ ದೇವರಿಗೆ ವಿಶೇಷ ಎಡೆಮಾಡಿ ಒಪ್ಪಿಸಿ ನೀ ಕೊಟ್ಟಕೃಪೆಯಿಂದ ಅಥವಾ ಫಲದಿಂದ ನಾವು ಧನ್ಯರಾದೆವೆಂದು ತಮ್ಮ ಭಕ್ತಿ ಪ್ರಧಾನ ಮಾಡುವುದರ ಜೊತೆಗೆ ತಾವು ಸೌಖ್ಯಭೋಜನವನ್ನುಂಡು ತಮ್ಮ ಬಂಧು ಮಿತ್ರರೊಂದಿಗೆ ತಮ್ಮ ಆಸರಿಕೆ ಬೇಸರಿಕೆಯನ್ನು ತೀರಿಸಿಕೊಳ್ಳುವ ಸಮಯಗಳೇ ಜಾತ್ರೆಗಳಾಗಿವೆ.

ಈ ಬಗೆಯ ಜಾತ್ರೆಗಳು ಪಾಶ್ಚಿಮಾತ್ಯರಲ್ಲಿಲ್ಲ. ಅಂದ ಮಾತ್ರಕ್ಕೆ ಪಾಶ್ಚಿಮಾತ್ಯರಲ್ಲಿ ಜಾತ್ರೆಗಳೇ ಇಲ್ಲವೆಂದು ಇದರ ಅರ್ಥವಿಲ್ಲ 'Fair' ನಂತಹ ವ್ಯಾವಹಾರಿಕ ಕೂಟಗಳು ಅಲ್ಲಿವೆ. 'Fair' ಎಂಬುದು ಪಾಶ್ಚಿಮಾತ್ಯ ಸಮಾಜದಲ್ಲಿ ಕಂಡುಬರುವ ಈ ಬಗೆಯ ವ್ಯಾವಹಾರಿಕ ಸನ್ನಿವೇಶವು ಆರ್ಥಿಕ ಅಂಶವನ್ನು ಪ್ರಧಾನ ಕೇಂದ್ರ ಅಂಶವನ್ನಾಗುಳ್ಳದ್ದು. ಪಾಶ್ಚಿಮಾತ್ಯರಲ್ಲೂ ಮೊದಲು ವಸ್ತುವಿನಿಮಯ ಪದ್ಧತಿ ಜಾರಿಯಲ್ಲಿತ್ತು. ಈ ಮಾದರಿಯಲ್ಲಿಯೇ ಜನರು ಕ್ರಯ ವಿಕ್ರಯಗಳನ್ನು ಮಾಡಿಕೊಳ್ಳುವುದು ದುಬಾರಿಯಾಗಿದ್ದರಿಂದ ವರ್ಷಕ್ಕೊಮ್ಮೆ ಗೊತ್ತುಪಡಿಸಿದ ದಿನದಂದು ನಿರ್ದಿಷ್ಟ ಸ್ಥಳ ಹಾಗೂ ಸಮಯದಲ್ಲಿ ಸೇರಿ ಕೊಡು ಕೊಳ್ಳುವಿಕೆಯ ಪ್ರಕ್ರಿಯೆಯು ಸಾಮಾಜಿಕ ಸಂಪ್ರದಾಯವಾಗಿ ಬೆಳೆಯಿತು. ನಿಧಾನವಾಗಿ ಕಾಲಬದಲಾದಂತೆ ಈ ಸಾಂಪ್ರದಾಯಿಕ ನಂಬಿಕೆಗಳೇ ಜಾತ್ರೆಯ ಸ್ವರೂಪವನ್ನು ಪಡೆದು ಆಚರಣೆಗೆ ಬಂದಿರಬೇಕು. ಆದರೆ ಪಾಶ್ಚಿಮಾತ್ಯರ ಈ ಬಗೆಯ 'Fair' ಗೂ ನಮ್ಮ ಜಾತ್ರೆಗಳಿಗೂ ಸಾಕಷ್ಟು ವ್ಯತ್ಯಾಸಗಳಿವೆ.

ಜಾತ್ರೆಯನ್ನು ಕುರಿತಾದ ಆರಂಭಿಕ ಅಧ್ಯಯನದ ನೆಲೆಯನ್ನೂ ಇಂಗ್ಲೆಂಡ್‌ನಲ್ಲಿ ಗುರುತಿಸುತ್ತೇವೆ. ಆಂಗ್ಲರು ತಮ್ಮ ಸಮಾಜದಲ್ಲಿ ಆಚರಿಸುತ್ತಿದ್ದ 'Festival' ಎಂಬುದು ಮೂಲತಃ ಬ್ರಿಟನ್ನಿನ ಮಾತೃ ಪ್ರಧಾನ ಕುಟುಂಬದ ಸಾಮಾಜಿಕ ವ್ಯವಸ್ಥೆಯ ಪ್ರಧಾನ ಅಂಶಗಳಿಂದ ಪ್ರಭಾವಿತವಾದುದು. 'Festival' ಎಂಬ ಆಂಗ್ಲ ಪದಕ್ಕೆ ಕನ್ನಡದಲ್ಲಿ ಸರಿಸಮಾನವಾಗಿ ಬಳಸುವ ಪದಗಳೆಂದರೆ ಹಬ್ಬ ಮತ್ತುಜಾತ್ರೆ. ಆದರೆ ನಮ್ಮ ಜಾತ್ರೆಗಳಿಗೂ ಮತ್ತು ಬ್ರಿಟಿಷರ 'Festival' ಗೂ ಮೂಲ ಉದ್ದೇಶಗಳಲ್ಲಿಯೇ ವ್ಯತ್ಯಾಸಗಳಿವೆಯಾದರೂ 'ಜಾತ್ರೆ' ಎಂದರೇನು? ಎಂಬುದನ್ನು ತಿಳಿಯಲು 'Festival' ಕುರಿತ ಮಾಹಿತಿ ಅತ್ಯವಶ್ಯಕ.

ಮಾತೃ ಪ್ರಧಾನವಾದ ಅಂದಿನ ಆಂಗ್ಲರ ಸಮಾಜದಲ್ಲಿ ಮಾತೃ ಅಧಿಕಾರ ಪ್ರಬಲವಾಗಿದ್ದಿತು. ಸಮಾಜದ ಎಲ್ಲಾ ಕ್ಷೇತ್ರಗಳ ಮೇಲೆ ತನ್ನ ಹಿಡಿತವನ್ನು ಹೊಂದಿದ್ದ ಶಕ್ತಿಯಾಗಿ ಸ್ತ್ರೀ ಇದ್ದಳು. ಇಂತಹ ಶಕ್ತಿಯ ಕೇಂದ್ರಬಿಂದುವಾದ ಸ್ತ್ರೀಶಕ್ತಿಯನ್ನು ಅವರು 'Festival ಎಂಬುದಾಗಿ ಆರಾಧಿಸುತ್ತಿದ್ದರು. ಸಾಮಾಜಿಕ ಅವಶ್ಯಕತೆಯಾದ ಲೈಂಗಿಕತೆಯು ಸಮಾಜದ ಎಲ್ಲರಿಗೂ ಮುಕ್ತವಾಗಿ ದೊರೆತು ಲೈಂಗಿಕ ಸಂತೃಪ್ತಿ ಹೊಂದಲಿ ಎಂಬುದು ಇದರ ಉದ್ದೇಶವಾಗಿತ್ತು. ಎಲ್ಲರೂ ಸುಖ ಶಾಂತಿಗಳಿಂದ ವ್ಯವಸಾಯದ ಚಟುವಟಿಕೆಯಲ್ಲಿ ತೊಡಗುವ ಮೂಲಕ ಫಲವಂತಿಕೆ ವೃದ್ಧಿಯಾದಂತೆ, ಉತ್ತಮ ಫಸಲು ಕೈಸೇರಿ ಸಮಾಜ ಅಭಿವೃದ್ಧಿಯಾಗಲಿ ಎಂಬ ಕಾರಣಕ್ಕಾಗಿ ಆಚರಣೆಯಲ್ಲಿದ್ದಂತಹವುಗಳು ಲೈಂಗಿಕ ಸಮೃದ್ಧತೆ ಮತ್ತು ಫಲವಂತಿಕೆಗೆ ಅನುಗುಣವಾಗಿ ಕೃಷಿಯ ಫಲವು ವೃದ್ಧಿಯಾಗಲೆಂದು ಜನಸಾಮಾನ್ಯರು ನಂಬಿದ್ದರು. ಪ್ರಸ್ತುತ ದಿನಮಾನಗಳಲ್ಲಿನ ಅನೇಕ ಸಂಶೋಧಕರು ಬುಡಕಟ್ಟು ಜನ ಸಮುದಾಯಗಳಲ್ಲಿ ಈ ಬಗೆಯ ನಂಬಿಕೆ, ಆಚರಣೆ ಹಾಗೂ ಪದ್ಧತಿಗಳು ಯಾವುದೇ ಒಂದು ದೇಶಕ್ಕೆ ಸೀಮಿತವಾಗಿರದೆ ಜಗತ್ತಿನ ಬಹುತೇಕ ಸಮಾಜಗಳಲ್ಲಿ ಅಸ್ತಿತ್ವದಲ್ಲಿವೆ. ಬುಡಕಟ್ಟು ಸಮಾಜಗಳನ್ನು ಪ್ರಧಾನವಾಗಿಟ್ಟುಕೊಂಡು ಅಧ್ಯಯನ ನಡೆಸಿದ ಸಂಶೋಧಕರು ಈ ಅಂಶಗಳನ್ನು ದೃಢಪಡಿಸಿದ್ದಾರೆ.

"ಇಂದು ಜಾತ್ರೆಗಳನ್ನು ಚಳಿಗಾಲ ಮತ್ತು ಬೇಸಿಗೆ ಕಾಲದ ಸುಗ್ಗಿಯಾದ ಹೊತ್ತಿನಲ್ಲಿ ಮಾಡುವರು ಕಾರಣ ಜನರ ಕೈಯಲ್ಲಿ ಹಣವಿದ್ದಾಗ ಜಾತ್ರೆ ಮಾಡಲು ಅನುಕೂಲವಾಗುವುದು. ಸುಗ್ಗಿಯ ಕಾಲದಲ್ಲಿಯೇ ಜಾತ್ರೆಗಳಾಗುವುದನ್ನು ನೋಡಿದರೆ ಸುಗ್ಗಿಗೂ ಜಾತ್ರೆಗೂ ಸಂಬಂಧವಿದ್ದಂತೆ ಕಾಣುವುದು"[೨೭] ಪೌರಾಣಿಕ ಹಿನ್ನೆಲೆ ಎಂಬ ಲೇಖನದಲ್ಲಿ ಚನ್ನಣ್ಣವಾಲಿಕಾರ ಅವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

"ಜಾತ್ರೆಗಳು ಪ್ರಾದೇಶಿಕ ವೈವಿಧ್ಯತೆಯಿಂದ ಕೂಡಿದ್ದರೂ ಆಚರಣೆಯ ಆಶಯಗಳು ಮುಖ್ಯವಾಗಿ ಜನ ಸಮೂಹದ ಕಲ್ಯಾಣಕ್ಕಾಗಿ ಮತ್ತು ಸಾಂಸ್ಕೃತಿಕ, ವಾಣಿಜ್ಯ ವಹಿವಾಟುಗಳ ಕೊಡುಕೊಳ್ಳುವಿಕೆಯ ಸಾರ್ವಜನಿಕ ಸಂಭ್ರಮದಲ್ಲಿ ಕೂಡುವ ವೇದಿಕೆಗಳಾಗಿರುತ್ತವೆ"[೨೮] ಎಂಬ ಎಸ್.ಕೃಷ್ಣಯ್ಯ ಅವರ ಅಭಿಪ್ರಾಯವು ಜಾತ್ರೆಗಳು ಸಮಷ್ಟಿಯ ಮೂಲಭೂತ ಹಿತಾಸಕ್ತಿಗಳನ್ನು ಈಡೇರಿಸುವ ಜೊತೆಗೆ ಜಾತಿ ಜಾತಿಗಳ ಮಧ್ಯೆ ಸಾಮರಸ್ಯ ಬೆಳೆಸುವ ಮೂಲಕ ಸಾಂಘಿಕ ಅಭಿವೃದ್ಧಿಗೆ ಪ್ರೇರಕ ಶಕ್ತಿಯಾಗುವ ಉದ್ದೇಶವನ್ನು ಒಳಗೊಂಡಿವೆ ಎಂಬುದನ್ನು ಮನವರಿಕೆ ಮಾಡಿಕೊಡುತ್ತವೆ. ಬಾಗ್ಸ್ ಅವರ ಅಭಿಪ್ರಾಯ ದಲ್ಲಿನ "Festival' ಎಂಬ ಇಂಗ್ಲಿಷ್ ಪದವನ್ನು ಕನ್ನಡದ ಹಬ್ಬ ಮತ್ತು ಜಾತ್ರೆ ಎಂಬ ಎರಡೂ ಪದಗಳಿಗೂ ಸಮಾನಾರ್ಥಕ ಪದವಾಗಿ ಬಳಸಲಾಗುತ್ತದೆ. ಸಾಮಾಜಿಕ ಕಳಕಳಿಯುಳ್ಳ, ನಿಗದಿಪಡಿಸಿದ ದಿನದಂದು ವರ್ಷಕ್ಕೊಮ್ಮೆ ಆಚರಿಸಲಾಗುವ ಆಯಾ ಸಮಾಜದ ಪೂರ್ವಿಕರಿಂದ ನಡೆದು ಬಂದ ರೂಢಿ, ನಂಬಿಕೆ, ಸಂಪ್ರದಾಯ, ಪದ್ಧತಿಯಂತೆ ಆಚರಣೆಗೊಳ್ಳುವ ನಾಟಕ, ಕೋಲಾಟ, ಭಜನೆಯಂತಹ ಸಾಂಸ್ಕೃತಿಕ ಮೌಲ್ಯಗಳಿಗೆ ಜೀವಂತಿಕೆಯನ್ನು ಕೊಡುವ ಕಲಾಕೌಶಲಗಳ ಪ್ರದರ್ಶನಕ್ಕೆ

ವೇದಿಕೆಯನ್ನು ಒದಗಿಸಿ ಕೊಡುವ ವಿಶೇಷ ಸಂದರ್ಭ ಮತ್ತು ಅವಿಸ್ಮರಣೀಯ ಕ್ಷಣವೇ ಜಾತ್ರೆಯಾಗಿದೆ. ಈ ಎಲ್ಲಾ ಲಕ್ಷಣಗಳು ಕೊಡಗು ಜಿಲ್ಲೆಯಾದ್ಯಂತ ಆಚರಿಸುವ ಹಬ್ಬ ಮತ್ತು ಜಾತ್ರೆ ಎರಡರಲ್ಲೂ ಪ್ರಧಾನವಾಗಿ ಕಂಡುಬರುತ್ತವೆ.

## ೩.೫ ಜಾತ್ರೆ ಮತ್ತು ಹಬ್ಬ

ಜನ ಸಾಮಾನ್ಯರ ದೃಷ್ಟಿಯಲ್ಲಿ ಹಬ್ಬ ಮತ್ತು ಜಾತ್ರೆಗಳು ಬೇರೆ ಬೇರೆಯಲ್ಲ ಎರಡು ಒಂದೇ ಎಂಬ ಅರ್ಥದಲ್ಲಿ ಸಮುದಾಯದ ಜನರು ಇವುಗಳ ಆಚರಣೆಯಲ್ಲಿ ತೊಡಗುವುದನ್ನು ಕಾಣಬಹುದು ಎಂಬುದಾಗಿ ಎಂ.ಜಿ.ಈಶ್ವರಪ್ಪ ಅವರು ತಮ್ಮ 'ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ' ಎಂಬ ಮಹಾ ಪ್ರಬಂಧದಲ್ಲಿ ತಿಳಿಸಿದ್ದಾರೆ. ಆದರೆ 'ಹಬ್ಬದೂಟ ಜಾತ್ರೆಯ ನೋಟ' ಎಂಬ ನಾಣ್ನುಡಿ ಹಬ್ಬ ಮತ್ತು ಜಾತ್ರೆಯನ್ನು ವಿಭಿನ್ನ ಪರಿಕಲ್ಪನೆಗಳಾಗಿ ವರ್ಗೀಕರಿಸಿರುವುದನ್ನೂ ಊಹಿಸಬಹುದು. ಆದರೆ ಗ್ರಾಮೀಣದಲ್ಲಿ ಇವುಗಳ ಆಚರಣೆಯಲ್ಲಿ ಅಂತಹ ವ್ಯತ್ಯಾಸವೇನು ಕಂಡುಬರುವುದಿಲ್ಲ. "ಮನರಂಜನೆನೂ ಒದಗಿಸುವುದು ಜಾತ್ರೆಯ ಕೆಲಸ"[೨೯] ಎಂಬುದು ಹಂ.ಪ.ನಾಗರಾಜಯ್ಯ ಅವರ ಅಭಿಪ್ರಾಯ.

'ಬೇಸಾಯ ನಾಸಾಯ ನೀಸಾಯ ನಿಮ್ಮಪ್ಪಸಾಯ ಮನೆಮಕ್ಕಳೆಲ್ಲ ಸಾಯ' ಎಂಬ ಗ್ರಾಮೀಣರ ನಾಣ್ನುಡಿಯಂತೆ ವಿಶ್ರಾಂತಿ ಇಲ್ಲದೆ ವರ್ಷವಿಡೀ ಅವಿರತವಾಗಿ ದುಡಿದು ದಣಿದ ಕೃಷಿಕರಿಗೆ ವಿಶ್ರಾಂತಿಯ ಜೊತೆಗೆ ಸಂತೋಷವನ್ನು ಉಂಟುಮಾಡುವ, ಸ್ಪೂರ್ತಿ ತುಂಬುವ ಕೋಲಾಟ, ಮಾರಿಕುಣಿತ, ಕಂಸಾಳೆ, ವೀರಗಾಸೆ, ಕತ್ತಿವರಸೆ, ಕೀಲು ಕುದುರೆ ಕುಣಿತ, ಹುಲಿವೇಷದ ಕುಣಿತ, ಮರಗಾಲು ಕುಣಿತ, ನಂದಿಕೋಲು, ಕರಡಿ ಮಜಲು, ಹಾಸ್ಯ ಸಂಜೆ, ವಿಭಿನ್ನ ವೇಷಧಾರಿಗಳು ಜನರನ್ನು ಮನರಂಜಿಸುವ ಕೆಲಸವನ್ನು ಜಾತ್ರೆಗಳು ಮಾಡುತ್ತವೆ. ಎಸ್.ಎಸ್.ಹಿರೇಮಠ ಅವರು ತಮ್ಮ ಜಾತ್ರೆಗಳು ಎಂಬ ಕೃತಿಯಲ್ಲಿ ಹಬ್ಬ ಮತ್ತು ಜಾತ್ರೆಗಳ ನಡುವಿನ ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸಿದ್ದಾರೆ. ಆದರೂ ಹಬ್ಬ ಮತ್ತು ಜಾತ್ರೆಗಳ ಆಚರಣೆಯ ಕೇಂದ್ರಬಿಂದುವಾದ ದೇವರ ಮೇಲಿನ ಭಯ, ಭಕ್ತಿ, ಪ್ರೀತಿ, ಮತ್ತು ಗೌರವಗಳ ಕಾರಣದಿಂದಾಗಿ ಜನರಲ್ಲಿ ಈ ಎರಡೂ ಬಗೆಯ ಆಚರಣೆಗಳಲ್ಲಿ ಅಂತಹ ವ್ಯತ್ಯಾಸಗಳೇನು ಕಂಡುಬರುವುದಿಲ್ಲ.

"ಜಾತ್ರೆಗಳು ವಲಸೆಗಾರರಾದ ದ್ರಾವಿಡರವು. ಜಾತ್ರೆಗಳ ತಾತ್ಕಾಲಿಕತೆ, ಸಾಮೂಹಿಕವಾಗಿ ಸೇರುವಿಕೆಯ ವಲಸೆಗಾರರ ಸ್ವಭಾವಕ್ಕೆ ಅನುಗುಣವಾಗಿವೆ. ಜಾತ್ರೆ ಪ್ರತ್ಯೇಕ ಹಳ್ಳಿ ಅಥವಾ ಪ್ರದೇಶಗಳಿಗೆ ಸೀಮಿತವಾಗಿದ್ದರೆ ಹಬ್ಬ ನಾಡಿನಾದ್ಯಂತ ಒಂದೇ ಸಲಕ್ಕೆ ಆಚರಿಸಲ್ಪಡುವುದು. ಹಬ್ಬಗಳು ಕಡ್ಡಾಯ ಮತ್ತು ನಿಯಮಿತವಾಗಿರುವಂತೆ ಜಾತ್ರೆಗಳಿರುವುದಿಲ್ಲ. ಇದೂ ಸಹ ವಲಸೆಗಾರರ ಅನಿಶ್ಚಿತ ಬದುಕಿಗೆ ಸಹಜವಾದ ಸ್ಥಿತಿ"[೩೦] ಎಂದು ಕೃಷಿ ಮತ್ತು ವಲಸೆ ಪ್ರವೃತ್ತಿಗಳನ್ನು ಪ್ರಬಲಕಾರಣಗಳನ್ನಾಗಿ ನೀಡುವ

ಮೂಲಕ ಹಬ್ಬ ಮತ್ತು ಜಾತ್ರೆಗಳನ್ನು ಆಚರಿಸುವ ಜನರ ಪ್ರವೃತ್ತಿಗಳಲ್ಲಿನ ಭಿನ್ನತೆಗಳನ್ನು ಎಸ್.ಎಸ್.ಹಿರೇಮಠ ಸೂಚಿಸಿದ್ದಾರೆ.

“ಹಬ್ಬದಲ್ಲಿ ದೇವತೆಗಳಿಗೆ, ಹಿರಿಯರಿಗೆ, ಪೂಜೆ ಪುನಸ್ಕಾರಗಳನ್ನು ಮನೆಯಲ್ಲೇ ಸಲ್ಲಿಸಿ ನೈವೇದ್ಯಗಳನ್ನರ್ಪಿಸಿ ಮಾನಸಿಕ ನೆಮ್ಮದಿಯನ್ನು ಪಡೆದುಕೊಳ್ಳಲೆತ್ನಿಸಿದರೆ ಜಾತ್ರೆಗಳು ದೇವತೆಗಳು ತಮ್ಮ ನಿವಾಸ ಬಿಟ್ಟು ಹೊರಬೀಡುಗಳಿಗೆ ಬಂಡೆ ತೇರುಗಳನ್ನೇರಿ ಜನಸಂದಣಿಯ ನಡುವೆ ಮೆರವಣಿಗೆಯಲ್ಲಿ ಸಾಗಿ ಪೂಜೆ ಸ್ವೀಕರಿಸುವುದನ್ನು ಕಾಣಬಹುದು. ಈ ಬಗೆಯ ಉತ್ಸವ, ಸಡಗರ, ಸಂಭ್ರಮ, ಸಾಮೂಹಿಕತೆ, ಸಾರ್ವಜನಿಕ ಹಬ್ಬಗಳಲ್ಲಿ ಕಂಡುಬರುವುದಿಲ್ಲ. ಎಲ್ಲಾ ಹಬ್ಬಗಳಲ್ಲಿ ಜಾತ್ರೆ ನಡೆಯಬೇಕಾಗಿಲ್ಲ. ಜಾತ್ರೆ ನೆರೆದಾಗಲೆಲ್ಲ ಹಬ್ಬದ ಸಂಭ್ರಮ ಇದ್ದೇ ಇರುತ್ತದೆ. ಆದ್ದರಿಂದ ಹಬ್ಬ ಮತ್ತು ಜಾತ್ರೆಗಳು ಪರ್ಯಾಯ ಪದಗಳೆಂಬುದನ್ನು ಮರೆಯಬಾರದು”[೩೧] ಎಂದು ದೇ.ಜ.ಗೌ ಅಭಿಪ್ರಾಯಪಟ್ಟಿದ್ದಾರೆ. ಆದರೂ ಸಮುದಾಯದವರೆಲ್ಲ ಸೇರಿ ಚರ್ಚಿಸಿ ನಿಗದಿ ಮಾಡಿದ ದಿನದಂದು ದೇವರ ಅಥವಾ ದೈವಾಂಶ ಸಂಭೂತನ ಹೆಸರಿನಲ್ಲಿ ನಡೆಯುವ ಹಬ್ಬದ ಚಿತ್ರಣವು ಜಾತ್ರೆಯಂತೆ ಜನಸಂದಣಿಯ ಮಧ್ಯೆ ಸಡಗರ, ಸಂಭ್ರಮದಿಂದ ಆಚರಣೆಗೊಳ್ಳುವುದನ್ನು ನೋಡಿದರೆ ಹಬ್ಬವೇ ಜಾತ್ರೆ ಎಂದು ಕರೆಯಿಸಿಕೊಳ್ಳುವುದು ಎನ್ನಲಡ್ಡಿಯಿಲ್ಲ.

ಸಮಾಜವು ವಿಭಿನ್ನ ಸಂಸ್ಥೆಗಳ ವ್ಯವಸ್ಥಿತ ಜೋಡಣೆಯಾಗಿರುವಂತೆ ಹಬ್ಬದ ಮತೀಯ ಅಂಶಗಳ ಜೊತಗೆ ಸಾಂಸ್ಕೃತಿಕ, ಆರ್ಥಿಕ, ವ್ಯವಹಾರಿಕ, ಮನರಂಜನೆಯಂತಹ ವಿವಿಧ ಅವಶ್ಯಕತೆಗಳು ಸಹಜವಾಗಿಯೇ ಹೆಚ್ಚಾಗತೊಡಗಿತು. ಪರಸ್ಪರ ಪೂರಕವಾಗಿ ಹೊಂದಾಣಿಕೆಯೊಂದಿಗೆ ಜೊತೆಗೂಡಿ ಬೆಸೆದಾಗ ಹಬ್ಬದ ಸ್ವರೂಪ ಮತ್ತು ವ್ಯಾಪ್ತಿ ವಿಸ್ತಾರಗೊಂಡು ಜಾತ್ರೆಯಾಗಿದೆ. ಈ ವ್ಯಾಖ್ಯಾನವು ಜಾತ್ರೆಗಳ ಹುಟ್ಟು ಬೆಳವಣಿಗೆ ಮತ್ತು ವಿಕಾಸಕ್ಕೆ ಜನರ ಮತೀಯ ಭಾವನೆಗಳೇ ಕಾರಣ ಎಂಬ ಅಂಶವನ್ನು ಸ್ಪಷ್ಟಪಡಿಸುತ್ತದೆ.

ಅಂಬಳಿಕೆ ಹಿರಿಯಣ್ಣ ಅವರು ಹಬ್ಬ ಮತ್ತು ಜಾತ್ರೆ ಎರಡರಲ್ಲಿ ಯಾವುದೇ ವ್ಯತ್ಯಾಸವನ್ನು ಗುರುತಿಸದೆ ಒಂದೇ ಎಂಬರ್ಥದಲ್ಲಿ ಬಳಸಿದ್ದಾರೆ. ಭಯದ ಮೂಲ ನೆಲೆಯಲ್ಲಿಯೇ ಹಬ್ಬ ಮತ್ತು ಜಾತ್ರೆಗಳು ಹುಟ್ಟಿಕೊಂಡಿವೆ ಎಂಬುದನ್ನು ಮನವರಿಕೆ ಮಾಡಿಕೊಡುತ್ತವೆ.

### ೩.೬ ಜಾತ್ರೆ : ವಿವಿಧ ಹೆಸರುಗಳು

ಗ್ರಾಮೀಣ ಜನರು ಜಾತ್ರೆಯನ್ನು ಆಡುಭಾಷೆಯಲ್ಲಿ ಪರಿಷೆ ಎಂದು ಕರೆಯುತ್ತಾರೆ. ‘ಪರಿಷೆಗೆ ಹೋಗಬೇಕು ಪಾಪ ಕಳಕೋಬೇಕು’ ಎಂಬ ನಾಣ್ನುಡಿ ಬಳಕೆಯಲ್ಲಿದೆ. ದೇವರ ಹೆಸರಿನಲ್ಲಿ ನಡೆಯುವ ಜಾತ್ರೆಗೆ ಭೇಟಿ ನೀಡಿ ದೇವಮೂರ್ತಿಗೆ ಭಕ್ತಿ, ಭಾವಪೂರ್ವಕವಾಗಿ ಪೂಜಿಸಿ ದೇವರ

ಕೃಪೆಗೆ ಪಾತ್ರರಾದರೆ ತಮಗೆ ಒದಗಿದ ಸಂಕಷ್ಟಗಳು ಪರಿಹಾರವಾಗಿ ಮುಂದಿನ ದಿನಗಳಲ್ಲಿ ಒಳ್ಳೆಯದಾಗುತ್ತದೆ. ಎಂಬರ್ಥದಲ್ಲಿ ಒಂದುಗೂಡಿದ ಜನರ ಗುಂಪೇ ಜಾತ್ರೆ. ಇಂದು ಜಾತ್ರೆಯನ್ನೇ ಗ್ರಾಮೀಣರು ಪರಿಷೆ ಎಂದು ಕರೆದಿದ್ದಾರೆ.

ತೇರು, ರಥೋತ್ಸವ ಎಂಬ ಶಬ್ದಗಳು ಜಾತ್ರೆಯೊಂದಿಗೆ ನಿಕಟ ಸಂಬಂಧ ಹೊಂದಿವೆ. ತೇರು ಹರಿಯಿತು ಜಾತ್ರೆ ಮುಗಿಯಿತು ಎಂಬ ನಾಣ್ನುಡಿ ಇದನ್ನು ಖಚಿತಪಡಿಸುತ್ತದೆ. ಕೆಲವು ದೇವರ ಜಾತ್ರೆಗಳಲ್ಲಿ ಪೂಜೆಯ ನಂತರ ತೇರನ್ನು ಎಳೆಯುವುದು ವಾಡಿಕೆ. ಈ ಕಾರಣಕ್ಕಾಗಿಯೆ ಜಾತ್ರೆಯನ್ನು ತೇರು ಎಂದೂ ಕರೆಯುವರು. ಆದರೆ ಕೆಲವು ದೇವರ ಜಾತ್ರೆಯ ಕೇಂದ್ರ ಆಕರ್ಷಣೆಯೇ ರಥೋತ್ಸವ. ರಥ ಎಳೆಯುವುದು ಆ ಜಾತ್ರಯ ವಿಶೇಷ ಕಾರ್ಯ. ದೇವರ ಉತ್ಸವಮೂರ್ತಿಯನ್ನು ರಥದಲ್ಲಿ ಪೂಜಿಸಿ ಪ್ರತಿಷ್ಠಾಪಿಸಿ ನಂತರ ಆ ಊರಿನ ಮುಖ್ಯ ಬೀದಿಗಳಲ್ಲಿ ಉತ್ಸವ ಮೂರ್ತಿ ಇರುವ ರಥವನ್ನು ಎಳೆಯಲಾಗುತ್ತದೆ. ಇದನ್ನು ನೋಡಲು ಜನ ಸಾಗರೋಪಾದಿಯಲ್ಲಿ ಸೇರುತ್ತಾರೆ. ಜನ ಸೇರಿದರೆ ಜಾತ್ರೆ, ಜನಮರುಳೋ ಜಾತ್ರೆ ಮರಳೋ ಎಂಬ ಗಾದೆ ಮಾತು ಇದನ್ನು ಸ್ಪಷ್ಟಪಡಿಸುತ್ತದೆ.

ರಥೋತ್ಸವವೇ ಕೆಲವು ಜಾತ್ರೆಗಳ ವಿಶೇಷತೆ. ಈ ಕಾರಣಕ್ಕಾಗಿಯೇ ರಥೋತ್ಸವ ಎಂಬ ಹೆಸರುಗಳಿಂದಲೂ ಕರೆಯುವುದು ವಾಡಿಕೆ. ಉಚ್ಚಾಯ ಮತ್ತು ಜಾತ್ರೆಗಳಿಗೆ ಬಿಡಿಸಲಾಗದ ನಂಟು, ಉಚ್ಚಾಯವನ್ನು ಸಣ್ಣ ರಥೋತ್ಸವ ಎಂದೂ ಕರೆಯುವರು. ಸಣ್ಣ ರಥೋತ್ಸವವನ್ನು ಕೆಲವು ಜಾತ್ರೆಗಳಲ್ಲಿ ಜಾತ್ರೆಯ ದಿನವೆ ದೊಡ್ಡ ರಥೋತ್ಸವದ ಜೊತೆ ಜೊತೆಗೆ ಎಳೆಯಲಾಗುತ್ತದೆ. ಕೆಲವು ಜಾತ್ರೆಗಳಲ್ಲಿ ಜಾತ್ರೆ ಮುಗಿದ ಮರುವಾರ ಅಥವ ತಿಂಗಳು ತುಂಬುವ ಮೊದಲೇ ಆಚರಿಸುವ ಮರಿಪರಿಷೆಯ ದಿನದಂದು ಸಣ್ಣ ರಥವನ್ನು ಎಳೆಯುವುದು ರೂಢಿ. ಇದನ್ನೆ ಮರಿಪರಿಸೆ, ಉಚ್ಚಾಯ, ಸಣ್ಣ ರಥೋತ್ಸವ ಎಂತಲೂ ಕರೆಯುವರು. ದೊಡ್ಡ ರಥೋತ್ಸವ ಜಾತ್ರೆಯ ಆರಂಭವನ್ನು ಸೂಚಿಸಿದರೆ ಉಚ್ಚಾಯ ಅಥವಾ ಸಣ್ಣ ರಥೋತ್ಸವ ಜಾತ್ರೆಯ ಮುಕ್ತಾಯವನ್ನು ಸೂಚಿಸುತ್ತದೆ. ಈ ಬಗೆಯ ಆಚರಣೆ ೧೫ ರಿಂದ ಒಂದು ತಿಂಗಳವರೆಗೆ ನಡೆಯುವ ಜಾತ್ರೆಗಳಲ್ಲಿ ಬಳಕೆಯಲ್ಲಿದೆ.

ಉಚ್ಚಾಯ ಅಥವಾ ಸಣ್ಣ ರಥೋತ್ಸವವು ದೊಡ್ಡ ರಥೋತ್ಸವದ ಆಚರಣೆಯ ಎಲ್ಲಾ ಆಚರಣೆಗಳನ್ನು ಪ್ರತಿನಿಧಿಸುವ ಜಾತ್ರೆಯ ಸಣ್ಣ ಪ್ರತಿರೂಪ. ಉಚ್ಚಾಯದ ದಿನದಂದೂ ಅಪಾರ ಸಂಖ್ಯೆಯಲ್ಲಿ ಜನರು ಸೇರುವುದರಿಂದ ಇದನ್ನು ಒಂದು ಬಗೆಯ ಸಣ್ಣ ಜಾತ್ರೆ ಎಂದೇ ಜನಸಾಮಾನ್ಯರು ನಂಬಿದ್ದಾರೆ. ಪಲ್ಲಕ್ಕಿಯೊಂದಿಗೆ ಜಾತ್ರೆಗೆ ಅವಿನಾಭಾವ ಸಂಬಂಧ. ಜಾತ್ರೆಗೆ ನೇರ ಸಂಬಂಧ ಹೊಂದಿರುವ ದೇವತಾಮೂರ್ತಿಯನ್ನು ಹೂವಿನಿಂದ ಅಲಂಕೃತವಾದ ಚೌಕಾಕಾರದ ಪೆಟ್ಟಿಗೆಯಲ್ಲಿ ಪೂಜಿಸಿ ಪ್ರತಿಷ್ಠಾಪಿಸುತ್ತಾರೆ. ಇದನ್ನು ಪಲ್ಲಕ್ಕಿ ಎಂದು ಕರೆಯುತ್ತಾರೆ. ಜಾತ್ರೆಯ ಸಮಯದಲ್ಲಿ ಈ ಪಲ್ಲಕ್ಕಿಯನ್ನು ಭಕ್ತಾದಿಗಳು ತಮ್ಮ ಹೆಗಲ ಮೇಲೆ ಹೊತ್ತ ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾರೆ. ಇದನ್ನು ನೋಡಲು ಭಕ್ತಸಮೂಹ ಅಪಾರ ಸಂಖ್ಯೆಯಲ್ಲಿ ಸೇರಿರುತ್ತಾರೆ. ಈ ಕಾರಣಕ್ಕಾಗಿ ಜಾತ್ರೆಗೆ

## ಅಡಿ ಟಿಪ್ಪಣಿಗಳು

೧. ಸಾಮಾಜಿಕ ಬದಲಾವಣೆಯಲ್ಲಿ ಸಿಳ್ಳೇಕ್ಯಾತರು – ಹಂಪಿ ವಿವಿಗೆ ಪಿಹೆಚ್‌ಡಿ ಪದವಿಗಾಗಿ ಸಾದರ ಪಡಿಸಿದ ಸಂಶೋಧನಾ ಪ್ರಬಂಧ. ಕನ್ನಡ ವಿವಿ. ಹಂಪಿ ೨೦೦೮ ಪುಟ ೧

೨. ಕನ್ನಡ ವಿ.ವಿ. ವಿಶ್ವಕೋಶ –೪, ತಂಬಂಡ ವಿಜಯ್ ಪೂಣಚ್ಚ – ಕನ್ನಡ ವಿ.ವಿ. ಹಂಪಿ ೨೦೦೧ ಪುಟ೭೨

೩. ದೇವರು– ಎ.ಎನ್.ಮೂರ್ತಿರಾವ್ ಕರ್ನಾಟಕ ಪ್ರೆಸ್, ಸರಸ್ವತಿಪುರಂ ಮೈಸೂರು ೧೯೯೧ ಪುಟ ೧೧,೧೨

೪. ಅದೇ ೧೯೯೧ ಪುಟ ೬

೫. ಹೊಸತು – ಬಸವರಾಜ ಮಲಶೆಟ್ಟಿ – ನವಕರ್ನಾಟಕ ಪ್ರಕಾಶನ, ಫೆಬ್ರವರಿ ೨೦೧೧, ಪುಟ ೬೭

೬. ಕನ್ನಡ ವಿ.ವಿ ವಿಶ್ವಕೋಶ–೪ ತಂಬಂಡ ವಿಜಯ್ ಪೂಣಚ್ಚ ಕನ್ನಡ ವಿ.ವಿ ಹಂಪಿ೨೦೦೧ ಪುಟ ೭೭

೭. ಅದೇ ಪುಟ –೭೮

೮. ಕೊಡಗಿನ ಬುಡಕಟ್ಟುಗಳು – ಭಾಮಿನಿ ರಾಘವಯ್ಯ – ಕಮಲ, ಪ್ರಕಾಶನ, ಮೈಸೂರು ೨೦೦೭ ಪುಟ–೪

೯. ಕರ್ನಾಟಕದ ಜಾತ್ರೆಗಳು (ಲೇ) ಹಂ.ಪ.ನಾಗರಾಜಯ್ಯ ಪುಟ–೧೨

೧೦. ಅದೇ ಪುಟ –೨೫

೧೧. ಜಾತ್ರೆಗಳು –ಕರ್ನಾಟಕ ದಲಿತ ಸಾಹಿತ್ಯ ಪರಂಪರೆ ಭಾಗ–೨, ಎಸ್.ಎಸ್.ಹಿರೇಮಠ ಪು೧–೫೮

೧೨. ಕರ್ನಾಟಕ ಜಾತ್ರೆಗಳು –(ಸಂ) ಸಿ.ಎಸ್.ಶಿವಕುಮಾರಸ್ವಾಮಿ ಪು೧–೧೬೪

೧೩. ನಾಗರೀಕತೆಯ ಹೊಸ್ತಿಲಲ್ಲಿ – ಶಿವರಾಮಕಾರಂತ ೧೯೬೯ ಪು೧–೧೭

೧೪. ಧರ್ಮ ಮತ್ತು ವೈಚಾರಿಕತೆ – ಐ.ವಿ.ವೀರಭದ್ರಪ್ಪ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್ ಬೆಂಗಳೂರು ೨೦೦೧ ಪುಟ ೫–೬

೧೫. ದೇವರು – ಎ.ಎನ್.ಮೂರ್ತಿರಾವ್– ಕರ್ನಾಟಕ ಪ್ರೆಸ್ ಸರಸ್ವತಿಪುರಂ, ಮೈಸೂರು ೧೯೯೧ ಪುಟ –೬೧

೧೬. ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ–(ಪಿಹೆಚ್.ಡಿ ಮಹಾಪ್ರಬಂಧ) ಚಿನ್ನಣ್ಣ ವಾಲೀಕಾರ ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ ಗುಲ್ಬರ್ಗ, ೧೯೯೮ ಪುಟ –೪೩

೧೭. E.B.Taylor, Primitive Culture, New York Brentano;s 1924 sevents Edition page-1

೧೮ Robert Redifield, Unpublished lectures series university of Chicago

೧೯. ಕೋಲಾರ ಜಿಲ್ಲೆಯ ಜಾತ್ರೆಗಳು ಒಂದು ಅಧ್ಯಯನ – ಸಿ.ಎಂ.ಗೋವಿಂದರೆಡ್ಡಿ – ಸಮತಾ ಪ್ರಕಾಶನ, ಹೊಸಪೇಟೆ–೧೯೯೩ ಪುಟ –೩೮

೨೦. ಕರ್ನಾಟಕ ಜಾತ್ರೆಗಳು (ಸಂ) ಸಿ.ಎಸ್.ಶಿವಕುಮಾರಸ್ವಾಮಿ ೧೦\೯೮೮ ಪುಟ ೨೪೦

೨೧. ಜಾತ್ರೆಗಳು – ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಭಾಗ –೨ ಎಸ್.ಎಸ್.ಹಿರೇಮಠ, ಸಮತಾ ಪ್ರಕಾಶನ, ಹೊಸಪೇಟೆ ೧೯೯೩ ಪುಟ ೧೮

೨೨. ಕನ್ನಡ ವಿಶ್ವಕೋಶ ಸಂಪುಟ –೮ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿವಿ, ಮೈಸೂರು ೧೯೯೭ ಪುಟ –೩೬

೨೩. ಜಾತ್ರೆಗಳು – ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಭಾಗ–೨ ಎಸ್.ಎಸ್.ಹಿರೇಮಠ ಸಮತಾ ಪ್ರಕಾಶನ, ಹೊಸಪೇಟೆ ೧೯೯೩ ಪುಟ ೩೯

೨೪. ಕನ್ನಡ ನಿಘಂಟು, ಕಕ.ಸಾ.ಪ ಸಂಪುಟ–೩ ಪುಟ ೩೦೩೭

೨೫. ಜಾತ್ರೆ – ತಿಪ್ಪಣ್ಣ ಮರಿಕುಂಟೆ – ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು ೨೦೦೫ ಪುಟ–೧

೨೬. ಜಾನಪದ ಪರಿಭಾವನೆ – ಜಿ.ಆರ್. ತಿಪ್ಪೇಸ್ವಾಮಿ – ಶಕ್ತಿ ಪ್ರಿಂಟರ್ಸ್, ಬೆಂಗಳೂರು ೨೦೧೨ ಪುಟ–೬೩

೨೭. ಜಾನಪದ ಜಾತ್ರೆಗಳು – ಸಿ.ಎಸ್. ಶಿವಕುಮಾರಸ್ವಾಮಿ (ಸಂ.) ಮೈಸೂರು ವಿ.ವಿ ಮೈಸೂರು ೧೯೯೮ ಪುಟ–೧೮೧

೨೮. ಅದೇ ಪುಟ–೩

೨೯. ಕರ್ನಾಟಕ ಜಾತ್ರೆಗಳು (ಲೇ) ಪುಟ–೨೧

೩೦. ಜಾತ್ರೆಗಳು – ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಭಾಗ ೨ – ಎಸ್.ಎಸ್. ಹಿರೇಮಠ– ಸಮತಾ ಪ್ರಕಾಶನ, ಹೊಸಪೇಟೆ ೧೯೯೩ ಪುಟ–೧೩

೩೧. ಜಾನಪದ ವಾಹಿನಿ (ಲೇ) ದೇಜಗೌ ಪುಟ–೧೪೫

# ಅಧ್ಯಾಯ-೪

## ಕೊಡಗಿನ ಜಾತ್ರೆಗಳು

೪.೧ ಮಡಿಕೇರಿ ತಾಲ್ಲೂಕಿನ ಜಾತ್ರೆಗಳು

೪.೨ ವಿರಾಜಪೇಟೆ ತಾಲ್ಲೂಕಿನ ಜಾತ್ರೆಗಳು

೪.೩ ಸೋಮವಾರಪೇಟೆ ತಾಲ್ಲೂಕಿನ ಜಾತ್ರೆಗಳು

೪.೪ ಭೂತಾರಾಧನೆ

೪.೫ ಜಾತ್ರೆಗಳ ಸಾಂಸ್ಕೃತಿಕ ಸ್ಥಿತ್ಯಂತರ

೪.೬ ಕೊಡಗಿನ ಜಾತ್ರೆಗಳ ಸ್ವರೂಪ

೪.೭ ಜಾತ್ರೆಗಳ ಕ್ಷೇತ್ರಾಧ್ಯಯನದ ಪ್ರಾಥಮಿಕ ಮಾಹಿತಿ ವಿಶ್ಲೇಷಣೆ

ಅಧ್ಯಾಯ-೪

# ಕೊಡಗಿನ ಜಾತ್ರೆಗಳು

ಇಡೀ ವಿಶ್ವದ ಜನಾಂಗ, ಭಾಷೆ, ಭೌಗೋಳಿಕ, ಪರಿಸ್ಥಿತಿ, ಪದ್ಧತಿ- ಪರಂಪರೆ ಎಲ್ಲವೂ ಭಿನ್ನತೆಯಿಂದ ಕೂಡಿದ್ದರು ಸಹ ನಡೆದುಕೊಂಡು ಬಂದಿರುವ ಸಂಸ್ಕೃತಿ ಆಚಾರ ವಿಚಾರಗಳಿಗೆ ಮೂಲ ಜಾನಪದ. ಹಾಗೆಯೇ ಎಲ್ಲಾ ಕಲಾ ಪ್ರಕಾರಕ್ಕೂ ತಾಯ ಬೇರು ಕೂಡ ಜಾನಪದ ಎಂದು ಹೇಳಬಹುದು.

ಮನುಷ್ಯ ಹುಟ್ಟಿನ ವಿಶ್ಲೇಷಣೆ ಮಂಗನಿಂದ ಮಾನವ ಎಂಬ ಮಾನವ ವಿಕಾಸವಾದದ ಘಟನಾವಳಿಯಿಂದ ಪ್ರಾರಂಭವಾದ ಮಾನವನ ಅಸ್ಥಿತ್ವ ಕಾಲಾನಂತರದಲ್ಲಿ ಜ್ಞಾನ ವೃದ್ಧಿಸುತ್ತಿದ್ದಂತೆ, ಪಂಗಡಗಳಾಗಿ, ಪ್ರದೇಶವಾರು ಗುರುತಿಸುವಿಕೆಯೊಂದಿಗೆ ತನ್ನದೇ ಭಾಷೆ ರೂಪಿಸಿಕೊಳ್ಳುತ್ತಾನೆ. ತನ್ನದೇ ಆದ ಆಚಾರ ವಿಚಾರಗಳನ್ನು ರೂಢಿಸಿಕೊಂಡು ಬಂದಿರುವ ಪ್ರತಿಯೊಂದು ನಡಾವಳಿಯೂ ಯಾವುದೇ ಶಾಸ್ತ್ರೀಯವಾಗಿ ಕಲಿತದ್ದಲ್ಲ. ಪ್ರತಿನಿತ್ಯ ಬದುಕಿನಲ್ಲಿ ತಾನೇ ತಾನಾಗಿ ರೂಪಿತಗೊಂಡವು. ಇದೇ ಜಾನಪದ.

ಕೊಡಗು ಜಿಲ್ಲೆ ತನ್ನದೇ ಆದ ವಿಶಿಷ್ಟ ಆಚಾರ ವಿಚಾರ, ಸಂಸ್ಕೃತಿ, ಭಾಷೆ, ವೇಷ ಭೂಷಣ ಹಾಗೂ ಆಚರಣೆಗಳಿಂದ ರಾಜ್ಯದ ಗಮನ ಸೆಳೆದಿದೆ. ಕೊಡಗಿನ ಮೂಲ ಜನಾಂಗ ಕೊಡವರಾಗಿದ್ದರೂ ಕೂಡ ಇಲ್ಲಿ ಹಲವಾರು ಜಾತಿ ಜನಾಂಗದವರು ನೆಲೆಸಿದ್ದು ಅವರುಗಳದೆ ಆದ ವಿಶಿಷ್ಟ ಸಂಸ್ಕೃತಿ ಆಚರಣೆಗಳನ್ನು ತಲೆತಲಾಂತರದಿಂದ ನಡೆಸಿಕೊಂಡು ಬರುತ್ತಿದ್ದಾರೆ. ಕೊಡಗಿನಲ್ಲಿರುವ ಆಚರಣೆ ಸಂಸ್ಕೃತಿ ಮೂಲ ಕೊಡವರದರ ಜೊತೆಗೆ ನೆರೆ ಜಿಲ್ಲೆ ದಕ್ಷಿಣ ಕನ್ನಡ ಹಾಗೂ ನೆರೆ ರಾಜ್ಯ ಕೇರಳ ಸಂಸ್ಕೃತಿ ಪ್ರಭಾವ ಇಂದು ಕೊಡಗಿನಲ್ಲಿ ರಾರಾಜಿಸುತ್ತಿದೆ. ಕೊಡಗಿನ ಸೋಮವಾರಪೇಟೆ ತಾಲೂಕು ಭಾಗವು ಬಯಲು ಸೀಮೆಯ ಪ್ರಭಾವ ಹೊಂದಿದ್ದು, ಅಲ್ಲಿ ನಡೆಯುವ ಆಚರಣೆಗಳೆಲ್ಲ ಬಯಲು ಸೀಮೆಯ ರೀತಿಯಲ್ಲೆ ನಡೆಯುತ್ತದೆ.

'ಜನಮರುಳೋ, ಜಾತ್ರೆ ಮರಳೋ' ಎಂಬ ನಾಣ್ನುಡಿಯಂತೆ ಜಾತ್ರೆಗೆ ಹೋಗದ ಜನರಿಲ್ಲ ಜಾತ್ರೆ ಆಚರಿಸದ ಊರಿಲ್ಲ. ಈ ಜಾತ್ರೆಗಳು ವಿಶ್ವದ ನಾನಾ ಭಾಗಗಳಲ್ಲೂ ನಡೆಯುತ್ತದೆ. ಅದರಲ್ಲೂ ವೈವಿಧ್ಯತೆ ಸಂಸ್ಕೃತಿ ಆಚಾರ ವಿಚಾರ ಹೊಂದಿರುವ ನಮ್ಮ ಭಾರತ ದೇಶವು ಇದರಿಂದ ಹೊರತಾಗಿಲ್ಲ. ನಮ್ಮ ಭಾರತದಲ್ಲಿ ಸಾವಿರಾರು ಜಾತ್ರೆಗಳು ನಡೆಯುತ್ತವೆ. ಅದರಲ್ಲಿ ಕರ್ನಾಟಕದಲ್ಲಿ ಆರು ನೂರಕ್ಕೂ

ಹೆಚ್ಚು ಜಾತ್ರೆಗಳು ನಡೆಯುತ್ತದೆ. ಆಯಾಯ ಪ್ರಾದೇಶಿಕತೆಯೊಳಗಿರುವ ಧಾರ್ಮಿಕ ಆಚರಣೆಗಳಿಗನುಗುಣವಾಗಿ ಒಂದಿಲ್ಲ, ಒಂದು ಜಾತ್ರೆ, ಹಬ್ಬ ಉತ್ಸವ ಆಚರಣೆಗಳನ್ನು ಆಚರಿಸುತ್ತಾ, ಜನರು ಮನಃಶಾಂತಿ ನೆಮ್ಮದಿಯನ್ನು ಪಡೆಯುತ್ತಾರೆ.

ಜಾತ್ರೆಗಳನ್ನು ದೇವರುಗಳ ಹೆಸರಿನಲ್ಲಿ ಐತಿಹಾಸಿಕ, ಪೌರಾಣಿಕ ,ಸಾಮಾಜಿಕ, ವೀರ ಅವಧೂತರ ಹೆಸರಿನಲ್ಲಿ ಆಚರಿಸಲಾಗುತ್ತದೆ. ಇವರುಗಳನ್ನು ವರ್ಷಕ್ಕೊಮ್ಮೆ ಆರಾಧಿಸುವ ಸಲುವಾಗಿ ಇವರುಗಳ ಹೆಸರಿನಲ್ಲಿ ಜಾತ್ರೆ ಉತ್ಸವಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಈ ಜಾತ್ರೆ ಉತ್ಸವಗಳು ಕೊಡಗು ಜಿಲ್ಲೆಯಿಂದ ಹೊರತಾಗಿಲ್ಲ. ಈ ಕೊಡಗಿನಲ್ಲೂ ದೇವರ ಹೆಸರಿನಲ್ಲಿ, ಪೌರಾಣಿಕ, ಐತಿಹಾಸಿಕ,, ವೀರ ಹಾಗೂ ಅವಧೂತರ ಹೆಸರಿನಲ್ಲಿ ಜಿಲ್ಲೆಯ ಹಲವೆಡೆ ಜಾತ್ರೆಗಳು ಜರುಗುತ್ತವೆ.

ಕೊಡಗಿನ ಕೆಲವು ದೇವತೆಗಳು ಉದ್ಭವ ಮೂರ್ತಿಗಳೂ, ಅವುಗಳ ಅಸ್ತಿತ್ವ ಹೇಗಾಯಿತೆಂಬುದಕ್ಕೆ ಹಲವು ಜನಪದ ಕಥೆಗಳಿವೆ. 'ಯಾರಿಗೋ ಕನಸಿನಲ್ಲಿ ಬಂದು ಮತ್ತೆಲ್ಲೋ ಒಂದು ಕಡೆ ಮೂರ್ತಿ ಕಾಣಿಸಿಕೊಂಡು ಆ ದೈವೀ ಪ್ರಭಾವ ಮೈ ಮೇಲೆ ಆವಾಹನೆ ಆಗಿ ತನ್ನ ಆರಾಧನೆ ಬಯಸುವುದು ಇದೆಲ್ಲಾ ಹಿರಿಯರ ಬಾಯಿ ಮಾತಿಗೆ ಕೇಳಿ ತಿಳಿದುಕೊಂಡಿರುವ ಸಂಗತಿ'.

ಇತ್ತೀಚಿನ ದಿನಗಳಲ್ಲಿ ಈ ಕುರಿತ ಮಾಹಿತಿಗಳನ್ನು ತಿಳಿದವರೂ ಬಹಳ ಕಡಿಮೆ. ಒಟ್ಟಾರೆ ನಡೆಸಿಕೊಂಡು ಬಂದಿರುವ ಆಚರಣೆ, ಜಾತ್ರೆಗಳು ಮಾತ್ರ ಚಾಲ್ತಿಯಲ್ಲಿವೆ.

ಮತ್ತೆ ಕೆಲವು ಮಾನವ ರೂಪದಲ್ಲಿ ನೆರೆರಾಜ್ಯ ಕೇರಳದಿಂದ ಬಂದು ಸ್ಥಳೀಯ ಜನರಿಗೆ ತಮ್ಮ ಮಾಯಾಶಕ್ತಿಗಳ ಪ್ರಭಾವ ಕಾಣಿಸಿ ತಮಗೆ ನೆಲೆ ಕಂಡು ಕೊಂಡು ಆರಾಧಿಸಿಕೊಳ್ಳುವ ದೇವರುಗಳು ಇಂತಹ ದೇವರುಗಳಲ್ಲಿ ಕೊಡಗಿನ ಬಹುಮುಖ್ಯ ದೇವರು ಎಂದರೆ ಕೊಡಗಿನ ದೈವವೆಂದೇ ಸ್ಥಾನಗಳಿಸಿರುವ ಇಗ್ಗುತಪ್ಪ ದೇವರು ಹಾಗೂ ಅವರ ಸಹೋದರರು ಮತ್ತು ಸಹೋದರಿಯಾದ ಪನ್ನಂಗಾಲ ತಮ್ಮೆ ಪ್ರಮುಖರು. ತಿನ್ನುತ್ತಿದ್ದ ತಾಂಬೂಲವನ್ನು ಬಾಯಿ ಯಿಂದ ಹೊರಗೆ ತೆಗೆದು ಮತ್ತೆ ಬಾಯಿಗೆ ಹಾಕಿಕೊಂಡ ಏಕಮಾತ್ರ ಕಾರಣಕ್ಕಾಗಿ ಜಾತಿ ಭ್ರಷ್ಟಳಾಗಿ ತನ್ನ ಸಹೋದರರಿಂದ ದೂರವಾಗಬೇಕಾದ ಪರಿಸ್ಥಿತಿ ಪನ್ನಂಗಾಲ ತಮ್ಮೆಯದು ಮತ್ತು ಹಿರಿಯಣ್ಣ ಇಗ್ಗುತಪ್ಪ ಆಕೆಯನ್ನು ಕೀಳುಜಾತಿಯ ದೇವತೆಯಾಗಿ ತಾನು ನೆಲೆ ನಿಲ್ಲುವ ಬೆಟ್ಟದ ಕೆಳಭಾಗದ ತಪ್ಪಲಿನಲ್ಲಿ ನೆಲೆ ನಿಲ್ಲುವಂತೆ ಆಜ್ಞಾಪಿಸುವುದರೊಂದಿಗೆ ಈಕೆ ಯವಕ ಪಾಡಿಯಲ್ಲಿ ನೆಲೆ ನಿಲ್ಲುತ್ತಾಳೆ.

ಇಗ್ಗುತಪ್ಪ, ಪನ್ನಂಗಾಲತಮ್ಮೆ ಇವರುಗಳ ಆರಾಧನೆಯ ಸಲುವಾಗಿ ವರ್ಷಕ್ಕೊಮ್ಮೆ ಕೊಡಗಿನ ಹಲವೆಡೆ ವಾರ್ಷಿಕ ಉತ್ಸವ, ಜಾತ್ರೆಗಳು ನಡೆಯುತ್ತವೆ. ಹಾಗೆಯೆ ಇಲ್ಲಿನ ಪ್ರಮುಖ ದೇವರುಗಳೆಂದರೆ ಪುತ್ತು ಭಗವತಿ, ಭದ್ರಕಾಳಿ, ಬೇಟೆ ಅಯ್ಯಪ್ಪ ಆಗಿದ್ದು ಈ ದೇವರುಗಳ ಹೆಸರಿನಲ್ಲಿ ಕೊಡಗಿನ ಹಲವೆಡೆ ಜಾತ್ರೆಗಳು ಜರುಗುತ್ತವೆ. ಇದಲ್ಲದೆ ಪೌರಾಣಿಕ ದೇವರುಗಳಾದ ಈಶ್ವರ, ಪಾರ್ವತಿ,

ರಾಮ, ಹನುಮ ವಿಷ್ಣು, ಸುಬ್ರಹ್ಮಣ್ಯ ಹಾಗೂ ಬುಡಕಟ್ಟು ಜನಾಂಗದವರ ಆರಾಧ್ಯದೈವಗಳ ಹೆಸರಿನಲ್ಲಿ ಕೊಡಗಿನಾದ್ಯಂತ ಜಾತ್ರೆಗಳು ನೆರವೇರುತ್ತವೆ ಕೊಡಗಿನಲ್ಲಿ ಜರುಗುವ ಈ ಎಲ್ಲಾ ಜಾತ್ರೆಗಳನ್ನು ನಾನು ಸಂಶೋಧನಾ ವಿಚಾರವಾಗಿ ತೆಗೆದುಕೊಂಡು ಅಧ್ಯಯನ ನಡೆಸಿ ವಿಶ್ಲೇಷಿಸಿ ಪ್ರಬಂಧ ರಚಿಸಿದ್ದೇನೆ. ಕೊಡಗಿನ ಮೂರು ತಾಲೂಕುಗಳಾದ ಮಡಿಕೇರಿ ವಿರಾಜಪೇಟೆ, ಸೋಮವಾರಪೇಟೆಗಳಲ್ಲಿ ಪ್ರತ್ಯೇಕವಾಗಿ ನಡೆಯುವ ಜಾತ್ರೆಗಳನ್ನು ಪಟ್ಟಿಮಾಡಿ ಆ ಮೂಲಕ ಅವುಗಳ ಅಧ್ಯಯನ ಮಾಡಿರುತ್ತೇನೆ.

# ಮಡಿಕೇರಿ ತಾಲೂಕಿನ ಜಾತ್ರೆಗಳು

| | | |
|---|---|---|
| * | ಪಾಡಿ ಶ್ರೀ ಈಶ್ವರ ಇಗ್ಗುತ್ತಪ್ಪ ಜಾತ್ರೆ | – ಪಾಡಿ |
| * | ಶ್ರೀ ಭಗಂಡೇಶ್ವರ ಜಾತ್ರೆ | – ಭಾಗಮಂಡಲ |
| * | ಕಾವೇರಿ ಸಂಕ್ರಮಣ ಜಾತ್ರೆ | – ತಲಕಾವೇರಿ |
| * | ಶ್ರೀ ರಾಜರಾಜೇಶ್ವರಿ ಜಾತ್ರೆ | – ಕರ್ಣಾಂಗೇರಿ |
| * | ಪಾಲೂರು ಶ್ರೀ ಮಹಾಲಿಂಗೇಶ್ವರ ಜಾತ್ರೆ | – ಪಾಲೂರು |
| * | ಚಿನ್ನತಪ್ಪ ಜಾತ್ರೆ | – ಅಯ್ಯಂಗೇರಿ |
| * | ಮಕ್ಕಿಶಾಸ್ತವು ಜಾತ್ರೆ | – ಬೇತು |
| * | ಕೈಕಾಡಿನಲಿ ಮಹಾಲಕ್ಷ್ಮಿ ಉತ್ಸವ | – ಕೈಕಾಡು |
| * | ಭಾಗಮಂಡಲದ ಪೊಲಿಂಕಾನ ಜಾತ್ರೆ | – ಭಾಗಮಂಡಲ |
| * | ಬಲ್ಲಮಾವಟಿ ಉಯ್ಯಾಲೆ ಜಾತ್ರೆ | – ಬಲ್ಲಮಾವಟಿ |
| * | ಓಂಕಾರೇಶ್ವರ ಜಾತ್ರೆ | – ಮಡಿಕೇರಿ |
| * | ಶಕ್ತಿ ದೇವತೆಗಳ ಕರಗೋತ್ಸವ | – ಮಡಿಕೇರಿ |
| * | ಶಿವಪಾರ್ವತಿ ಮರಗೋಡು ಜಾತ್ರೆ | – ಮರಗೋಡು |

## ೪.೧ ಮಡಿಕೇರಿ ತಾಲ್ಲೂಕಿನ ಜಾತ್ರೆಗಳು

**ಪಾಡಿ ಶ್ರೀ ಈಶ್ವರ ಇಗ್ಗುತಪ್ಪ ಜಾತ್ರೆ**

ಕೊಡವರ ಕುಲದೇವತೆ ಕಾವೇರಮ್ಮ ಮಾಗುರು ಇಗ್ಗುತಪ್ಪ ಇದು ಕೊಡವರ ಬಾಯಲ್ಲಿ ಯಾವಾಗಲು ಬರುವಂತ ಭಕ್ತಿಯ ಹೆಸರು. ಎಲ್ಲಾ ಕಾರ್ಯಗಳಿಗೂ ಈ ದೇವರ ನೆನೆದು ಶುರು ಮಾಡುವರು. ಕೊಡಗಿನಲ್ಲಿ ಇಗ್ಗುತಪ್ಪನಿಗೆ ಗುರುವಿನ ಸ್ಥಾನನೀಡಿ ಮಾಗುರು ಎಂದು ಬೇಡಿಕೊಳ್ಳುವರು. ಮಳೆಯ ಅದಿದೇವರಾದ ಇಗ್ಗುತ್ತಪ್ಪನಿಗೆ ಹುತ್ತರಿ ಕೋಲಿನಲ್ಲೂ ಒಂದು ಪ್ರಾಧಾನ್ಯತೆ ಇರುವುದು.

ಮಡಿಕೇರಿಯಿಂದ ಮೂವತ್ತೆರಡು ಕಿ.ಮೀ. ದೂರದಲ್ಲಿರುವ ಕಕ್ಕಬ್ಬೆಯಿಂದ ಮೂರು ಕಿ.ಮೀ ದೂರ ಕ್ರಮಿಸಿದಾಗ ಈ ಪುಣ್ಯಕ್ಷೇತ್ರ ಶ್ರೀ ಈಶ್ವರ ಇಗ್ಗುತಪ್ಪನ ದೇವಸ್ಥಾನದ ದರ್ಶನವಾಗುವುದು. ಸಾವಿರ ವರ್ಷ ಇತಿಹಾಸವಿರುವ ಈ ದೇಗುಲವು ಕೊಡಗಿನವರ ಕುಲದೇವತೆ ಎನಿಸಿಕೊಂಡಿರುವ ಶ್ರೀ ಇಗ್ಗುತಪ್ಪನ ಪವಿತ್ರ ಕ್ಷೇತ್ರವಾಗಿದೆ. ಈ ಪುಣ್ಯ ಕ್ಷೇತ್ರದಲ್ಲಿ ಈಶ್ವರನು ತಪಸ್ಸು ಮಾಡಿದನೆಂದು ಹೇಳಲಾಗುವುದು.

**ಪೌರಾಣಿಕ ಹಿನ್ನೆಲೆ:**

ಪುರಾಣ ಕಾಲದಲ್ಲಿ ಚಿನ್ನದ ಶಂಖದ ಒಳಗಿನಿಂದ ಏಳು ಮಕ್ಕಳು ದೈವಾಂಶ ಸಂಭೂತವಾಗಿ ಹೊರದಾಟಿ ಮಾಯಾರೀತಿಯಲ್ಲಿ ಬೆಳೆದರು. ಆರು ಜನ ಪುರುಷ ದೇವರು ಒಬ್ಬಳು ಸ್ತ್ರೀ ದೇವಿ. ಆರು ಅಣ್ಣಂದಿರಿಗೆ ಒಂದು ತಂಗಿ. ಮರದ ಕೊಂಬೆ ಹಿಡಿದುಕೊಂಡು ಹತ್ತಿ ಇಳಿಯುತ್ತಾ ಕಾಲ ಕಾಳೆಯುತ್ತಿದ್ದರು. ಮರದ ಹಣ್ಣುಗಳನ್ನು ತಿನ್ನಲು ಹಕ್ಕಿಗಳು ಬರುತ್ತಿದ್ದವು. ಅವುಗಳಲ್ಲೊಂದು ಪಕ್ಷಿಯನ್ನು 'ನಮ್ಮನ್ನು ಕ್‌ಬ್ಬೂಮಿಗೆ ಇಳಿಸಿಕೊಡೆಂದು' ಹಿರಿಯಣ್ಣನು ಕೇಳಿಕೊಂಡನು. ಹಕ್ಕಿಯು ಒಪ್ಪಿ ಅವರು ಏಳು ಜನರನ್ನು ಹೊತ್ತುಕೊಂಡು ಹಾರಿತು. ಕಣ್ಣೂರಿಗೆ ಬಂದು ತಲುಪಿದ ಹಕ್ಕಿಯು ಅಲ್ಲಿದ್ದ ಒಂದು ತೆಂಗಿನ ಮರದ ಗರಿಯ ಮೇಲೆ ಕುಳಿತು ವಿಶ್ರಮಿಸಿಕೊಂಡು ಅಲ್ಲಿಂದ ಸ್ವಲ್ಪ ಮುಂದಕ್ಕೆ ಹಾರಿ ಅವರನ್ನು ಭೂಮಿಯ ಮೇಲಿಳಿಸಿತು. ಅಲ್ಲಿಂದ ಆ ಏಳು ಜನ ದೇವತೆಯರು ಬೇರೆ ಬೇರೆ ಜಾಗದಲ್ಲಿ ನೆಲೆನಿಂತರು. ಅವರು ನಿಂತ ಜಾಗದಲ್ಲೆ ದೇವಸ್ಥಾನದ ನಿರ್ಮಾಣವಾಯಿತು.

**ಕೇರಳದ ತಲಿಪರಂಬದಲ್ಲಿ ಶ್ರೀ ರಾಜರಾಜೇಶ್ವರ** ದೇವಸ್ಥಾನ ಹಾಗೂ ಶ್ರೀ ಕೃಷ್ಣ ದೇವಸ್ಥಾನ. ಕಾಂಞಂಗಾಡ್‌ನಲ್ಲಿ ಶ್ರೀ ವಿದ್ಯಾನಾಥ ದೇಗುಲ. ಕೊಡಗಿನ ಮಲ್ಮಪಾಡಿಯಲ್ಲಿ ಶ್ರೀ ಈಶ್ವರ ಇಗ್ಗುತ್ತಪ್ಪ ದೇಗುಲ. ಪಾಲೂರಿನಲ್ಲಿ ಶ್ರೀ ಮಹಲಿಂಗೇಶ್ವರ ದೇವಸ್ಥಾನ. ಪನ್ನಂಗಾಲದಲ್ಲಿ ಶ್ರೀ ಪನ್ನಂಗಾಲತಮ್ಮೆ ದೇವಸ್ಥಾನ ಮತ್ತು ವಯನಾಡ್ ತಿರ್‌ನೆಲಿಯಲ್ಲಿ ಶ್ರೀ ಇಗ್ಗುತ್ತಪ್ಪನಾಗಿ, ನೆಲೆನಿಂತರೆನ್ನುವರು. ಇಗ್ಗು ಎಂದರೆ ದಾನ, ತಪ್ಪ ಎಂದರೆ ಕೊಡುವ. ಇಗ್ಗುತಪ್ಪ ದೇವರು ಈ ತಾಣಕ್ಕೆ ಬರುವಾಗ ಬಿದಿರಿನ ತುಂಡಿನಲ್ಲಿ ಭತ್ತದ ತೆನೆ ತುಂಬಿಕೊಂಡು ಬಂದು ಭಕ್ತರಿಗೆ ಗದ್ದೆಯಲ್ಲಿ ಭತ್ತ ಬೆಳೆಯಲು ನೀಡಿ

ಆಶೀರ್ವದಿಸಿದರು ಎನ್ನಲಾಗುವುದು. ದೇಗುಲದ ಒಳಾಂಗಣದ ಪ್ರವೇಶ ದ್ವಾರದಲ್ಲಿ ಭತ್ತದ ತೆನೆ ತುಂಬಿರುವ ಬಿದಿರಿನ ತುಂಡಿನ ಕೆತ್ತನೆಯಿರುವುದು. ಸೂರ್ಯ ಚಂದ್ರರಿರುವವರೆಗೂ ಮುಂಜಾನೆ ಹಾಗು ಮುಸ್ಸಂಜೆ ಹೊತ್ತಲ್ಲಿ ಶ್ರೀ ಈಶ್ವರ ಇಗ್ಗತ್ತಪ್ಪನನ್ನು ನೆನೆಯುವವರಿಗೆ ಸಕಲ ಸೌಭಾಗ್ಯ ದೊರಕುವುದೆನ್ನುವರು.

ಕಣ್ಣೂರಿನಿಂದ ಮುಂದಕ್ಕೆ ಹಕ್ಕಿ ಇಳಿಸಿದ ಸ್ಥಳದಿಂದ ಹೊರಟ ಏಳು ದೇವತೆಗಳು ನೆಲೆನಿಲ್ಲುತ್ತಾ ಸಾಗಿ ಕೊಡಗಿನ ನಾಲ್ಕು ನಾಡಿಗೆ ಸೇರಿದ ತೊಕ್ಕೋಯಂಡ ಬೆಟ್ಟಕ್ಕೆ ಏಸೆದರು . ಯಾರ ಬಾಣ ಎಲ್ಲಿಗೆ ಬೀಳುತ್ತದೋ ಅಲ್ಲಿ ಅವರು ನೆಲೆನಿಲ್ಲುವುದೆಂದು ತೀರ್ಮಾನಿಸಿಕೊಂಡಿದರು . ತಂಗ್ಯಮ್ಮ ದೇವಿಯ ಬಾಣವು ಪನ್ನಂಗಾಲ ಊರಿಗೆ ಬಿತ್ತು. ಪನ್ನಂಗಾಲತಮ್ಮೆ ಹೆಸರಿನಲ್ಲಿ ಆ ಸ್ಥಾನದಲ್ಲಿ ತಂಗ್ಯವ್ವ ನೆಲೆನಿಂದಳು. ಆಮೇಲಿಂದ ಶ್ರೀ ಇಗ್ಗುತಪ್ಪ ದೇವರು ಪಾಡಿ, ನೆಲ್‌ಜಿ ಮತ್ತು ಪೆರೂರಿನಲ್ಲಿ ನೆಲೆನಿಂತರು. ಉಳಿದ ಇಬ್ಬರು ದೇವರಲ್ಲಿ ಒಬ್ಬರು ಪಾಲೂರಿನಲ್ಲಿ ಮತ್ತೊಬ್ಬರು ತೆರ್‌ನೆಲಿಯಲ್ಲಿ ನೆಲೆನಿಂತರು.

ಶ್ರೀ ಇಗ್ಗತಪ್ಪ ದೇವರ ಮೂಲಸ್ಥಾನವು ಈ ದೇಗುಲದಿಂದ ಮೂರು ಮೈಲಿ ದೂರದಲ್ಲಿರುವ ಮಲ್ಮಾ ಎಂಬ ಪ್ರದೇಶದಲ್ಲಿರುವುದು. ಆ ಆದಿಸ್ತಾದಲ್ಲಿ ಗುಹೆ ಇರುವುದು. ಹುತ್ತರಿ ಹಬ್ಬದಂದು ಹಾಗೂ ಮಾರ್ಚ್ ತಿಂಗಳಲ್ಲಿ ಇಲ್ಲಿ ಕಲ್ಲಾಡ್ಚ ಹಬ್ಬವು ನಡೆಯುವುದು.

ಈ ದೇವಾಲಯದಲ್ಲಿ ಮಗುವಿನ ನಾಮಕರಣದ ಸಮಾರಂಭ ನಡೆಯುತ್ತಿರುತ್ತದೆ. ಸಂತಾನ ಭಾಗ್ಯಕ್ಕೆ, ಮದುವೆಯಾಗಲು, ಮಳೆ ಬೆಳೆಗೆ, ಆರೋಗ್ಯ ಭಾಗ್ಯ, ಸಿರಿ–ಸಂಪತ್ತಿಗೆ ಹೀಗೆ ಎಲ್ಲದಕ್ಕೂ ಶ್ರೀ ಈಶ್ವರ ಇಗ್ಗುತಪ್ಪನ ಸನ್ನಿಧಿಗೆ ಬಂದು ಹರಕೆ ಮಾಡಿಕೊಳ್ಳುವರು ಎಂದು ತಿಳಿಸಿರುತ್ತಾರೆ. ಪ ಾ ಡಿ ಶ್ರೀ ಈಶ್ವರ ಇಗ್ಗುತಪ್ಪ ದೇವರ ದೇವಸ್ಥಾನದ ಅರ್ಚಕರಾದ ಕುಶಸ್ವಾಮಿಯವರು ಮಾಹಿತಿ ನೀಡಿರುತ್ತಾರೆ.

**ಶ್ರೀ ಭಗಂಡೇಶ್ವರ ಜಾತ್ರೆ**

ಮಡಿಕೇರಿಯಿಂದ ೩೨.ಕಿ.ಮೀ ದೂರದಲ್ಲಿರುವ ಭಾಗಮಂಡಲದಲ್ಲಿ ಈ ಭಗಂಡೇಶ್ವರ ದೇವಾಲಯವಿದೆ. ಶಿವ ಹಾಗು ವಿಷ್ಣು ದೇವರನ್ನು ಅಕ್ಕಪಕ್ಕದಲ್ಲಿ ದರ್ಶನ ಲಭಿಸುವುದು. ಜೊತೆಯಲ್ಲಿ ಶ್ರೀ ಸುಬ್ರಹ್ಮಣ್ಯ ದೇವರ ಗುಡಿಯೂ ಇರುವುದು. ಹೆಬ್ಬಾಗಿಲ ಸಮೀಪದಲ್ಲಿ ಗಣಪತಿ ಗುಡಿ ಇರುವುದು. ವಿಘ್ನವಿನಾಶಕ, ವಿಘ್ನೇಶ್ವರ, ವಿದ್ಯಾದಾಯಕ ಗಣೇಶ ಇಲ್ಲಿ ಪಶ್ಚಿಮ ದಿಕ್ಕಿಗೆ ಅಂದರೆ ಗರ್ಭಗುಡಿಗೆ ಅಭಿಮುಖವಾಗಿ ಇರುವುದು. ಮೊದಲು ಗಣಪತಿ ದರ್ಶನಗೈದು ಪೂಜಿಸಿ ಆ ನಂತರ ಒಳಾಂಗಣ ಪ್ರವೇಶಿಸುವರು.

ದೇಗುಲದ ಹೊರಾಂಗಣದ ಹಿಂಭಾಗದಲ್ಲಿ ಶ್ರೀ ಕಾವೇರಿ ಮಾತೆಯ ನಂದಾದೀಪದ ಗುಡಿ ಇರುವುದು. ಜಾತ್ರೆಯ ಸಮಯದಲ್ಲಿ ಈ ನಂದಾದೀಪವು ಉರಿಯುತ್ತಲೇ ಇರುತ್ತದೆ ಎಂದು

ಜನರು ತಿಳಿಸುತ್ತಾರೆ. ಅಲ್ಲಿಯೇ ಸಮೀಪದಲ್ಲಿ ಅಕ್ಕಿ ಹಾಕಿಡುವ ಮರದ ಪತ್ತಾಯ ಇರುವುದು. ಹೊರಾಂಗಣದಲ್ಲಿರುವ ವಸಂತ ಮಂಟಪದಲ್ಲಿ ಹುತ್ತರಿ ಹಬ್ಬದಂದು ರಾತ್ರಿ ಕದಿರು ತಂದಿಟ್ಟು ಧಾನ್ಯಲಕ್ಷ್ಮಿ ಪೂಜೆ ಮಾಡುವರು. ಇದರ ಎದುರಲ್ಲಿ ಆನೆಯ ಎರಡು ಶಿಲಾಮೂರ್ತಿಗಳಿವೆ. ಟಿಪ್ಪು ಸುಲ್ತಾನನು ಈ ಆನೆಯ ಸೊಂಡಿಲನ್ನು ಮುರಿದನೆನ್ನುವರು. ಇನ್ನೊಂದು ಬದಿಯಲ್ಲಿ ದೇವಸ್ಥಾನದ ರಕ್ಷಾ ದೇವತೆಯಾದ ಶ್ರೀ ಚಾಮುಂಡೇಶ್ವರಿಯ ವಿಗ್ರಹ ಇರುವುದು. ಹಾಗೆ ಇನ್ನೊಂದು ಬದಿಯಲ್ಲಿ ಕ್ಷೇತ್ರ ಪಾಲ ದೇವತಾ ಕಟ್ಟೆಯೂ ಇರುವುದು.

ಭಗಂಡೇಶ್ವರ ದೇವಾಲಯದ ಮುಂದಿರುವ ಪೌಳಿಕಟ್ಟೆಯ ಮೇಲೆ ಸಣ್ಣದೊಂದು ಗುಡಿ ಇರುವುದು. ಈ ಕ್ಷೇತ್ರದ ಸಂರಕ್ಷಣಾ ಮೂರ್ತಿಗಳಾದ ಪುರುಷರಾಯ ಮತ್ತು ಕಿನಿಮಿನಿ ಮೂರ್ತಿಯ ಕುದುರೆಯಲ್ಲಿ ಕುಳಿತ ಅಶ್ವಾರೋಹಿಯ ರೂಪದ ಮೂರ್ತಿ ಇರುವುದು. ಕಿನಿಮಿನಿ ಮೂರ್ತಿಯ ಬದಿಯಲ್ಲಿ ಶ್ರೀ ಕೃಷ್ಣನ ವಿಗ್ರಹ ಇರುವುದು.

ಸಮುದ್ರಮಟ್ಟಕ್ಕಿಂತ ೨೮೭೫ ಅಡಿ ಎತ್ತರದಲ್ಲಿ ಈ ದೇವಸ್ಥಾನವು ನಿರ್ಮಾಣವಾಗಿರುವುದು. ಪುಣ್ಯವಾಹಿನಿ ಕಾವೇರಿ ಹೊಳೆ ಕೆರೆಯಲ್ಲಿ ಈ ಪುಣ್ಯಕ್ಷೇತ್ರ ನಿಂತಿರುವುದು. ಮಳೆಗಾಲದ ಸಮಯದಲ್ಲಿ ಕಾವೇರಿ ತಾಯಿ ಉಕ್ಕಿ ಹರಿದು ದೇವಸ್ಥಾನವನ್ನು ಮುಟ್ಟಿ ವಾಪಾಸು ಹೋಗುವುದು. ಜೋರಾದ ಮಳೆಗಾಲದ ಸಮಯದಲ್ಲಿ ಈ ಭೂ ಪ್ರದೇಶವೆಲ್ಲವೂ ನೀರಿನಿಂದ ಆವೃತವಾಗುವುದು.

**ಪೌರಾಣಿಕ ಹಿನ್ನಲೆ**

ಪುರಾತನ ಕಾಲದಲ್ಲಿ ಈ ಪ್ರದೇಶದಲ್ಲಿ ಮಹಾಮುನಿಗಳಾದ ಭಗಂಡ ಮುನಿಯು ವಾಸಮಾಡುತ್ತಿದ್ದರು. ಒಂದೊಮ್ಮೆ ಭಗಂಡಮುನಿಯು ಸುಬ್ರಹ್ಮಣ್ಯ ಸ್ವಾಮಿಯನ್ನು ನೆನೆದು ತಪಸ್ಸು ಮಾಡಿದಾಗ ಸ್ವಾಮಿಯು ಪ್ರಸನ್ನರಾಗಿ ಸ್ಕಂದ ಕ್ಷೇತ್ರವೆಂದು ಪ್ರಸಿದ್ಧಿಯಾಗಿದ್ದ ಈ ಪ್ರದೇಶವನ್ನು ಭಗಂಡ ಮುನಿಯವರಿಗೆ ಕೊಡುಗೆಯಾಗಿ ಪೂಜಿಸಿದರು. ಸುಬ್ರಹ್ಮಣ್ಯ ಸ್ವಾಮಿಯ ಆಶೀರ್ವಾದ ಸ್ವರೂಪವಾಗಿ ಪಡೆದ ಈ ಪ್ರದೇಶವು ಪ್ರತಿಷ್ಠಾಪಿಸಿದ ಶಿವಲಿಂಗವನ್ನು ಭಗಂಡೇಶ್ವರನೆಂದು ಸ್ತುತಿಸಿ ಪೂಜಿಸಲಾಯಿತು ಎಂದು ಹೇಳುತ್ತಾರೆ.

ಕಾವೇರಿ ಹೊಳೆಯು ತಲಕಾವೇರಿಯಿಂದ ಮುಂದೆ ಗುಪ್ತಗಾಮಿನಿಯಾಗಿ ಹರಿದು, ಅಲ್ಲಿಂದ ಸುಜ್ಯೋತಿ ಮತ್ತು ಕನ್ನಿಕೆ ಹೊಳೆಯ ಜೊತೆ ಸೇರಿ ಸಂಗಮದ ರೂಪದಲ್ಲಿ ಹರಿವ ಜಾಗ ಈ ಭಾಗಮಂಡಲದಲ್ಲಿದೆ. ಅದೇ ತ್ರಿವೇಣಿ ಸಂಗಮ. ಇಲ್ಲಿ ಮೂರು ಹೊಳೆಯ ಸಂಗಮವಾದರೂ... ಸುಜ್ಯೋತಿಯು ಅಂತರ್ವಾಹಿನಿಯಾಗಿರುವ ಕಾರಣ ಕಣ್ಣಿಗೆ ಕಾಣಿಸದು. ಈ ತ್ರಿವೇಣಿ ಸಂಗಮವು ಪಾಪನಾಶಿನಿಯಾಗಿರುವುದು. ಈ ಸಂಗಮದಲ್ಲಿ ಬ್ರಹ್ಮತೀರ್ಥ, ವಿಷ್ಣುತೀರ್ಥ, ಸ್ಕಂದತೀರ್ಥ, ಕಪಾಲಮೋಚನ ತೀರ್ಥ, ಶಾಂಜ ತೀರ್ಥ, ಅನಂತತೀರ್ಥ, ತಕ್ಷಕವನ ತೀರ್ಥ, ನಾಗತೀರ್ಥ, ಪ್ರಾತಾರತೀರ್ಥ ಇಷ್ಟೊಂದು ತೀರ್ಥ ಸೇರಿರುವುದೆನ್ನುವರು.

ತ್ರಿವೇಣಿ ಸಂಗಮದ ಹೊಳೆ ಕರೆಯಲ್ಲಿರುವ ಮಣ್ಣಿನ ದಿಬ್ಬವನ್ನು ಪ್ರೇತಾರಣ್ಯವೆಂದು ಕರೆಯುವರು. ಇಲ್ಲಿ ಪಿತೃಗಳಿಗೆ ಪಿಂಡ ತರ್ಪಣ, ಶ್ರಾದ್ಧ ಇಂತಹ ಕ್ರಿಯೆಗಳನ್ನು ಮಾಡುವರು. ತುಲಾ ಸಂಕ್ರಮಣ, ಮಹಾಶಿವರಾತ್ರಿ, ಮಹೋದಯ, ಹೀಗೆ ಇಂತಹ ಪುಣ್ಯ ದಿನಗಳಂದು ಇಲ್ಲಿ ಪಿಂಡ ಪ್ರಧಾನ ಮಾಡುವರು. ಭಾಗಮಂಡಲದ ತ್ರಿವೇಣಿ ಸಂಗಮದಲ್ಲಿ ಮಿಂದು, ಪಿಂಡ ಪ್ರಧಾನ ಮಾಡುವರು. ಭಾಗಮಂಡಲದ ತ್ರಿವೇಣಿ ಸಂಗಮದಲ್ಲಿ ಮಿಂದು, ಪಿಂಡ ಪ್ರಧಾನ ಮಾಡಿ, ಶ್ರೀ ಭಗಂಡೇಶ್ವರನ ದರ್ಶನ ಮಾಡಿ ಪೂಜಿಸಿ, ಅಲ್ಲಿಂದ ಕಾವೇರಿ ತೀರ್ಥ ಮೀಯಲು ಹೋಗುವುದು ಪದ್ಧತಿ.

ಪ್ರೇತಾರಣ್ಯದ ಉತ್ತರ ದಿಕ್ಕಿನ ಎತ್ತರದ ದಿಬ್ಬದಲ್ಲಿ ನಾಗನ ರೂಪದ ಕಲ್ಲಿದೆ. ಈ ಜಾಗದಲ್ಲಿ ತಕ್ಷಕನು ತನ್ನ ಕಿರೀಟ ಕುಂಡಲಗಳನ್ನು ತೆಗೆದಿಟ್ಟು ಕಾವೇರಿ ಮಾತೆಗೆ ನಮಿಸಿದರೆನ್ನುವರು. ಹೀಗಾಗಿ ಕ್ಷೇತ್ರದ ಮಹಿಮೆಯ ವೃದ್ಧಿ ಆಯಿತೆನ್ನುವರು.

ಈ ಕ್ಷೇತ್ರದಲ್ಲಿ ಪ್ರತಿವರ್ಷ ವಾರ್ಷಿಕೋತ್ಸವ ಜಾತ್ರೆ ಜರುಗುತ್ತದೆ. ರಾಜ್ಯದ ನಾನಾ ಭಾಗಗಳಿಂದ ಜನರು ನೆರವೇರಿ ದೇವರ ದರ್ಶನ ಪಡೆದು ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ. ಜಾತ್ರೆ ಎಂದ ಮೇಲೆ ವ್ಯಾಪಾರದ ಭರಾಟೆ ಜೋರಾಗಿರುವಂತೆ ಇಲ್ಲೂ ಈ ಸಮಯದಲ್ಲಿ ಹಣ್ಣು ಕಾಯಿ ಹೂವಿನ ವ್ಯಾಪಾರ ಜೋರಾಗಿರುತ್ತದೆ. ಅತಿ ಹೆಚ್ಚು ಜನ ಸೇರುವುದರಿಂದ ಶುಚಿತ್ವದ ಅಭಾವ ಉಂಟಾಗಿ ನೀರು ಮಲೀನವಾಗುತ್ತದೆ. ಪ್ಲಾಸ್ಟಿಕ್ ಕಸ ಕಡ್ಡಿ ನದಿ ಸೇರಿ ಮಲೀನವಾಗುತ್ತದೆ. ರೋಗರುಜಿನ ಉಂಟಾಗುತ್ತದೆ. ಶುಚಿತ್ವದ ಕಡೆ ಅಲ್ಲಿನ ಸ್ಥಳೀಯ ಸರ್ಕಾರ ಎಲ್ಲಾ ಯಾತ್ರಿಕರು ನಿಗಾವಹಿಸುವುದು ಒಳಿತು.

### ಕಾವೇರಿ ಸಂಕ್ರಮಣ ಜಾತ್ರೆ

ತುಲಾ ಸಂಕ್ರಮಣ ಅಥವಾ ಕಾವೇರಿ ಚಂಗ್ರಾದಿ ಕೊಡವರ ಪ್ರಮುಖ ಹಬ್ಬ ಹಾಗೂ ಜಾತ್ರೆಯಾಗಿದೆ. ಈ ಜಾತ್ರೆಯು ಅಕ್ಟೋಬರ್ ತಿಂಗಳ ೧೬ ಅಥವಾ ೧೭ನೇ ತಾರೀಖಿನಂದು ನಡೆಯುತ್ತದೆ. ಪುರಾಣದ ಕತೆಯ ಪ್ರಕಾರ ಕಾವೇರಿಯು ಲೋಕ ಕಲ್ಯಾಣಕ್ಕಾಗಿ ಹರಿದು ಹೋಗುವಾಗ ಆಕೆಯನ್ನು ಕುಲದೇವತೆಯಾಗಿ ಪೂಜಿಸುವ ಕೊಡವರು ತಡೆದು ಬೇಡಿಕೊಂಡಾಗ ಕಾವೇರಿಯು ಪ್ರತಿ ವರ್ಷ ತುಲಾ ಸಂಕ್ರಾಂತಿಯ ಕಾಲದಲ್ಲಿ ತಲಕಾವೇರಿಯಲ್ಲಿಯ ಪವಿತ್ರ ಕುಂಡಿಕೆಯಲ್ಲಿ ತಾನು ತೀರ್ಥ ರೂಪದಲ್ಲಿ ಆವಿರ್ಭವಿಸಿ ಕೊಡವರಿಗೆ ಹಿತವನ್ನು ಉಂಟು ಮಾಡುವ ಭರವಸೆ ನೀಡುತ್ತಾಳೆ. ಈ ತೀರ್ಥೋದ್ಭವ ಸಮಯವನ್ನೆ ಕಾವೇರಿ ಸಂಕ್ರಮಣವೆಂದು ಆಚರಿಸುತ್ತಾರೆ. ಇದು ಎರಡು ದಿನಗಳ ಹಬ್ಬ ಹಾಗೂ ಜಾತ್ರೆಯಾಗಿದ್ದು ಮೊದಲನೆ ದಿನ "ಬೊತ್" ಎಂದರೆ ಗುರುತು ಹಾಕುವ ಸಂಪ್ರದಾಯ ಆಚರಣೆಯಲ್ಲಿದೆ. ಈ ದಿನ ಪ್ರತಿ ಮನೆಯವರು ಮುಂಜಾನೆ ಎದ್ದು ತಮ್ಮ ಗದ್ದೆ, ಬಾವಿ, ಕೆರೆ ದನದ ಕೊಟ್ಟಿಗೆ ಗೊಬ್ಬರ, ಗುಂಡಿ, ಭೂಮಿ, ತೋಟಗಳಿಗೆ ಪೊಂಗ ಎನ್ನುವ ಮರದ ಚಿಕ್ಕ ಕೋಲುಗಳನ್ನು ಚುಚ್ಚಿ ಅದರ ತುದಿ ಒಡೆದು ಮಧ್ಯದಲ್ಲಿ ಕೈಬಳ ಎಂಬ ಹಸಿರು ಬಳ್ಳಿಯನ್ನು

ಸಿಕ್ಕಿಸುತ್ತಾರೆ. ಕೆಲವು ಕಡೆ ಬಿದಿರು ದಬ್ಬೆ, ಕಾಂಡ ಕೊಂಬನ್ನು ಚುಚ್ಚುತ್ತಾರೆ. ಇದನ್ನು ಹೂಗಳಿಂದ ಅಲಂಕರಿಸಿ ಗದ್ದೆಗಳಿಗೆ ಚುಚ್ಚುತ್ತಾರೆ. ಪ್ರತಿ ಜಮೀನಿಗೂ ಕಾವೇರಿಯ ಭಕ್ತರು ಹಿಡುವಳಿದಾರರಾಗಿ ಅದರ ವ್ಯವಸಾಯವನ್ನು ಯೋಗ್ಯ ರೀತಿಯಲ್ಲಿ ಮಾಡಿರುವರೆಂಬ ಸಂಕೇತವಿದ್ದು ಕಾವೇರಿ ಇದನ್ನು ಸಂದರ್ಶಿಸಿ ನೋಡುವಳೆಂಬ ನಂಬಿಕೆ ಅವರದು.

ಬ್ರಹ್ಮಗಿರಿಯ ವ್ಯಾಪ್ತಿಯ ತಲಕಾವೇರಿಯಲ್ಲಿ ಅಕ್ಟೋಬರ್‌ನಲ್ಲಿ ತುಲಾ ಲಗ್ನದಲ್ಲಿ ನಿರ್ದಿಷ್ಟ ಸಮಯದಲ್ಲಿ ಕುಂಡಿಕೆಯಲ್ಲಿ ಕಾವೇರಿ ತೀರ್ಥ ಉದ್ಭವವಾಗುತ್ತದೆ. ಇಲ್ಲಿ ಒಂದು ಕೊಳ ಇದೆ. ಇಲ್ಲಿ ಜನರು ಪುಣ್ಯಸ್ನಾನ ಮಾಡಿ, ತೀರ್ಥ ಸೇವಿಸಿ, ತಮ್ಮ ಮನೆಗಳಿಗೂ ತೀರ್ಥ ತಂದು ವರ್ಷವಿಡೀ ಅದನ್ನು ಪೂಜಿಸುತ್ತಾರೆ. ಮರುದಿನ ಕಾವೇರಿ ಮಾತೆ ಪ್ರತಿ ಮನೆಗೂ ಬರುವಳೆಂದು ನಂಬಿ ಮನೆಗಳನ್ನು ಶುಚಿಗೊಳಿಸಿ ಅಲಂಕರಿಸುತ್ತಾರೆ. ಎಲ್ಲರೂ ಸ್ನಾನ ಮಾಡಿ ಕಣಿ ಪೂಜೆಗೆ ಅಣಿಗೊಳಿಸುತ್ತಾರೆ. ತಳಿಯಕ್ಕಿ ಬೊಳಕ್ ಮಾಡಿ ಅದರಲ್ಲಿ ರೇಷ್ಮೆ ವಸ್ತ್ರ ಒಂದನ್ನು ತ್ರಿಕೋನಾಕೃತಿಯಲ್ಲಿ ಮಡಚಿಟ್ಟು ಅದರ ಸುತ್ತಾ ಹೂಗಳನ್ನು ಹಾಕಿ ಅದರ ಮೇಲೆ ಸೌತೆಕಾಯಿ ಬದನೆಕಾಯಿ ಇಲ್ಲವೇ ಯಾವುದೇ ತರಕಾರಿಯನ್ನು ನಿಲ್ಲಿಸಿ ಅದಕ್ಕೆ ಕೈ ತಲೆಗಳನ್ನು ಮಾಡಿ ಹೂವಿನಿಂದ ರಚಿಸಿದ ಕಾವೇರಿ ಮೂರ್ತಿಯನ್ನು ಇಡುತ್ತಾರೆ. ಅದರ ಸುತ್ತ ಚಿನ್ನದ ಆಭರಣಗಳನ್ನಿಟ್ಟು ನೆಲ್ಲಕ್ಕಿ ನಡುಬಾಡೆಯಲ್ಲಿ ಇಡುತ್ತಾರೆ. ಅದನ್ನು ಪೂಜಿಸಿ ಅದಕ್ಕೆ ಅಕ್ಕಿ ಪ್ರೋಕ್ಷಿಸಿ ಆಶೀರ್ವಾದ ಪಡೆಯುತ್ತಾರೆ. ಇದಕ್ಕೆ ಕಣಿ ಪೂಜೆ ಎನ್ನುತ್ತಾರೆ. ಕಿರಿಯರು ಹಿರಿಯರ ಪಾದ ಮುಟ್ಟಿ ನಮಸ್ಕರಿಸುತ್ತಾರೆ.

ಕಾವೇರಿಯ ತೀರ್ಥೋದ್ಭವ ನೋಡಲು ಹಿಂದಿನ ದಿನದಿಂದಲೇ ರಾಜ್ಯದ ನಾನಾ ಭಾಗಗಳಿಂದ ಜನರು ಬರುತ್ತಾರೆ. ರಾತ್ರಿಯಿಡಿ ಜಾತ್ರೆಯಲ್ಲಿ ಅಂಗಡಿ ಮುಂಗಟ್ಟುಗಳು ತೆರೆದಿದ್ದು, ಜಾತ್ರೆಗೆ ಮತ್ತಷ್ಟು ಮೆರುಗು ಉಂಟಾಗುತ್ತದೆ. ಈ ಕಾವೇರಿ ಸಂಕ್ರಮಣದ ದಿನ ಜನಮರುಳೋ ಜಾತ್ರೆಮರುಳೋ ಎಂಬ ಗಾದೆ ಮಾತಿಗೆ ಸಾಕ್ಷ್ಯಾಧಾರದಂತಿರುತ್ತದೆ.

### ಶ್ರೀ ರಾಜರಾಜೇಶ್ವರಿ ಜಾತ್ರೆ

ಶ್ರೀ ರಾಜರಾಜೇಶ್ವರಿ ಜಾತ್ರೆಯು ಕೊಡಗಿನ ಪ್ರಮುಖ ಜಾತ್ರೆಗಳಲ್ಲಿ ಒಂದಾಗಿದೆ. ಈ ಜಾತ್ರೆಯು ಪ್ರತಿವರ್ಷ ಮಾರ್ಚ್, ಏಪ್ರಿಲ್ ಹಾಗೂ ನವೆಂಬರ್ ಮಾಹೆಯಲ್ಲಿ ಮೂರು ಬಾರಿ ಜಾತ್ರೆ ನಡೆಯುತ್ತದೆ. ಶ್ರೀ ರಾಜರಾಜೇಶ್ವರಿ ತಾಯಿಯು ನೆಲೆನಿಂತಿರುವ ಕ್ಷೇತ್ರ ಮಡಿಕೇರಿ ಸಮೀಪವಿರುವ ಕರ್ಣಾಂಗೇರಿ ಎಂಬ ಕ್ಷೇತ್ರದಲ್ಲಿ ಜಾತ್ರೆ ಜರುಗುತ್ತದೆ.

ಕರ್ಣಾಂಗೇರಿ ಎಂಬ ಪ್ರದೇಶವು ಪೂರ್ವದಲ್ಲಿ ಲಿಂಗರಾಜ ಮತ್ತು ವೀರರಾಜ ಎಂಬ ರಾಜರು ಈ ಪ್ರದೇಶದ ವಿಭಾಗೀಯ ಪ್ರಾಂತ್ಯಾಧಿಕಾರಿಗಳಾಗಿ ಅಧಿಕಾರವನ್ನು ನಿರ್ವಹಿಸುತ್ತಿದ್ದ ಸಮಯದಲ್ಲಿ ವೀರರಾಜನು ಈ ಪ್ರದೇಶಕ್ಕೆ ಒಡೆಯನಾಗಿದ್ದನು. ಇವನು ಶಿವನ ಆರಾಧಕನಾಗಿದ್ದು ಈ ಪ್ರದೇಶವು ಶಿವನ ಆರಾಧನ ಕೇಂದ್ರವಾಗಿದ್ದು ಈ ಪ್ರದೇಶಕ್ಕೆ ಕರ್ಣಾಂಗೇರಿ ಎಂದು ಹೆಸರು

ಬರುವುದಕ್ಕೆ ಕಾರಣವಾಯಿತು ಎಂದು ಅಲ್ಲಿ ನೆಲೆಗೊಂಡಿದ್ದ ಪುರೋಹಿತ ಬ್ರಾಹ್ಮಣ ವರ್ಗವು ವ್ಯಾಖ್ಯಾನಿಸಿದೆ.

ಈ ಕ್ಷೇತ್ರದ ದೇವಾಲಯದ ಗರ್ಭಗುಡಿಯಲ್ಲಿ ಪ್ರಮುಖ ಮೂರು ದೇವರುಗಳಿದ್ದು ಮೂರು ದೇವರುಗಳಿಗು ಕಳಸವನ್ನು ಸ್ಥಾಪನೆ ಮಾಡುತ್ತಾರೆ. ಮಧ್ಯಕಳಸವು ತಾಯಿ ರಾಜರಾಜೇಶ್ವರಿಯಾದರೆ ಬಲಭಾಗದಲ್ಲಿ ವೆಂಕಟರಮಣರ ಎಡಭಾಗದಲ್ಲಿ ಶ್ರೀಕಂಠೇಶ್ವರನ ಕಳಸವು ಪ್ರಧಾನವಾಗಿರುತ್ತದೆ.

ಶ್ರೀ ರಾಜರಾಜೇಶ್ವರಿಯ ಕ್ಷೇತ್ರದಲ್ಲಿ ವರ್ಷಕ್ಕೆ ಮೂರು ಉತ್ಸವವು ನಡೆಯುತ್ತದೆ. ಅದರ ಪ್ರಕಾರವೇ ಯುಗಾದಿಯಾದ ನಂತರ ಏಪ್ರಿಲ್‌ನಲ್ಲಿ ಶ್ರೀ ಮಾನ್ ವೆಂಕಟರಮಣ ಸ್ವಾಮಿ ಜಾತ್ರೆ ಪ್ರಾರಂಭವಾಗುತ್ತದೆ. ೮ ದಿನ ಇರುವಂತೆ ಶನಿವಾರದಂದು ಅಂದು ಮನೆಯವರಲ್ಲಿ ಸೇರಿಸಿಕೊಂಡು ದೇವರ ಗರ್ಭಗುಡಿಯನ್ನು ತೊಳೆದು ಅಂದು ಬೆಳಿಗ್ಗೆ ಒಂಭತ್ತು ಗಂಟೆಯ ಒಳಗೆ ಈ ಕೆಲಸವು ಪ್ರಾರಂಭವಾಗುತ್ತದೆ. ತಾಯಿಯಿಂದ ಅಪ್ಪಣೆ ಪಡೆದುಕೊಂಡಿದ್ದು ಅಂದು ದೇವಾಲಯದ ಮನೆಯವರೇ ಆದ ಯಾವುದಾದರು ಒಬ್ಬ ವ್ಯಕ್ತಿಯು ಅಂದರೆ ಅವಿವಾಹಿತ ವ್ಯಕ್ತಿಯು ದೇವಾಲಯದ ಪೂಜೆ ಆದ ನಂತರ ಮೂರು ಬಾಳೆ ಗೊನೆಯನ್ನು ಕಡಿಯುವುದು. ಈ ಗೊನೆಯು ಯಾವುದೇ ಕಾರಣಕ್ಕೂ ಮಚ್ಚೇಯಾಗಬಾರದು. ಈ ಮೂರು ಗೊನೆಯು ವೆಂಕಟರಮಣ, ದೇವಿ ಮತ್ತು ಶಿವನ ಸಂಕೇತವಾಗಿರುತ್ತದೆ.

ಈ ರೀತಿಯಾಗಿ ಕಡಿದ ಬಾಳೆಗೊನೆಯನ್ನು ದೇವಾಲಯದ ಗರ್ಭಗುಡಿಯ ಮುಂದೆ ಇಟ್ಟು ಧೂಪ ದೀಪದ ಆರತಿ ಮಾಡಿ ನಂತರ ಮಹಾಮಂಗಳಾರತಿ ಮಾಡಿ ಈ ಗೊನೆಗಳನ್ನು ಕಟ್ಟುತಾರೆ. ಈ ಸಮಯದಲ್ಲಿ ದೇವಾಲಯದಲ್ಲಿ ನೈವೇದ್ಯ ಪೂಜೆಯು ಮತ್ತು ಮೂರು ದೇವರಿಗು ಕಳಸಕಟ್ಟುತ್ತಾರೆ. ಈ ಎಲ್ಲಾ ಕಾರ್ಯವಾದ ಮೇಲೆ ದಿನ ನಿತ್ಯ ಸಾಮಾನ್ಯವಾಗಿ ಪೂಜೆಯು ನಡೆಯುತ್ತಿರುತ್ತದೆ. ಈ ಗೊನೆಗೆ ದಿನದ ಎರಡು ಸಮಯದಲ್ಲಿ ಧೂಪ ದೀಪದ ಆರತಿಯನ್ನು ಮಾಡುತ್ತಾರೆ.

ಹೀಗೆ ಏಳು ದಿನವು ಕಳೆಯುತ್ತದೆ. ಅಂದು ರಾತ್ರಿಯು ಅಂದರೆ ಶುಕ್ರವಾರದಂದು ದೇವಾಲಯದ ಶೃಂಗಾರವನ್ನು ಭಕ್ತಾದಿಗಳಿಂದ ಅಂದರೆ ದೇವಾಲಯದ ಸುತ್ತ ಹೂವಿನಿಂದ ಅಲಂಕಾರ, ದೀಪಾಲಂಕಾರ ಮಾಡಿಕೊಂಡು ಅಂದು ರಾತ್ರಿಯನ್ನು ವಿಜೃಂಭಣೆಯಿಂದ ಕಳೆಯುತ್ತಾರೆ. ಅದರ ಮೂರನೆ ದಿನವು ಅಂದರೆ ಶನಿವಾರದ ಬೆಳಿಗ್ಗೆ ದೇವಾಲಯದ ಮನೆಯವರೆಲ್ಲಾ ಶ್ರದ್ಧೆ ಭಕ್ತಿಯಿಂದ ಇರುತ್ತಾರೆ. ಅಂದರೆ ಅಂದು ಪ್ರಧಾನ ಪೂಜಾರಿ ಮತ್ತು ಗೊನೆ ಕಡಿದ (ಭಕ್ತನು) ಪೂಜಾರಿಯು ಉಪವಾಸ ಇರುತ್ತಾರೆ. ಅಂದು ಬೆಳಿಗ್ಗೆ ೯ ಗಂಟೆಗೆ ಸರಿಯಾಗಿ ಪೂಜೆಯು ಪ್ರಾರಂಭವಾಗುತ್ತದೆ. ಈ ಮೊದಲು ದೇವಾಲಯದ ಪ್ರಮುಖ ದೇವರುಗಳಿಗೆ ಕಳಸ ಪ್ರಧಾನ ಮಾಡುವುದು ದೇವಾಲಯದ ಪ್ರಮುಖ ದೇವರುಗಳಿಗೆ ಕಳಸ ಪ್ರಧಾನ ಮಾಡುವುದು ಸಾಮಾನ್ಯವಾದರೆ ಅಂದು (ಶನಿವಾರ) ದೇವಾಲಯದ ಎಲ್ಲಾ ಶಕ್ತಿ ದೇವರುಗಳಿಗೆ ಕಳಸವನ್ನು ನಿರ್ಮಿಸುತ್ತಾರೆ. ಈ ನಡುವೆಯು ದೇವಾಲಯದ

ಗರ್ಭಗುಡಿಯಲ್ಲಿರುವ ಪ್ರಮುಖ ಮೂರು ದೇವರುಗಳಿಗೆ ಬೆಳ್ಳಿಯ ಕವಚವನ್ನು ಧರಿಸುತ್ತಾರೆ. ಈ ಸಮಯಕ್ಕೆ ಹೊಂದಿಕೊಂಡಂತೆ ಹೂವಿನ ಅಲಂಕಾರವನ್ನು ಗರ್ಭಗುಡಿಯಲ್ಲಿ ಅಲಂಕರಿಸಿದ್ದು, ಈ ದೇವಾಲಯದ ಹೊರಗಡೆ ಅಂದರೆ ಸುಖನಾಸದ ಹತ್ತಿರ ನಿಂತು ನೋಡುವವರ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತದೆ. ಹೀಗೆ ಪೂಜೆಯನ್ನು ಪ್ರಾರಂಭಿಸಿದ ಮೇಲೆ ಕಟ್ಟಿರುವ ಗೊನೆಯನ್ನು ಗರ್ಭಗುಡಿಯ ದೇವರುಗಳ ಮುಂದೆ ತಂದು ಬಿಚ್ಚುತ್ತಾರೆ. ಗೊನೆಯ ಮತ್ತು ದೇವರ ವೈಶಿಷ್ಟವೆಂದು ಹೇಳುವ ಅಂಶವೆಂದರೆ ಗೊನೆಗಳಲ್ಲಿ ಯಾವುದಾದರೂ ಒಂದರಲ್ಲಿ ೧ ರಿಂದ ೩ ಹಣ್ಣಾಗಿರುವುದು ಒಂದು ಗಮನಾರ್ಹವಾದ ಸಂಗತಿ. ಈ ರೀತಿಯಾಗಿ ಹಣ್ಣಗಿರುವುದನ್ನು ತೆಗೆದುಕೊಂಡು ದೇವಾಲಯದ ಪೂಜೆಗೆ ಸಜ್ಜು ಮಾಡುತ್ತಾರೆ. ನಂತರ ಮಂಗಳಾರತಿಯನ್ನು ಮಾಡುತ್ತಾರೆ. ಈ ಸಮಯಕ್ಕೆ ಹೊಂದಿಕೊಂಡಂತೆ ಎತ್ತ ನೋಡಿದರತ್ತ ಸುಂದರವಾದ ದೃಶ್ಯ ಕಾಣುತ್ತದೆ.

ಸಂಪಿನ ಮಧ್ಯೆ ದೇವಾಲಯವು ಪುಷ್ಪಗಳಿಂದ ಆವೃತವಾಗಿದ್ದು ಅಲಲ್ಲಿ ಸಂಗೀತದ ಔತಣ, ವಾದ್ಯಗಳಿಂದ ಸುಮಧುರ ಸಂಗೀತ ಹೀಗೆ ಜಾತ್ರೆಯ ವೈಶಿಷ್ಟವು ಎದ್ದು ಕಂಡರೆ, ಮತ್ತೊಂದು ಕಡೆ ಭಕ್ತರಿಂದ ನೈವೇದ್ಯ ಮತ್ತು ಅನ್ನದಾನ ಕಾರ್ಯಕ್ರಮವು ನಡೆಯುತ್ತಿರುತ್ತದೆ. ಅಂದು ರಾತ್ರಿ ಸಮೀಪಿಸುತ್ತಿದಂತೆ ದೇವರ ಗುಡಿಯಲ್ಲಿ ಪಂಚಕಜ್ಜಾಯ ನೈವೇದ್ಯ, ಪ್ರಸಾದಯಡೆಯಾಗಿ ಇಟ್ಟು ಪೂಜೆ ನಡೆಯುತ್ತದೆ.

ಈ ದಿನ ಅಲ್ಲಿನ ಪ್ರಧಾನ ಪೂಜಾರಿಯ ಮೈ ಏರಿದ ತಾಯಿಯು ಅವರ ಮನಸ್ಸಿಗೆ ಬಂದ ರೀತಿಯಲ್ಲಿ ಸೇವೆಯಿಂದ ಹೊಡೆದುಕೊಂಡು ಭಕ್ತರಿಂದ ಹೂಮಾಲೆ ಪಡೆದು ತಾಯಿಯು ಮತ್ತೆ ಎಡ ಪಾರ್ಶ್ವಕ್ಕೆ ಬಂದು ಮತ್ತೆ ಸೇವೆಯಿಂದ ಹೊಡೆದುಕೊಂಡು ನಂತರ ದೇವಾಸ್ಥಾನದ ಬಲಗಡೆಯಿಂದ ಪ್ರದಕ್ಷಿಣೆಹಾಕುತ್ತಾರೆ. ಈ ನಡುವೆ ದೇವಾಲಯದ ಹಿಂದೇ ಇರುವ ದಿವಂಗತರ ಸಮಾಧಿಗಳಿಗೆ ಹೂವು ಮಾಲೆ ಹಾಕಿಸಿ ನಂತರ ಮುಂದೆ ಸಾಗುತ್ತಾರೆ. ಈ ತಾಯಿಯು ಮುಂದೆ ಹಲವಾರು ದೇವತೆಗಳು ಕುಣಿದು ನರ್ತಿಸಿದರೆ, ಕೆಲವಾರು ಭೂತ ಪ್ರೇತಗಳು ಚೀರಾಡುತ್ತವೆ. ತಾಯಿಯ ಮುಂದೆ ಉರುಳು ಸೇವೆ ಹೀಗೆ ವಿವಿಧ ಭಂಗಿ ಆವೇಶ, ವೇಶಗಳು ನಡೆಯುತ್ತದೆ. ತಾಯಿಯ ಮೈಯೆಲ್ಲವು ಭಕ್ತರು ಯುಗೆ ಎನ್ನುವ ಸದ್ದಿಗೆ ಜಿಗಿದೆದ್ದು ನೆಗೆಯಲು ಪ್ರಯತ್ನಿಸುತ್ತಾ ತನ್ನ ಸಂತೋಷವನ್ನು ವ್ಯಕ್ತಪಡಿಸುತ್ತಾರೆ. ಈ ಸಮಯದಲ್ಲಿ ವಾದ್ಯಗೋಷ್ಠಿಯು ತಾಯಿ ಕುಣಿತಕ್ಕೆ ಅನುಗುಣವಾಗಿರುತ್ತದೆ. ನಂತರ ತಾಯಿಯು ಬಂದು ಭಕ್ತರಿಗೆ ದೇವಾಲಯದ ಎಡ ಪಾರ್ಶ್ವದ ಮಂಟಪದ ಮುಂದೆ ಕುಳಿತು ಅಭಯ ನೀಡಿ ಪ್ರಸಾದ ವಿನಿಯೋಗಿಸುತ್ತಾರೆ. ಈ ನಡುವೆ ಪಲ್ಲಕ್ಕಿಯನ್ನು ನಿರ್ಮಿಸಿ ಗರ್ಭಗುಡಿಯ ದೇವರನ್ನು ( ಉತ್ಸವ ಮೂರ್ತಿ) ಈ ಪಲ್ಲಕ್ಕಿಯಲ್ಲಿ ಕೂರಿಸಿ ಪೂಜೆಸಲ್ಲಿಸುತ್ತಾರೆ. ಪೂಜೆಯೆಲ್ಲವು ಮುಗಿದ ನಂತರ ಈ ಉತ್ಸವ ಮೂರ್ತಿಯನ್ನು ಗರ್ಭಗುಡಿಗೆ ತಂದು ಮಂಗಳಾರತಿಯನ್ನು ಮಾಡುತ್ತಾರೆ. ಈ ಪಲ್ಲಕ್ಕಿಯನ್ನು ದೇವಾಲಯದ ಬಲಭಾಗದಲ್ಲಿಡುತ್ತಾರೆ.

ಅಂದು ಭಾನುವಾರ ಕಟ್ಟಿದ ಕಳಸವನ್ನು ತೆಗೆದು ತೀರ್ಥ ಪ್ರಸಾದವನ್ನು ಭಕ್ತರಿಗೆ ನೀಡುತ್ತಾರೆ. ಈ ರೀತಿಯಾಗಿ ಸ್ವಾಮಿ ವೆಂಕಟರಮಣ ಸ್ವಾಮಿಯ ಜಾತ್ರೆಯು ಮುಗಿದು, ಮುಂದೆ ಯಥಾ ಪ್ರಕಾರವಾಗಿ ಈ ದೇವಾಲಯದ ಕ್ರಿಯೆಯು ನಡೆಯುತ್ತಿರುತ್ತದೆ.

ಇದಾದ ನಂತರ ವರ್ಷದ ಎರಡನೇ ಜಾತ್ರೆಯೇ ಮಾತಾ ರಾಜರಾಜೇಶ್ವರಿಯ ಜಾತ್ರೆ ಮೇ ತಿಂಗಳ ಮೊದಲವಾರ ವೆಂಕಟರಮಣ ಜಾತ್ರೆಯು ನಡೆದ ಮಾದರಿಯಲ್ಲಿ ಈ ಜಾತ್ರೆಯು ಜರುಗುತ್ತದೆ. ನಂತರ ನವೆಂಬರ್ ಮಾಹೆಯಲ್ಲಿ ಶ್ರೀ ಕಂಠೇಶ್ವರನ ಜಾತ್ರೆ ಜರುಗುತ್ತದೆ. ಹೀಗೆ ಈ ಕ್ಷೇತ್ರದಲ್ಲಿ ವರ್ಷಕ್ಕೆ ಮೂರು ಜಾತ್ರೆಗಳು ನಡೆಯುತ್ತಿದ್ದು ಇಲ್ಲಿನ ಜನಕ್ಕೆ ಬಹಳ ಪ್ರಸಿದ್ಧವಾದ ಜಾತ್ರೆಯಾಗಿ ಪರಿಣಮಿಸಿದೆ.

**ಪಾಲೂರು ಶ್ರೀ ಮಹಾಲಿಂಗೇಶ್ವರ ಜಾತ್ರೆ**

**ಮಡಿಕೇರಿಯಿಂದ** ಇಪ್ಪತ್ತೆರಡು ಕಿ.ಮೀ. ದೂರದಲ್ಲಿರುವ ಕುಯ್ಯಂಗೇರಿ ನಾಡಿನ ಪಾಲೂರು ಗ್ರಾಮದಲ್ಲಿ ಈ ದೇವನೆಲೆ ಇರುವುದು. ಹಿಂದೆ ಹನ್ನೊಂದು ಗ್ರಾಮಗಳಿಗೆ ಸೇರಿತ್ತೆನ್ನಲಾಗುವ ಈ ದೇವಸ್ಥಾನವು ಈಗ ಸುತ್ತಮುತ್ತಲಿನ ಒಂಬತ್ತು ಗ್ರಾಮಗಳಿಗೆ ಸೇರಿದೆ.

ಸಾವಿರಾರು ವರ್ಷಗಳ ಇತಿಹಾಸವಿರುವ ಈ ದೇವಾಲಯವು ಬಹಳ ಆಕರ್ಷಣೀಯವಾಗಿದೆ. ಚಿನ್ನದ ಶಂಖದಿಂದ ಹಟ್ಟಿದ ಏಳು ದೇವತೆಗಳಲ್ಲಿ ಈ ಪಾಲೂರು ಮಹಾಲಿಂಗೇಶ್ವರ ದೇವರು ಒಬ್ಬರು. ಕೊಡಗಿನ ಸುಂದರ ಪ್ರಕೃತಿಯ ಮಧ್ಯದಲ್ಲಿ, ಕಾವೇರಿ ಮಾತೆಯ ಮಡಿಲಿನಲ್ಲಿ ನೆಲೆನಿಂತಿರುವ ಈ ದೇವರ ದೇವಸ್ಥಾನವೂ ಅಷ್ಟೇ ಸುಂದರವಾಗಿರುವುದು.

ಕೇರಳದಿಂದ ಆಗಮಿಸಿ ಪಾಡಿ ಶ್ರೀ ಈಶ್ವರ ಇಗ್ಗುತಪ್ಪ ದೇವರೊಂದಿಗೆ ಆಗಮಿಸಿದ ಶ್ರೀ ಮಹಾಲಿಂಗೇಶ್ವರ ದೇವರು ಮಲ್ಮಾ ಎಂಬ ಪ್ರದೇಶದಿಂದ ತನ್ನ ಬಿಲ್ಲಿಗೆ ಬಾಣ ಹೂಡಿ ಬಿಟ್ಟಾಗ ಅದು ಒಂದು ಪ್ರದೇಶಕ್ಕೆ ಹೋಗಿ ಚುಚ್ಚಿಕೊಂಡಿತು. ಚುಚ್ಚಿದ ಸ್ಥಳದಿಂದ ಹಾಲು ಉಕ್ಕಿ ಬಂದಿತು. ಕೊಡವ ಭಾಷೆಯಲ್ಲಿ ಪಾಲ್ ಎಂದರೆ ಹಾಲು ಎಂದರ್ಥ. ಹಾಲು ಉಕ್ಕಿದ ಈ ಸ್ಥಳವನ್ನು ಪಾಲೂರೆಂದು ಗುರುತಿಸಲಾಯಿತು. ಬಾಣ ಚುಚ್ಚಿದ ಈ ಸ್ಥಳದಲ್ಲೇ ಶ್ರೀ ಮಹಾಲಿಂಗೇಶ್ವರ ದೇವರು ನೆಲೆನಿಂತರು. ಪುರಾತನ ಕಾಲದಲ್ಲಿ ಅಗಸ್ತ್ಯಮುನಿಯು ಇಲ್ಲಿ ಲಿಂಗ ಪ್ರತಿಷ್ಠಾಪಿಸಿದರೆನ್ನಲಾಗುವದು.

ಈ ದೇವಾಲಯವು ಪಶ್ಚಿಮ ದಿಕ್ಕಿಗೆ ಮುಖ ಮಾಡಿರುವುದು. ಒಳಾಂಗಣದಲ್ಲಿ ಈಶಾನ್ಯ ದಿಕ್ಕಿನಲ್ಲಿ ಬಾವಿ ಇರುವುದು. ಗರ್ಭಗುಡಿಯಲ್ಲಿ ಈಶ್ವರನ ಲಿಂಗದ ಜೊತೆಯಲ್ಲಿ ಶಿವ ಮತ್ತು ಪಾರ್ವತಿಯ ಎರಡು ವಿಗ್ರಹಗಳಿರುವುದು. ಒಳಾಂಗಣದಲ್ಲಿ ಶ್ರೀ ಗಣಪತಿ ಹಾಗು ಶ್ರೀ ಅಯ್ಯಪ್ಪ ಮತ್ತು ನವಗ್ರಹ ಗುಡಿಯಿರುವುದು. ಹೊರಾಂಗಣದಲ್ಲಿ ನಾಗದೇವರ ಸ್ಥಾನವಿರುವುದು. ಮತ್ತು ಒಂದು ಆಲದ ಮರ ಕಾಣಿಸುವುದು.

ಹಿಂದಿನ ಕಾಲದಲ್ಲಿ ಅರ್ಚಕರು ನಿತ್ಯವೂ ಮುಂಜಾನೆ ಹರಿಶ್ಚಂದ್ರ ದೇವರನ್ನು ಪೂಜಿಸಿ ಆ ನಂತರ ಸಮೀಪದಲ್ಲಿರುವ ಕಾವೇರಿ ಹೊಳೆಯಿಂದ ನೀರು ಹೊತ್ತು ನಡೆದು ಪಾಲೂರು ಶ್ರೀ ಮಹಾಲಿಂಗೇಶ್ವರ ದೇವರಿಗೆ ಪೂಜೆ ಸಲ್ಲಿಸುತ್ತಿದ್ದರು. ಕಾಲಕ್ರಮೇಣ ಈ ಪದ್ಧತಿಯು ಬದಲಾಗಿ ಎರಡೂ ದೇವಾಲಯಕ್ಕೆ ಬೇರೆ ಬೇರೆ ಅರ್ಚಕರನ್ನು ನೇಮಿಸಲಾಯಿತು. ಆ ಮೇಲಿಂದ ದೇವಸ್ಥಾನದಲ್ಲೇ ಬಾವಿ ತೋಡಿಸಿ, ಬಾವಿ ನೀರನ್ನು ಪೂಜೆಗೆ ಉಪಯೋಗಿಸಿಕೊಂಡು ಹೊಳೆಯಿಂದ ನೀರು ಹೊತ್ತು ತರುವುದನ್ನು ನಿಲ್ಲಿಸಲಾಯಿತು.

ಈ ದೇವಸ್ಥಾನಕ್ಕೆ ಹತ್ತು ಎಕರೆಯಷ್ಟು ದೇವರ ಬನ ಹಾಗು ಬಯಲು ಪ್ರದೇಶವಿರುವುದು. ದೇವರ ಬನದಲ್ಲಿರುವ ಒಂದು ಬೃಹತ್ತಾದ ಬಂಡೆಕಲ್ಲಿನ ಸಮೀಪದಲ್ಲಿ ನಾಗದೇವರ ಶಿಲೆಯಿರುವುದು. ಬಂಡೆಯ ಕೆಳಭಾಗದಲ್ಲಿ ಐದು ಶಿಲೆಗಳಿಂದ ಕೂಡಿದ ಪಂಚಲಿಂಗೇಶ್ವರ ದೇವರ ಸ್ಥಾನವಿರುವುದು.

ರಾಜರ ಆಳ್ವಿಕೆಯ ಕಾಲದಲ್ಲಿ ಈ ದೇವಾಲಯವನ್ನು ನಿಪುಣ ಶಿಲ್ಪಿಯ ಮೇಲ್ವಿಚಾರಣೆಯಲ್ಲಿ ಬಹಳ ಅದ್ಭುತವಾಗಿ ಕಟ್ಟಲಾಯಿತು. ಈ ದೇವಾಲಯದಲ್ಲಿರುವ ಶಿಲಾಶಾಸನದಲ್ಲಿ ಪಾಲಿ ಸಂಸ್ಕೃತ ಭಾಷೆಯಲ್ಲಿ ಕೆಲವು ವಿವರಗಳನ್ನು ಉಲ್ಲೇಖಿಸಲಾಗಿರುವುದು. ಆಗಿನ ಕಾಲದಲ್ಲಿ ಹದಿನೆಂಟು ರಾಜ್ಯದ ವರ್ತಕರು ಈ ಪಾಲೂರು ಮಹಾಲಿಂಗೇಶ್ವರ ದೇವಸ್ಥಾನಕ್ಕೆ ಕಪ್ಪಕಾಣಿಕೆ ಸಲ್ಲಿಸಬೇಕಾಗಿತ್ತು. ತಪ್ಪಿದವರಿಗೆ ಗೋಹತ್ಯೆ, ಬ್ರಾಹ್ಮಣ ಹತ್ಯೆಯಂತಹ ಮಹಾಪಾಪಗಳು ಸುತ್ತಿಕೊಳ್ಳುವುದೆಂದು ಹೇಳಲಾಗುತ್ತಿತ್ತು. ರಾಜರ ಆಳ್ವಿಕೆ ಮರೆಯಾದಂತೆ ಈ ಕುಲದವರನ್ನು ನೇಮಿಸಿ ಅವರಿಗೆ ಇರಲು ಸ್ಥಳಾವಕಾಶ ಮಾಡಿಕೊಟ್ಟು ಬದುಕಲು ಭೂಮಿಕಾಣಿಕೆ ಕೊಟ್ಟರು ಎನ್ನಲಾಗುವುದು.

**ಜಾತ್ರೆ**

ಪ್ರತಿವರ್ಷ ಏಪ್ರಿಲ್ ಹದಿಮೂರರಂದು ಪಂಚಲಿಂಗೇಶ್ವರ ದೇವರಿಗೆ ಪೂಜೆ ಸಲ್ಲಿಸಿ ದೇಗುಲದ ಸಮೀಪದಲ್ಲಿರುವ ಅಂಬಲದಲ್ಲಿ ಪೂದಚ್ಚ ತೆರೆ ಕಟ್ಟಲಾಗುವುದು. ಹದಿನಾಲ್ಕನೇ ತಾರೀಖಿನಂದು ಕೊಡಿಮರ ಏರಿಸಲಾಗುವುದು. ಅಂದಿನಿಂದ ದೇವರ ಉತ್ಸವವು ಶುರುವಾಗುವುದು. ಹದಿನೆಂಟನೇ ತಾರೀಖಿನಂದು ದೇವರು ಹರಿಶ್ಚಂದ್ರ ದೇವಸ್ಥಾನದ ಸಮೀಪದಲ್ಲಿರುವ ಕಾವೇರಿ ಹೊಳೆಗೆ ಅವಭೃತ ಸ್ನಾನಕ್ಕೆ ಹೋಗುವರು.

ಉತ್ಸವದ ಸಮಯದಲ್ಲಿ ಶಿವ ಮತ್ತು ಪಾರ್ವತಿಯ ಜೋಡಿ ಉತ್ಸವ ಮೂರ್ತಿಗಳ ಪ್ರದಕ್ಷಿಣೆಯಿರುವುದು. ಈ ವಿಶೇಷವಾದ ಶಿವ ಪಾರ್ವತಿಯ ಜೋಡಿ ಉತ್ಸವವನ್ನು ನೋಡಲು ಪುಣ್ಯ ಮಾಡಿರಬೇಕು. ಎರಡು ಉತ್ಸವ ಮೂರ್ತಿಗಳು ತುಂಬಾ ಆಕರ್ಷಣೀಯವಾಗಿರುವುದು. ಉತ್ಸವದ ಸಮಯದಲ್ಲಿ ಅಪರಾಹ್ನ ಹಾಗೂ ರಾತ್ರಿ ಅನ್ನಸಂತರ್ಪಣೆಯಿರುವುದು. ಇಪ್ಪತ್ತನೆ ತಾರೀಕಿನಂದು ಕೊಡಿಮರ ಇಳಿಸಿ ಚಾಮುಂಡಿ ದೇವರ ಸನ್ನಿದಿಯಲ್ಲಿ ಐದು ಕೂಟ್ ಮೂರ್ತಿಯ ತೆರೆ ಕಟ್ಟಲಾಗುವುದು.

ಇಪ್ಪತ್ತೊಂದನೆ ತಾರೀಖಿನಂದು ಮೇಲರಿಯೊಂದಿಗೆ ಉತ್ಸವ ಕೊನೆಗೊಳ್ಳುವುದು. ಉತ್ಸವದ ಸಮಯದಲ್ಲಿ ಅಧಿಕ ಸಂಖ್ಯೆಯಲ್ಲಿ ಭಕ್ತರು ಆಗಮಿಸಿ ದೇವರ ದರ್ಶನ ಮಾಡಿ ಆಶೀರ್ವಾದ ಪಡೆದುಕೊಳ್ಳುವರು.

ಪುರಾತನ ಕಾಲದಲ್ಲಿ ಈ ದೇವಸ್ಥಾನದಲ್ಲಿ ಇನ್ನೊಂದು ವಿಶೇಷತೆ ಇತ್ತು ಅಂದಾಜು ಇನ್ನೂರು ವರ್ಷಗಳ ಹಿಂದೆ ದೇವರ ಕೊಡಿಮರ ಏರಿಸುವ ದಿನದಂದು ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನಲ್ಲಿರುವ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದಿಂದ ಇಲ್ಲಿಗೆ ಬೈವಾಡ ಬರುತ್ತಿತ್ತೆಂದು ಹೇಳಲಾಗುವುದು.

ಪುತ್ತೂರಿನ ಶ್ರೀ ಮಹಾಲಿಂಗೇಶ್ವರ ದೇವರ ಸ್ಥಾನವು ತುಂಬಾ ಆಕರ್ಷಣೀಯವಾಗಿರುವುದು. ದಿನದಿಂದ ದಿನಕ್ಕೆ ಅಲ್ಲಿ ಅಭಿವೃದ್ಧಿ ಕಾರ್ಯವು ನಡೆಯುತ್ತಲೇ ಇರುವುದು. ಏಪ್ರಿಲ್ ತಿಂಗಳಲ್ಲಿ ವರ್ಷಂಪ್ರತಿ ಅಲ್ಲಿ ಉತ್ಸವ ನಡೆಯುವುದು. ಹಬ್ಬದ ಕೊನೆಯ ದಿನ ಅಲ್ಲಿ ಸಿಡಿಸುವ ಪಟಾಕಿ ಮದ್ದುಗುಂಡಿನ ಸಡಗರವು ತುಂಬಾ ಹೆಸರುವಾಸಿಯಾಗಿರುವುದು. ದೇವಸ್ಥಾನದ ಮುಂದಿರುವ ದೊಡ್ಡದಾದ ಗದ್ದೆಯಲ್ಲಿ ಜಾತ್ರೆ ನಡೆಯುವುದು. ಅಂಗಡಿ ಮಳಿಗೆಗಳು, ಸರ್ಕಸ್ಸು, ಯಕ್ಷಗಾನ, ಮಕ್ಕಳಿಗೆ ಆಟದ ಯಂತ್ರಗಳು, ಹೀಗೆ ಹಲವಾರು ವಿಧದ ಟೆಂಟುಗಳು ಬಂದಿರುತ್ತವೆ. ಹಬ್ಬದ ಕೊನೆಯ ದಿನ ದೇವರ ರಥವು ಈ ಗದ್ದೆಯ ಕೊನೆಯವರೆಗೆ ಹೋಗಿ ಬರುವುದು. ಆ ದಿನ ಅಧಿಕ ಸಂಖ್ಯೆಯಲ್ಲಿ ಭಕ್ತರು ಸೇರಿರುತ್ತಾರೆ.

ಪಾಲೂರು ಶ್ರೀ ಮಹಾಲಿಂಗೇಶ್ವರ ದೇವರ ಸನ್ನಿದಿಯಲ್ಲಿ ಮದುವೆ ಹಾಗು ಸಂತಾನ ಪ್ರಾಪ್ತಿಗಾಗಿ ಬೇಡಿಕೊಂಡಲ್ಲಿ ದೇವರ ಕೃಪೆಯಿಂದ ಈಡೇರುವುದೆನ್ನುವರು. ಇಲ್ಲಿ ಮೃತ್ಯುಂಜಯ ಪೂಜೆ, ನವಗ್ರಹ ಪೂಜೆ, ಹಾಗು ಇನ್ನೂ ಹಲವಾರು ಪೂಜೆಗಳು ನಡೆಯುವವು. ಇಲ್ಲಿಯ ಸಭಾಂಗಣದಲ್ಲಿ ನಡೆಯುವ ವಿವಾಹಗಳನ್ನು ಸರಕಾರಿ ನೋಂದಾಣಿ ಮಾಡಲಾಗುವುದು. ಇದರಿಂದ ದೇವಾಲಯಕ್ಕೆ ಆದಾಯ ಹೆಚ್ಚಾಗುವುದು.

ದೇವಾಲಯಕ್ಕೆ ಹರಿದು ಬರುತ್ತಿರುವ ಭಕ್ತರ ಹರಕೆ ಕಾಣಿಕೆಗಳಿಂದಾಗಿ, ಸರಕಾರದ ಸಹಾಯಧನ, ಗ್ರಾಮಸ್ಥರ ಹಾಗು ದಾನಿಗಳ ಧನ ಸಹಾಯದಿಂದಾಗಿ ದೇವಾಲಯವು ಇನ್ನೂ ಹೆಚ್ಚಿನ ಅಭಿವೃದ್ಧಿ ಹೊಂದುತ್ತಿದೆ ಎಂದು ಈ ದೇವಾಲಯದ ಅರ್ಚಕರಾದ ದೇವಿಪ್ರಸಾದ್‌ರವರು ಮಾಹಿತಿ ನೀಡಿರುತ್ತಾರೆ

**ಚಿನ್ನತಪ್ಪ ಜಾತ್ರೆ**

**ಕಾವೇರಿ**, ಕನಕಾ, ಸುಜ್ಯೋತಿ, ಈ ಮೂರು ಹೊಳೆಯ ಸಂಗಮ ಕ್ಷೇತ್ರ ಭಾಗಮಂಡಲದ ಸಮೀಪದ ಊರು ಅಯ್ಯಂಗೇರಿ, ಈ ಊರಲ್ಲಿ ಚಿನ್ನತಪ್ಪ ದೇವಸ್ಥಾನವಿದೆ. ಇದು ಶ್ರೀ ಕೃಷ್ಣನಿಗೆ ಸಂಬಂಧಿಸಿದ ದೇಗುಲವಾಗಿದೆ. ಈ ಊರಲ್ಲಿ ಅಧಿಕ ಸಂಖ್ಯೆಯಲ್ಲಿ ಗೊಲ್ಲ ವಂಶಸ್ಥರು ವಾಸಮಾಡುತ್ತಿರುವೆನ್ನುವರು.

ಈ ದೇವಾಲಯದಲ್ಲಿ ವರ್ಷಕ್ಕೊಂದು ಬಾರಿ ಚಿನ್ನತಪ್ಪನ ಉತ್ಸವ ಜರುಗುವುದು. ಈ ಉತ್ಸವದಲ್ಲಿ ಕೊಳಲಿಗೆ ಪ್ರಾಧ್ಯಾನ್ಯತೆ ಹೆಚ್ಚಿದೆ. ಈ ಕೊಳಲನ್ನು ಬಟ್ಟೆಯಲ್ಲಿ ಸುತ್ತಿ ಜೋಪಾನವಾಗಿ ಗೊಲ್ಲ ವಂಶಸ್ಥರ ಮನೆಯಲ್ಲಿ ಇಡುತ್ತಾರೆಂದು ಹೇಳುವರು. ಇದು ಶ್ರೀ ಕೃಷ್ಣನ ಕೊಳಲೆಂದು ನಂಬುವರು. ಉತ್ಸವದಂದು ಈ ಕೊಳಲನ್ನು ದೇವಸ್ಥಾನಕ್ಕೆ ಒಯ್ದು ಊದುವರು. ಹಬ್ಬ ಮುಗಿದ ಮೇಲೆ ಒಯ್ದು ಪುನಃ ತೆಗೆದಿಡುವರು.

ಉತ್ಸವದ ಸಮಯದಲ್ಲಿ ಬೆಳಗ್ಗೆ ಧಾರಾ ಪೂಜೆ ಮಾಡುವರು. ಎತ್ತು ಪೋರಾಟದೊಂದಿಗೆ ಶ್ವೇತವಸ್ತ್ರ ಧರಿಸಿದ ಮಹಿಳೆಯರು ಊರ್‌ಮಂದ್‌ಗೆ ಆಗಮಿಸಿ ಊರ್‌ಮಂದ್‌ನ ಗದ್ದೆಯಲ್ಲಿ ಮೂರು ಸುತ್ತು ಎತ್ತ್‌ಪೋರಾಟ ನಡೆಸುವರು. ತೆಂಗಿನಕಾಯಿಗೆ ಗುಂಡು ಹೊಡೆಯುವುದು, ಹೊಳೆಯಲ್ಲಿರುವ ಮೀನಿಗೆ ಅಕ್ಕಿ ಹಾಕುವ ಕಾರ್ಯಕ್ರಮಗಳಿರುವುದು. ದೇವಸ್ಥಾನದ ಸಮೀಪದಲ್ಲಿ ಕಲ್ಲುಹೊಳೆ ಹರಿಯುವುದು. ಶುದ್ಧ ಮುದ್ರಿಕೆಯಲ್ಲಿರುವ ಭಕ್ತರಿಗೆ ಗರುಡ ಕಾಣಿಸಿಕೊಳ್ಳುವುದೆನ್ನುವರು.

ಅಸುರರ ಉಪಟಳದಿಂದಾಗಿ ಪೃಥ್ವಿಯಲ್ಲಿ ಹಿಂಸೆ, ಅತ್ಯಾಚಾರ, ಅನಾಚಾರ, ಕದನಗಳು ಹೆಚ್ಚಾಗಿ ರಾಕ್ಷಸೀ ಪ್ರವೃತ್ತಿಯು ಅತಿಯಾಗಿ ಭೂಭಾರ ಹೆಚ್ಚಾಗಲು ಭೂದೇವಿಯು ಕಂಗಾಲಾಗಿ ಗೋಮಾತೆಯ ರೂಪ ತಳೆದು ಸೃಷ್ಟಿಕರ್ತನಾದ ಬ್ರಹ್ಮದೇವನ ಮೊರೆಹೋದಳು. ಭೂದೇವಿಯ ಸಹಾಯಕ್ಕಾಗಿ ದೇವಾನುದೇವತೆಗಳನ್ನೆಲ್ಲ ಒಗ್ಗೂಡಿಸಿಕೊಂಡು ವೈಕುಂಠದಲ್ಲಿರುವ ಕ್ಷೀರ ಸಾಗರದಲ್ಲಿ ಆಧೀಶೇಷನ ಮೇಲೆ ಪವಡಿಸಿರುವ ಶ್ರೀ ಹರಿ ವಿಷ್ಣು ದೇವರ ಸನ್ನಿದಿಗೆ ಭೂದೇವಿ ಸಮೇತರಾಗಿ ಪಯಣಿಸಿ ಪ್ರಾರ್ಥಿಸಿದರು.

ಮಹಾಲಕ್ಷ್ಮಿಯೊಂದಿಗೆ ಅಸೀನರಾಗಿದ್ದ ಶ್ರೀ ಹರಿಯು ಭೂದೇವಿಯ ಸಂಕಟವನ್ನು ಪರಿಹರಿಸಿ ಕಾಪಾಡುವುದಾಗಿ ಭರವಸೆಯಿತ್ತರು. ಭೂಭಾರವನ್ನಿಳಿಸುವುದಾಗಿ ಭೂದೇವಿಗೆ ಆಶ್ವಾಸನೆ ನೀಡಿ ಆಶೀರ್ವದಿಸಿದರು. ಶ್ರೀ ಹರಿಯ ಅನುಗ್ರಹದಿಂದ ಸಂತುಷ್ಟಳಾಗಿ ಭೂದೇವಿಯು ಹಿಂದಿರುಗುವಳು.

ಶ್ರೀ ವಿಷ್ಣುವು ಭೂಮಿಯಲ್ಲಿ ಮಾನವ ರೂಪದಲ್ಲಿ ಜನಿಸಲು ನಿರ್ಧರಿಸಿ ದೇವಾನುದೇವತೆಗಳಿಗೆಲ್ಲ ಯಧುಕುಲದ ಪ್ರಜೆಗಳಾಗಿ ಭೂಲೋಕದಲ್ಲಿ ಜನಿಸುವಂತೆ ಆಜ್ಞಾಪಿಸಿ ತಾನೂ ಅಲ್ಲಿಯೇ ಜನಿಸುವುದಾಗಿ ತಿಳಿಸುವನು. ಅವರೆಲ್ಲರೂ ಆಜ್ಞಾಪಾಲಕರಾಗಿ ಪೃಥ್ವಿಯಲ್ಲಿ ಜನಿಸಲು ನಿರ್ಗಮಿಸುವರು. ಭೂ ದೇವಿಗೆ ಕೊಟ್ಟ ಮಾತಿನಂತೆ ಶ್ರೀ ಹರಿಯು ದ್ವಾಪರಯುಗದಲ್ಲಿ ವಸುದೇವ, ದೇವಕಿ ದಂಪತಿಯ ಎಂಟನೆ ಮಗುವಾಗಿ ಶ್ರಾವಣ ತಿಂಗಳಿನ ಕೃಷ್ಣ ಪಕ್ಷದ ರೋಹಿಣಿ ನಕ್ಷತ್ರದಲ್ಲಿ ಜನಿಸುವರು. ಶ್ರೀ ಕೃಷ್ಣನ ಮಾತಾಪಿತರು ಕಾರಾಗೃಹವಾಸದಲ್ಲಿದ್ದುದರಿಂದಾಗಿ ಶ್ರೀ ಕೃಷ್ಣನು ಅಲ್ಲಿಯೇ ಜನಿಸಬೇಕಾಯಿತು.

ನಾಲ್ಕು ಕೈಗಳಲ್ಲಿ ಶಂಕ, ಚಕ್ರ, ಗದಾ, ಕಮಲಗಳನ್ನು ಹಿಡಿದು, ವೈಡೂರ್ಯದ ಕಿರೀಟದಾರಿಯಾಗಿ, ಕರ್ಣಕುಂಡಲ ಹಾಗು ಹಳದಿ ಬಣ್ಣದ ರೇಶ್ಮೆಯ ವಸ್ತ್ರ ಧರಿಸಿ ದೇವತಾರೂಪದಲ್ಲಿ ಜನಿಸಿದ ಶಿಶುವನ್ನು

ಕಂಡು ವಸುದೇವ-ದೇವಕಿಯರು ಬೆರಗಾದರು. ಈ ವಿಸ್ಮಯವನ್ನು ನೋಡಿದ ದಂಪತಿಗಳು ಮೂಕರಾಗಿ ನಿಂತರು. ಹೆದರಿ ಭಕ್ತಿಯಿಂದ ಪ್ರಾರ್ಥನೆ ಮಾಡಿದಾಗ ಈ ವಿಸ್ಮಯಕಾರಿ ಶಿಶುರೂಪವು ಮಾರ್ಪಾಡಾಗಿ ಸಾಮಾನ್ಯ ಮಾನವ ಶಿಶುವಿನ ರೂಪ ತಳೆಯಿತು.

ಮಗು ಹುಟ್ಟಿದಾಕ್ಷಣ ದಂಪತಿಗಳ ಕೈ ಕಾಲಿಗೆ ಹಾಕಿದ್ದ ಸರಪಳಿಗಳು ತನ್ನಿಂತಾನೆ ಬಿಚ್ಚಿಕೊಂಡವು. ಸೆರೆಯ ಬೀಗ ಜಡಿದಿದ್ದ ಬಾಗಿಲುಗಳೆಲ್ಲವೂ ತೆರೆದುಕೊಂಡವು ಗೋಕುಲಕ್ಕೆ ಹೋಗಿ ಅಲ್ಲಿ ಯಶೋದೆಯ ಮಗ್ಗುಲಲ್ಲಿ ಮಗುವನ್ನು ಮಲಗಿಸಿ ಬಂದನು. ಈ ರೀತಿಯಾಗಿ ಶ್ರೀ ಕೃಷ್ಣನು ಗೋಕುಲದಲ್ಲಿ ಯಶೋದೆಯ ಮಗನಾಗಿ ಬೆಳೆದನು.

ಮಣ್ಣು ತಿಂದನೆಂದು ತಾಯಿ ಯಶೋದೆ ಬಾಲ ಕೃಷ್ಣನನ್ನು ಬೈದು ಬಾಯಿ ತೆರೆಸಿದಾಗ, ಕೃಷ್ಣನ ಬಾಯಿಯೊಳಗೆ ಇಡೀ ಬ್ರಹ್ಮಾಂಡದ ದರ್ಶನವಾಯಿತು ಯಶೋದೆಗೆ. ವೃಂದಾವನದಲ್ಲಿ ಎಲ್ಲರ ಆಕರ್ಷಣೆಯ ಮಗುವಾಗಿ ಬೆಳೆದನು ಕೃಷ್ಣ, ಗೋವಳ, ಸ್ನೇಹಿತರು, ಗೋಪಿಕೆಯರು, ಎಲ್ಲರಿಗೂ ಕೃಷ್ಣನೋರ್ವ ಆಪ್ತಮಿತ್ರನಾಗಿದ್ದನು. ಬೆಣ್ಣೆ ಕದಿಯುತ್ತಾ, ಗೋಪಿಕೆಯರನ್ನು ಪೀಡಿಸುತ್ತಾ ತುಂಟ ಕೃಷ್ಣನಾಗಿ ಬೆಳೆದನು. ಬೆಳೆಯುತ್ತಲೇ ಹಲವಾರು ಚಮತ್ಕಾರಗಳನ್ನು ಮಾಡಿ ಅಸಾಧ್ಯ ಬಾಲಕನಾದನು. ಒಂದೊಮ್ಮೆ ಜೋರಾದ ಮಳೆ ಸುರಿದು ಗೋಕುಲವು ಮುಳುಗುವಂತಾಗುವ ಪರಿಸ್ಥಿತಿ ಎದುರಾದಾಗ ಶ್ರೀ ಕೃಷ್ಣನು ತನ್ನ ಕಿರುಬೆರಳಿನಿಂದ ಗೋವರ್ಧನ ಗಿರಿಯನ್ನೆತ್ತಿ ಇಡೀ ಗೋಕುಲದ ಜನರನ್ನು, ಜಾನುವಾರುಗಳನ್ನು ಕೊಡೆಯಂತಿದ್ದ ಗಿರಿಯ ಅಡಿಗೆ ಸೇರಿಕೊಂಡು ಕಾಪಾಡಿದನು.

ಒಂದೊಮ್ಮೆ ಊರಿನ ಜನರನ್ನು, ಪ್ರಾಣಿಗಳನ್ನು ನೀರುಕುಡಿಯಲೆಂದು ಹೋಗುವ ಸಮಯದಲ್ಲಿ ಕಬಳಿಸುತ್ತಿದ್ದ ಕಾಳಿಂಗ ಸರ್ಪವನ್ನು, ಅದರ ಹೆಡೆಯ ಮೇಲೆ ನಿಂತು ನರ್ತನ ಗೈದು ಕಾಳಿಂಗ ಮರ್ದನ ಮಾಡಿದನು. ಹೀಗೆ ಶ್ರೀ ಕೃಷ್ಣನು ತನ್ನ ಬಾಲ್ಯದಲ್ಲಿ ಹಲವಾರು ವಿಶೇಷ ಕಾರ್ಯಗಳನ್ನು ಮಾಡಿದನು. ದುಷ್ಟರ ಸದೆಬಡಿದು ಶಿಷ್ಟರ ರಕ್ಷಿಸಿದನು.

ರಾಧೆ, ಶ್ರೀಕೃಷ್ಣನ ಬಂಧವು ಎಲ್ಲರಿಗೂ ಪ್ರಿಯವಾಗಿತ್ತು. ಗೋಕುಲದಲ್ಲಿ ರಾಧಾಕೃಷ್ಣರ ಪವಿತ್ರ ಸ್ನೇಹ ಬಂದವು ಎಲ್ಲರಿಗೂ ಪ್ರಿಯವಾಗಿತ್ತು. ರಾಧೆಗೆ ಶ್ರೀಕೃಷ್ಣನೆಂದರೆ ಪಂಚಪ್ರಾಣ. ಅವರಿಬ್ಬರದು ಅಮರ ಸ್ನೇಹ ಬಂಧನ. ಶ್ರೀಕೃಷ್ಣನ ಕೊಳಲಿನ ನಾದಕ್ಕೆ ಇಡೀ ಗೋಕುಲವೇ ಮರುಳಾಗುತ್ತಿತ್ತು. ವಿಶಾಲವಾದ ಮೈದಾನದಲ್ಲಿ ಮರವೊಂದಕ್ಕೆ ಒರಗಿಸಿಕೊಂಡು ತನ್ನ ಕೊಳಲಿನಿಂದ ಇಂಪಾದ ನಾದವನ್ನು ಹೊರಡಿಸಿದನೆಂದರೆ ಹಸುಕರುಗಳು ಮೇಯುವುದನ್ನು ಬಿಟ್ಟು ಕೊಳಲಗಾನವನ್ನು ಆಲಿಸುತ್ತ ನಿಲ್ಲುತ್ತಿದ್ದವು, ರಾಧೆ ಶ್ರೀಕೃಷ್ಣನ ಆತ್ಮೀಯ ಸ್ನೇಹಿತೆಯಾಗಿದ್ದಳು . ಗೋಕುಲದಲ್ಲಿ ರಾಧ ಕೃಷ್ಣರ ಪವಿತ್ರಸ್ನೇಹ ಬಂಧವು ಎಲ್ಲರಿಗೂ ಪ್ರಿಯವಾಗಿತ್ತು ರಾಧೆಗೆ ಶ್ರೀಕೃಷ್ಣನ ಕೊಳಲಿನ ನಾದಕ್ಕೆ ಇಡೀ ಗೋಕುಲವೆ ಮರುಳಾಗುತ್ತಿತ್ತು. ವಿಶಾಲವಾದ ಮೈದಾನದಲ್ಲಿ ಮರವೊಂದಕ್ಕೆ ಒರಗಿಕೊಂಡು ತನ್ನ ಕೊಳಲಿನಿಂದ

ಇಂಪಾದ ನಾದವನ್ನು ಹೊರಡಿಸಿದನೆಂದರೆ ಹಸುಕರುಗಳು ಮೇಯುವುದನ್ನು ಮರೆತು ಆಲಿಸುತ್ತಿದ್ದವು. ಗೋಪ ಗೋಪಿಯರು ತಮ್ಮ ಕೆಲಸ ಕಾರ್ಯಗಳನ್ನು ಮರೆತು ಕೊಳಲ ನಾದಕ್ಕೆ ಮನಸೋತು ಮೈಮರೆಯುತ್ತಿದ್ದರು. ಕೃಷ್ಣನ ಕೊಳಲನಾದಕ್ಕೆ ಅಷ್ಟೊಂದು ಶಕ್ತಿ ಇತ್ತು. ರಾಧೆಗಂತೂ ಕೃಷ್ಣನ ಕೊಳಲ ಧ್ವನಿಯನ್ನು ಕೇಳಿಸಿಕೊಂಡಷ್ಟು ಸಮಾಧಾನ, ತೃಪ್ತಿ ಆಗುವಂತಿರಲಿಲ್ಲ. ಶ್ರೀ ಕೃಷ್ಣನು ಎಲ್ಲರಿಗೂ ಓರ್ವ ವಿಸ್ಮಯಕಾರಿ, ನಿಗೂಢ ಬಾಲಕನಾಗಿದ್ದನು.

ಹೀಗಿರಲೊಂದು ದಿನ ಇದ್ದಕ್ಕಿದ್ದಂತೆ ಶ್ರೀ ಕೃಷ್ಣನು ಮಥುರೆಗೆ ಹೋಗಬೇಕಾಗಿ ಬಂದಿರು. ವೃಂದಾವನದಲ್ಲಿ ಗೋಪಾಲನಂತಿದ್ದ ಶ್ರೀ ಕೃಷ್ಣನು ಮಥುರಾ ನಗರಿಯಲ್ಲಿ ಓರ್ವಯೋಧ, ರಾಜಕಾರಣಿ, ಸೂತ್ರದಾರಿಯ ಪಾತ್ರ ನಿರ್ವಹಣೆ ಮಾಡಬೇಕಾಯಿತು. ಕುರುಕ್ಷೇತ್ರ ಯುದ್ಧದಲ್ಲಿ ಅರ್ಜುನನಿಗೆ ಗೀತೋಪೋದೇಶಮಾಡಿ ಅವನನ್ನು ಯುದ್ಧಕ್ಕೆ ತಯಾರು ಮಾಡಬೇಕಾಯಿತು. ತನ್ನ ವೀಶ್ವರೂಪವನ್ನು ತೋರಿಸಿದನು. ಧರ್ಮಸ್ಥಾಪನೆ ಮಾಡಿ ಭೂದೇವಿಯ ಸಂಕಷ್ಟ ಪರಿಹರಿಸಿದನು.

ಇತ್ತ ಕಡೆ ಶ್ರೀಕೃಷ್ಣ ಮಥುರಾನಗರಿಗೆ ಹೋದ ನಂತರದಲ್ಲಿ ರಾಧೆಯು ಒಂಟಿಯಾಗಿ ಹೋದಳು. ಯಾವಾಗಲು ಅವಳಿಗೆ ಕೃಷ್ಣನ ಧ್ಯಾನ, ಕೃಷ್ಣನ ನೆನೆಯುತ ತನ್ನ ಜೀವನ ಸಾಗಿಸುವಳು. ಕೃಷ್ಣನ ಕೊಳಲನಾದ ಕೇಳಿಸದೆ ಅವಳ ಜೀವನವು ಬರಡಾಗಿಹೋಗಿತ್ತು. ರಾಧೆಯು ಅವಳ ಕೊನೆಗಾಲದಲ್ಲಿ ಮರಣ ಶಯ್ಯೆಯಲ್ಲಿ ಮಲಗಿ ಶ್ರೀಕೃಷ್ಣನನ್ನು ಮತ್ತು ಅವನ ಕೊಳಲನಾದವನ್ನು ಸ್ಮರಿಸುತ್ತಾ ಕೊರಗಿದಳು. ರಾಧೆಯ ವೇದನೆ ಮತ್ತು ಅವಳ ಸಂಕಷ್ಟದ ಅರಿವಾದ ಶ್ರೀಕೃಷ್ಣನು ತನ್ನ ಕೊಳಲೊಂದಿಗೆ ರಾಧೆಯ ಸಮೀಪಕ್ಕೆ ಧಾವಿಸಿದನು.

ರಾಧೇಯ ತಲೆಯನ್ನು ತನ್ನ ಮಡಿಲಿನಲ್ಲಿಟ್ಟುಕೊಂಡು ಶ್ರೀ ಕೃಷ್ಣನು ಕೊಳಲು ನುಡಿಸಿದನು. ಕೃಷ್ಣನ ಕಂಡು ರಾಧೆಯ ಮನಸು ನಲಿಯಿತು. ಕೃಷ್ಣನ ಕೊಳಲಿನ ಧ್ವನಿಯನ್ನಾಲಿಸುತ್ತಾ ರಾಧೆಯು ಸಂತೋಷದಿಂದ ಪ್ರಾಣ ತ್ಯಾಗ ಮಾಡಿದಳು. ರಾಧೆಯ ಮರಣಾನಂತರ ಕೃಷ್ಣನು ಊದುತ್ತಿದ್ದ ಕೊಳಲನ್ನು ಅವಳ ಎದೆಯ ಮೇಲಿಟ್ಟು ಹೊರಟು ಹೋದನು. ಅಲ್ಲಿಂದ ಮುಂದೆ ಶ್ರೀಕೃಷ್ಣನು ಕೊಳಲನ್ನು ನುಡಿಸಲೇ ಇಲ್ಲವೆನ್ನುವರು. ಶ್ರೀಕೃಷ್ಣನು ಬಿಟ್ಟು ಹೋದ ಕೊಳಲು ಈ ಚೆನ್ನತಪ್ಪ ದೇವಾಲಯದಲ್ಲಿರುವುದೆನ್ನುವರು.

**ಮಕ್ಕಿ ಶಾಸ್ತವು ಜಾತ್ರೆ**

ಮಡಿಕೇರಿ ತಾಲೂಕಿನ ಎರಡನೆ ಮುಖ್ಯಪಟ್ಟಣವಾಗಿರುವ ನಾಪೋಕ್ಲುವಿನ ಸಮೀಪವಿರುವ ಬೇತು ಮಾರ್ಗವಾಗಿ ಕ್ರಮಿಸಿದರೆ ಸಿಗುವ ಗ್ರಾಮವೇ ಮಕ್ಕಿ. ಇಲ್ಲಿರುವ ದೇವರನ್ನು ಮಕ್ಕಿ ಶಾಸ್ತವು ದೇವರೆಂದು ಪ್ರಚಲಿತವಾಗಿ ಇಲ್ಲಿ ಗ್ರಾಮದವರು ಹಾಗೂ ಸುತ್ತಮುತ್ತಲಿನ ಗ್ರಾಮದವರೆಲ್ಲ ಆರಾಧ್ಯ ದೈವವಾಗಿ ಆರಾಧಿಸುತ್ತಿದ್ದಾರೆ.

## ದೈವ ನೆಲೆಯ ಹಿನ್ನೆಲೆ

ಕೊಡಗಿನ ಬಹುಪಾಲು ದೇವರುಗಳು ಕೇರಳದಿಂದ ಬಂದವರೆಂದು ನಂಬಿಕೆ. ಅದರಂತೆ ಈ ಮಕ್ಕಿ ಶಾಸ್ತ್ರವು ದೇವರು ಸಹ ಕೇರಳದಿಂದ ಕೊಡಗಿನಲ್ಲಿ ನೆಲೆನಿಲ್ಲಲು ಬಂದರೆಂದು ಈ ದೇವಾಲಯದ ಅರ್ಚಕರಾದ ದಿವಾಕರರವರು ಈ ದೈವ ನೆಲೆಯ ಚರಿತ್ರೆಯನ್ನು ಹೇಳಿದರು. ಅದರಂತೆ ಈ ದೇವರು ಕೇರಳದಿಂದ ಬಂದು ಇಗ್ಗುತ್ತಪ್ಪನ ಹತ್ತಿರ ನೆಲೆ ನಿಲ್ಲಲ್ಲು ಕೇಳಿದಾಗ ಅಲ್ಲಿನ ದೈವಸಂಭೂತರೊಬ್ಬರು ಇಲ್ಲಿ ನೆಲೆ ನಿಂತರೆ ಇಗ್ಗುತ್ತಪ್ಪನ ಶಕ್ತಿ ಕಡಿಮೆ ಆಗುತ್ತದೆ ಎಂದು ಈ ದೇವರಿಗೆ ಮೂರು ಬಾಣಗಳನ್ನು ಕೊಟ್ಟು ಹೂಡುವಂತೆ ತಿಳಿಸಿದರಂತೆ. ಅದರಂತೆ ಒಂದು ಬಾಣ ಬಿದ್ದಾಟಂಡ ಕುಟುಂಬಸ್ಥರ ಸ್ಥಳದಲ್ಲಿ ಬಿತ್ತು. ಆ ಸ್ಥಳದ ಪಕ್ಕದಲ್ಲಿ ರುದ್ರಭೂಮಿ ಇದ್ದರಿಂದ ಸೂಕ್ತವಲ್ಲವೆಂದು ಎರಡನೆ ಬಾಣವು ವಿಷ್ಣುದೇವಾಲಯದ ಪಕ್ಕ ಬಿದ್ದಿದರಿಂದ ಇದು ಸೂಕ್ತವಲ್ಲವೆಂದು ಮೂರನೆ ಬಾಣ ಬಿಟ್ಟಾಗ ಬೆನ್ನಿನ ಹಿಂದೆ ಬಾಣ ಎಸೆದಾಗ ಅದು ಮಕ್ಕಿ ಗ್ರಾಮಕ್ಕೆ ಬಂದು ಬಿದ್ದಿತಂತೆ.ನೆಲೆ ನಿಲ್ಲಲು ಇದು ಸೂಕ್ತವೆಂದು ದೇವರು ನೆಲೆ ನಿಂತರೆಂದು ಗ್ರಾಮಸ್ಥರ ನಂಬಿಕೆ.

## ಉತ್ಸವ ಆಚರಣೆ

ಮಕ್ಕಿ ಶಾಸ್ತ್ರವು ದೇವರಿಗೆ ಯಾವುದೇ ವಿಗ್ರಹ ಗುಡಿಗೋಪರವಿಲ್ಲ ಒಂದು ಹಲಸಿನ ಮರದ ಬುಡದಲ್ಲಿರುವ ತ್ರಿಶೂಲಧರ ಶಿಲಾಮೂರ್ತಿಯೇ ಶಾಸ್ತ್ರವು ದೇವರು. ಈ ದೇವರಿಗೆ ಪ್ರತಿವರ್ಷ ಮೇ ೩ ಮತ್ತು ೪ ಎರಡು ದಿನಗಳ ಕಾಲ ಜಾತ್ರೆ ಉತ್ಸವ ಜರುಗುತ್ತದೆ. ಈ ದೇವಾಲಯದ ತಕ್ಕ ಮುಖ್ಯಸ್ಥರಾದ ಕೊಂಡಿರಾ ಕುಟುಂಬಸ್ಥರ ನೇತೃತ್ವದಲ್ಲಿ ಬಹು ಭಕ್ತಿಪೂರ್ವಕವಾಗಿ ಉತ್ಸವ ಜರುಗುತ್ತದೆ. ಮೊದಲನೆ ದಿನ ದೇವಾಲಯದ ಶುದ್ಧೀಕರಣ ಹಾಗೂ ಉತ್ಸವ ಮೂರ್ತಿ ಅಲಂಕಾರ ನಡೆದು ಪೂಜೆ ಪುನಸ್ಕಾರ , ದೀಪಾರಾಧಾನೆ, ಹರಕೆ ಒಪ್ಪಿಸುವುದೆಲ್ಲ ನಡೆಯುತ್ತದೆ. ಮರುದಿನ ಕೋಲ ನಡೆಸಲಾಗುತ್ತದೆ. ಅಜ್ಜಕೋಲ, ವಿಷ್ಣು ಮೂರ್ತಿ ಕೋಲಗಳು, ಮೇಲೇರಿ ಮುಂತಾದ ಹಲವು ಆಚರಣೆಗಳೊಂದಿಗೆ ಈ ಜಾತ್ರೆ ಅಂತ್ಯಗೊಳ್ಳುತ್ತದೆ. ಈ ಉತ್ಸವಕ್ಕೆ ಅಕ್ಕಪಕ್ಕದ ಗ್ರಾಮದ ಭಕ್ತರೆಲ್ಲ ನೆರವೇರಿ ಪಾಲ್ಗೊಳ್ಳು ತ್ತಾರೆ. ಅರ್ಚಕರು ಹೇಳುವಂತೆ ಇಲ್ಲಿನ ಪರಿಶಿಷ್ಟ ಜಾತಿಯವರು ದೇವಾಲಯದ ಹೊರಗಿನಿಂದ ಮಾತ್ರ ದೇವರನ್ನು ನಮಿಸಿ ಪೂಜಾ ಕಾರ್ಯ ವೀಕ್ಷಿಸಿ ಹೋಗುತ್ತಾರೆಂದು ಹೇಳಿದ್ರು . ಇದು ಹಿಂದಿನಿಂದ ಇದ್ದ ಕಟ್ಟುಪಾಡು ಆಗಿದ್ದು ಇದನ್ನು ಈಗಲೂ ಮುಂದುವರೆಯುತ್ತಿದ್ದಾರೆ ಎಂಬುದನ್ನು ತಿಳಿಸಿದರು. ದೇವರ ಕೃಪೆಗೆ ಪಾತ್ರರಾಗಲು ಯಾವುದೇ ಜಾತಿಯ ಸಂಕೋಲೆ ಇರುವುದಿಲ್ಲ ಎಂಬುದನ್ನು ಮುಂದಾದರೂ ಅರಿತರೆ ಉತ್ತಮ ಧಾರ್ಮಿಕ ಆಚರಣೆಯಾಗುತ್ತದೆ. ಈ ರೀತಿಯ ಕಟ್ಟುಪಾಡು ಇಂದಿಗೂ ಹಲವೆಡೆ ಇರುವುದು ವಿಷಾಧನೀಯ ಸಂಗತಿಯೆ ಸರಿ.

## ಕೈಕಾಡಿನಲ್ಲಿ ಮಹಾಲಕ್ಷ್ಮಿ ಉತ್ಸವ

ಏಪ್ರಿಲ್ ಮೇ ತಿಂಗಳುಗಳಲ್ಲಿ ಕೊಡಗು ಜಿಲ್ಲೆಯ ಗ್ರಾಮಾಂತರ ಪ್ರದೇಶಗಳಲ್ಲಿ ಹತ್ತು ಹಲವು ಹಬ್ಬಗಳು ಜರುಗುತ್ತವೆ. ಒಂದೊಂದು ದೇವಸ್ಥಾನದಲ್ಲಿ ಆಚರಿಸಲಾಗುವ ಹಬ್ಬ ಉತ್ಸವಗಳ ವಿಧಿ ವಿಧಾನಗಳು ಒಂದೊಂದು ಬಗೆಯವು. ದೇವರಿಗೆ ವಿಶೇಷ ಪೂಜೆ ಸಲ್ಲಿಸುವ ದೇವರ ವಿಗ್ರಹವನ್ನು ಹೊತ್ತು ನರ್ತಿಸುವ ಆಚರಣೆಗಳು  ಕೆಲವು ದೇವಾಲಯಗಳ ವೈಶಿಷ್ಟ್ಯವಾದರೆ ಮತ್ತೆ ಕೆಲವು ದೇವಸ್ಥಾನಗಳಲ್ಲಿ ಸಾಂಪ್ರದಾಯಿಕ ನೃತ್ಯ ಪ್ರದರ್ಶನಗಳು ನಡೆಯುತ್ತವೆ.

ಕೈಕಾಡು ಎಂಬ ಊರಿನ ಮಕ್ಕೋಟು ಮಹಾಲಕ್ಷ್ಮಿ ದೇವಸ್ಥಾನದಲ್ಲಿ ನಡೆಯುವ ಉತ್ಸವದಲ್ಲಿ ನೃತ್ಯಗಳು ಮೇಳೈಸುತ್ತವೆ. ಒಂದಲ್ಲ ಎರಡಲ್ಲ ಸುಮಾರು ಹದಿನೈದು ಬಗೆಯ ನೃತ್ಯಗಳು ಉತ್ಸವದಲ್ಲಿ ಪ್ರದರ್ಶನಗೊಂಡ ಈ ವಾರ್ಷಿಕ ಉತ್ಸವಕ್ಕೆ ವಿಶೇಷ ಮೆರುಗಿದೆ. ಉತ್ಸವದಲ್ಲಿ ನವಿಲಾಟ್, ಬಿಲ್ಲಾಟ್, ಕೈಯಾಟ್, ಕತ್ತಿಯಾಟ್, ಕೊಂಬಾಟ್, ದೇವರ ಗೊಂಬೆಯಾಟ್ ಸೇರಿದಂತೆ ಹದಿನೈದು ಬಗೆಯ ನೃತ್ಯಗಳು ದಿನವಿಡೀ ನಡೆಯುತ್ತದೆ. ಕೊಡವ ಭಾಷೆಯಲ್ಲಿ ಆಟ್ ಎಂದರೆ ನೃತ್ಯ. ಕೈಗಳನ್ನು ವಿವಿಧ ರೀತಿಯಲ್ಲಿ ತಿರುಗಿಸಿ ಮಾಡುವ ಕೈ ನೃತ್ಯದಿಂದ ಹಿಡಿದು ಬಿಲ್ಲು, ಕತ್ತಿ, ಕೊಂಬು, ನವಿಲು ಗರಿ, ಹೀಗೆ ಬಗೆಬಗೆಯ ಸಲಕರಣೆಗಳನ್ನು ಹಿಡಿದು ನರ್ತಿಸುತ್ತಾರೆ. ನೃತ್ಯ ಪ್ರಕಾರದಲ್ಲಿ ದೇವರ ವಿಗ್ರಹವನ್ನು ಹಿಡಿದು ನೃತ್ಯ ಮಾಡುತ್ತಾರೆ.

ಮಕ್ಕೋಟು ಮಹಾಲಕ್ಷ್ಮಿ ದೇವಸ್ಥಾನ ಅತ್ಯಂತ ಪುರಾತನವಾದುದು. ಎರಡು ವರ್ಷಗಳಿಗೊಮ್ಮೆ ಇಲ್ಲಿ ಉತ್ಸವ ನಡೆಯುತ್ತದೆ. ಇಲ್ಲಿನ ಮಕ್ಕೋಟು ಕೇರಿಯ ಏಳು ಕುಟುಂಬಗಳ ಸದಸ್ಯರು ಸೇರಿ ನೃತ್ಯಗಳನ್ನು ಪ್ರದರ್ಶಿಸುತ್ತಾರೆ. ಉತ್ಸವದ ಮುನ್ನ ಎಲ್ಲರೂ ನಿತ್ಯ ಒಟ್ಟಾಗಿ ನೃತ್ಯ ತರಬೇತಿ ಪಡೆಯುತ್ತಾರೆ. ಉತ್ಸವದ ದಿನ ದೇವಸ್ಥಾನದ ಎದುರು ನೃತ್ಯ ಪ್ರದರ್ಶನ ನಡೆಯುತ್ತದೆ. ಪ್ರತಿಯೊಂದು ನೃತ್ಯವೂ ಹದಿನೆಂಟು ವಿಧಗಳನ್ನು ಹೊಂದಿದ್ದು ಕನಿಷ್ಠ ಅರ್ಧರ್ಧ ಗಂಟೆ ನಡೆಯುತ್ತದೆ. ನೃತ್ಯದಲ್ಲಿ ಪಾಲ್ಗೊಳ್ಳುವವರು ಆಕರ್ಷಕ ಹಾಗೂ ಬಣ್ಣದ ಉಡುಪುಗಳನ್ನು ಧರಿಸುತ್ತಾರೆ. ಇದರಿಂದಾಗಿ ನೃತ್ಯ ಗಮನ ಸೆಳೆಯುತ್ತದೆ. ದೇವಸ್ಥಾನದಲ್ಲಿ ವೈದಿಕ ಕಾರ್ಯಗಳು ಪ್ರತ್ಯೇಕವಾಗಿ ನಡೆಯುತ್ತದೆ. ಸಾಂಪ್ರದಾಯಿಕ ಆಚರಣೆಗಳಂತೆ ನೃತ್ಯಗಳೂ ವೈಶಿಷ್ಟ್ಯಪೂರ್ಣವಾಗಿ ಜನರ ಗಮನ ಸೆಳೆಯುತ್ತವೆ.

## ಭಾಗಮಂಡಲದ ಪೊಲಿಂಕಾನ ಜಾತ್ರೆ

ಕೊಡಗಿನ ಪುಣ್ಯ ಕ್ಷೇತ್ರವಾದ ಭಾಗಮಂಡಲದಲ್ಲಿ ಪ್ರತಿ ವರ್ಷ ತುಂಬಿ ಹರಿದು ಪ್ರವಾಹ ರೂಪಿಣಿಯಾಗುವ ಕಾವೇರಿ ಮಾತೆಗೆ ವಿಶೇಷ ಪೂಜೆ ಸಲ್ಲಿಸುವ ಮೂಲಕ ಧನ್ಯವಾದ ಅರ್ಪಿಸುವುದೇ ಪೊಲಿಂಕಾನ ಉತ್ಸವದ ವಿಶೇಷತೆ. ಪ್ರತಿ ವರ್ಷ ಕರ್ಕಾಟಕ ಅಮವಾಸ್ಯೆಯಂದು ಭಾಗಮಂಡಲದಲ್ಲಿ ಪೊಲಿಂಕಾನ ಉತ್ಸವವನ್ನು ಆಚರಿಸುತ್ತಾರೆ.

ತಲಕಾವೇರಿಯಲ್ಲಿ ಹುಟ್ಟುವ ಕಾವೇರಿ ಭಾಗಮಂಡಲದವರೆಗೆ ಗುಪ್ತಗಾಮಿನಿಯಾಗಿ ಹರಿದು ತ್ರಿವೇಣಿ ಸಂಗಮದಲ್ಲಿ ಸುಜ್ಯೋತಿ, ಕನ್ನಿಕೆ ನದಿಗಳೊಂದಿಗೆ ಸೇರುವ ಮೂಲಕ ತಮಿಳುನಾಡಿನವರೆಗೆ ಹರಿದರೂ ಪ್ರವಾಹ ಭೀತಿ ಎದುರಾಗುವುದು ಭಾಗಮಂಡಲದಲ್ಲಿ. ಮಳೆಗಾಲದಲ್ಲಿ ಕಾವೇರಿ ನದಿ ಉಕ್ಕಿ ಹರಿಯದೇ ಸೌಮ್ಯಳಾಗಿ ಹರಿಯುವ ಮೂಲಕ ರೈತಾಪಿ ವರ್ಗಕ್ಕೆ ಒಳಿತನ್ನು ಉಂಟು ಮಾಡಲೆಂದು ಪ್ರಾರ್ಥಿಸುವುದು ಈ ಉತ್ಸವದ ವಿಶೇಷತೆ.

ಹಿಂದೆ ಮಳೆಗಾಲದಲ್ಲಿ ಕಾವೇರಿ ತುಂಬಿ ಹರಿದು ಪ್ರವಾಹ ಎದುರಾದಾಗ ಜನರು ಸಂಪರ್ಕವಿಲ್ಲದೆ ಪರಿತಪಿಸುವ ಪರಿಸ್ಥಿತಿ ಇತ್ತು. ಆ ಸಂದರ್ಭದಲ್ಲಿ ಹಿರಿಯರು ಸೇರಿಕೊಂಡು ಕಾವೇರಿ ಮಾತೆ ಕೋಪಗೊಂಡಿದ್ದಾಳೆ ಎಂದುಕೊಂಡು ಆಕೆಯನ್ನು ಸಂತೈಸುವ ನಿಟ್ಟಿನಲ್ಲಿ ಮುತ್ತೈದೆಯರು ಆಭರಣಗಳನ್ನು ಇರಿಸಿ ತೆಪ್ಪದ ಮೂಲಕ ಸಾಗಿ ಬಾಗಿನ ಅರ್ಪಿಸುತ್ತಿದ್ದರು. ಇದೇ ಪ್ರೀತಿ ಮುಂದುವರಿದುಕೊಂಡು ಬಂದಿದ್ದು ಪೊಲಿಂಕಾನ ಉತ್ಸವವಾಗಿ ಆಚರಿಸಲಾಗುತ್ತಿದೆ.

ಭಗಂಡೇಶ್ವರ ದೇವಸ್ಥಾನದಲ್ಲಿ ಮಧ್ಯಾಹ್ನ ೧೨ ಗಂಟೆಗೆ ಮಹಾಪೂಜೆ ಸಲ್ಲಿಸಿ ನಂತರ ಪೊಲಿಂಕಾನುತ್ಸವ ಮಂಟಪದೊಂದಿಗೆ ಕಾವೇರಿ ಮಾತೆಗೆ ಕರಿಮಣಿ, ಬಿಚ್ಚೋಲೆ, ಸೀರೆ, ವಸ್ತ್ರ ಮತ್ತು ಕುಂಕುಮ ಬಳೆಗಳನ್ನು ಬೆಳ್ಳಿಯ ತಟ್ಟೆಯಲ್ಲಿಟ್ಟು ಭಕ್ತ ವೃಂದದ ಸಮ್ಮುಖದಲ್ಲಿ ಪೂಜಿಸಲಾಗುತ್ತದೆ.

ಚಂಡೆ ವಾದ್ಯದೊಂದಿಗೆ ಬಾಳೆ ದಿಂಡುಗಳಿಂದ ರಚಿಸಲಾದ ಪೊಲಿಂಕಾನ ಮಂಟವನ್ನು ಭಗಂಡೇಶ್ವರ ದೇವಾಲಯಕ್ಕೆ ಪ್ರದಕ್ಷಿಣೆ ಹಾಕಿಸಿದ ನಂತರ ತ್ರಿವೇಣಿ ಸಂಗಮದ ಬಳಿ ಸಾಂಪ್ರದಾಯಿಕ ಮೆರವಣಿಗೆಯಲ್ಲಿ ಕೊಂಡೊಯ್ದು ಕಾವೇರಿ ಮಾತೆಗೆ ಪೂಜೆ ಸಲ್ಲಿಸಿದ ನಂತರ ನದಿ ನೀರಿನಲ್ಲಿ ಬಾಗಿನದಂತೆ ಬಾಳೆ ದಿಂಡಿನ ಮಂಟಪವನ್ನು ತೇಲಿಬಿಡಲಾಗುತ್ತದೆ. ತಲೆ ತಲಾಂತರಗಳಿಂದ ಭಾಗಮಂಡಲದಲ್ಲಿ ಪೊಲಿಂಕಾನ ಉತ್ಸವವನ್ನು ಸಾಂಪ್ರದಾಯಿಕ ರೀತಿಯಲ್ಲಿ ಆಚರಿಸಲಾಗುತ್ತಿದೆ.

**ಬಲ್ಲಮಾವಟಿಯ ಉಯ್ಯಾಲೆ ಜಾತ್ರೆ**

ಕೊಡಗು ಜಿಲ್ಲೆಯ ಬಲ್ಲಮಾವಟಿ ಗ್ರಾಮದಲ್ಲಿ ಏಪ್ರಿಲ್ ಕೊನೆಯ ವಾರದಲ್ಲಿ ವಿಶೇಷ ಹಬ್ಬವೊಂದು ನಡೆಯುತ್ತದೆ. ಈ ಹಬ್ಬ ಗ್ರಾಮೀಣ ಜನಪದ ಸಂಸ್ಕೃತಿಯ ಪ್ರತೀಕದಂತಿದೆ. ಹಬ್ಬದ ಸಂದರ್ಭಗಳಲ್ಲಿ ಸಾಮಾನ್ಯವಾಗಿ ದೇವಾಲಯಗಳಲ್ಲಿ ವಿಶೇಷ ಪೂಜೆ, ಪುನಸ್ಕಾರಗಳು ಜರುಗುತ್ತವೆ. ಆದರೆ ಬಲ್ಲಮಾವಟಿಯ ಈ ದೇವಸ್ಥಾನದಲ್ಲಿ ನಡೆಯುವ ಹಬ್ಬದಲ್ಲಿ ದೇವರನ್ನು ರಾಟೆಯ ಉಯ್ಯಾಲೆಯಲ್ಲಿ ತೂಗುವ ವಿಶಿಷ್ಟ ಆಚರಣೆ ಇದೆ. ಈ ಉತ್ಸವಕ್ಕಾಗಿ ದೇವಾಲಯದ ಮುಂಭಾಗದಲ್ಲಿ ದೊಡ್ಡ ಕಬ್ಬಿಣದ ರಾಟೆಯನ್ನು ನಿರ್ಮಿಸಲಾಗಿದೆ. ಈ ರಾಟೆ ಉಯ್ಯಾಲೆ ಹಬ್ಬ ಎರಡು ವರ್ಷಕ್ಕೊಮ್ಮೆ ನಡೆಯುತ್ತದೆ. ಈ ಆಚರಣೆ ಹಲವಾರು ವರ್ಷಗಳಿಂದ ಈ ಭಾಗದ ಜನರ ನಂಬಿಕೆಯ ಪ್ರತೀಕವಾಗಿ ನಡೆದುಕೊಂಡು ಬಂದಿದೆ.

ಬಲ್ಲಮಾವಟಿ, ಪೇರೂರು, ಹಾಗೂ ಪುಲಿಕೋಟು ಗ್ರಾಮಗಳ ವ್ಯಾಪ್ತಿಗೆ ಸೇರಿದ ಬಲ್ಲತ್ತನಾಡಿನ ಪುರಾತನ ಭಗವತಿ ಭದ್ರಕಾಳಿ ದೇವಾಲಯ ರಾಟೆ ದೇವಾಲಯ ಎಂದೇ ಪ್ರಸಿದ್ಧವಾಗಿದೆ. ಪ್ರತಿವರ್ಷ ಏಪ್ರಿಲ್ ತಿಂಗಳಲ್ಲಿ ಇಲ್ಲಿ ವಾರ್ಷಿಕ ಉತ್ಸವ ನಡೆಯುತ್ತದೆ. ದೇವರನ್ನು ರಾಟೆಯಲ್ಲಿ ತೂಗುವುದು ಸೇರಿದಂತೆ ಹಲವು ವಿಶೇಷ ಪೂಜಾ ಕಾರ್ಯಕ್ರಮಗಳೊಂದಿಗೆ ಹಬ್ಬ ಆಚರಿಸಲಾಗುತ್ತದೆ. ಬಲ್ಲಮಾವಟಿ ಹಾಗೂ ಸುತ್ತಮುತ್ತಲಿನ ಊರುಗಳ ಜನರಲ್ಲಿ ಪ್ರೀತಿ ವಿಶ್ವಾಸ ಹಾಗೂ ಬಾಂಧವ್ಯ ವೃದ್ದಿಗಾಗಿ ಈ ಹಬ್ಬ ಆಚರಿಸಲಾಗುತ್ತದೆ. ಭದ್ರಕಾಳಿ ಅಮ್ಮನ ವಿಗ್ರಹವನ್ನು ರಾಟೆ ಉಯ್ಯಾಲೆಯಲ್ಲಿ ತೂಗುವುದು ಮಾತ್ರವಲ್ಲದೆ ಬೇಡು ಹಬ್ಬ, ಪೀಲಿಯಾಟ್ ಮುಂತಾದ ಸಾಂಪ್ರದಾಯಿಕ ಆಚರಣೆಗಳು ನಡೆಯುತ್ತವೆ.

**ಓಂಕಾರೇಶ್ವರ ಜಾತ್ರೆ**

ನಿಸರ್ಗದ ಚೆಲುವ ಸವಿಯ ಬಂದವರು, ಮನಮೋಹಕ ತಾಣಗಳ ಸೌಂದರ್ಯದಿಂದ ಆಕರ್ಷಿತ ರಾದವರು, ಪ್ರವಾಸಿಗರು, ಮಕ್ಕಳಾದಿಯಾಗಿ ಕೊಡಗಿನ ಮಡಿಕೇರಿಯಲ್ಲಿರುವ ಐತಿಹಾಸಿಕ ಓಂಕಾರೇಶ್ವರ ದೇವಾಲಯ ಅಪರಿಚಿತವೇನಲ್ಲ. ನಗರಕ್ಕ ಅಂಟಿಕೊಂಡೆ ಇರುವ ಮಡಿಕೇರಿಯ ಈ ಆಕರ್ಷಕ ದೇವಾಲಯ ಸಮಸ್ತ ಭಕ್ತ ಬಂಧುಗಳ ಧಾರ್ಮಿಕ ಕೇಂದ್ರವಾಗಿದೆ.

ಹಿಂದೆ ಕೊಡಗನ್ನು ಆಳುತ್ತಿದ್ದ ಅರಸ ಲಿಂಗರಾಜ ಕಾಶಿಯಿಂದ ಲಿಂಗವನ್ನು ತರಿಸಿ ಕ್ರಿ.ಶ ೧೮೨೦ರಲ್ಲಿ ನಿರ್ಮಿಸಿದ ಈ ದೇಗುಲ ಕೊಡಗಿನ ಅರಸರ ಕಾಲದಲ್ಲಿ ಕಂಗೊಳಿಸಿ ಅರಸು ಮನೆತನದ ವೈಭವವನ್ನು ಈಗಲೂ ಸಾರುವಂತಿದೆ. ಲಿಂಗರಾಜನು ಬ್ರಾಹ್ಮಣ ಹತ್ಯಾದೋಷದಿಂದ ವಿಮುಕ್ತನಾಗಲು ಕಟ್ಟಿಸಿದ ದೇವಲಯ ಎಂದು ಹೇಳುತ್ತಾರೆ.

ಈ ದೇವಾಲಯವು ಇಡೀ ರಾಜ್ಯದಲ್ಲಿಯೇ ವಿನೂತನವಾದ ರಚನೆಯನ್ನು ಹೊಂದಿದೆ. ಇದು ಇಸ್ಲಾಂ ಮತ್ತು ರೋಮನ್ ವಾಸ್ತುಶಿಲ್ಪಗಳ ಪ್ರಭಾವವಿರುವ ಏಕೈಕ ಹಿಂದೂ ದೇವಾಲಯ ಎಂಬ ಖ್ಯಾತಿಯನ್ನು ಹೊಂದಿದೆ.

ಈ ದೇವಾಲಯದಲ್ಲಿ ಪ್ರತಿವರ್ಷಕ್ಕೊಮ್ಮೆ ಬಹಳ ವಿಜೃಂಭಣೆಯಿಮದ ಜಾತ್ರೆಯು ಜರುಗುತ್ತದೆ. ಈ ಜಾತ್ರೆಯಲ್ಲಿ ತೆಪ್ಪೋತ್ಸವ ನಡೆಸಲಾಗುತ್ತದೆ. ಉತ್ಸವ ಮೂರ್ತಿಯಲ್ಲಿ ತೆಪ್ಪದ ಮೇಲೆ ಧಾರ್ಮಿಕ ವಿಧಿ ವಿಧನಗಲ ಮೂಲಕ ಪೂಜಿಸಿ ದೇವಾಲಯದ ಎದುರಿಗೆ ಇರುವ ಕೊಳದಲ್ಲಿ ತೆಪ್ಪೋತ್ಸವವನ್ನು ನಡೆಸುತ್ತಾರೆ. ಈ ತೆಪ್ಪೊತ್ಸವಕ್ಕೆ ರಾಜ್ಯದ ನಾನಾ ಭಾಗಗಳಿಂದ ಭಕ್ತ ಸಮೂಹವು ಜಮೈಸಿ ಜಾತ್ರೆ ಮತ್ತಷ್ಟು ಮೆರಗು ಉಂಟಾಗುತ್ತದೆ. ದೇವಾಲಯ ಶಾಸನಗಳಲ್ಲಿಯೂ ಈ ಬಗೆ ಪ್ರಸ್ತಾಪಿಸಲಾಗಿದೆ. ಕಾಲಕಾಲಕ್ಕೆ ಉತ್ಸವ ಜರುಗುವಂತೆ ಲಿಂಗರಾಜನು ವ್ಯವಸ್ಥೆಗೊಳಿಸಿರುವ ಬಗೆಗೆ ಉಲ್ಲೇಖವಿದೆ. ಈ ಜಾತ್ರೆ ವಿಚಾರವನ್ನು ಸಿ.ಎಸ್.ಸುರೇಶ್‌ರವರು ತಿಳಿಸಿರುತ್ತಾರೆ.

**ಶಕ್ತಿದೇವತೆಗಳ ಕರಗೋತ್ಸವ**

ಇತಿಹಾಸದ ಪುಟ ತೆರೆದರೆ ಐದು ಶತಮಾನಗಳ ಹಿಂದೆ ಕೊಡಗು ಗಂಗರಸರು, ಚೆಂಗಾಳ್ವರ, ಚೋಳರ ಹೊಯ್ಸಳರ ಹಾಗೂ ವಿಜಯನಗರ ಸಾಮಾಟರ ಆಳ್ವಿಕೆಗೆ ಒಳಪಡುತ್ತಾ ಬಂದಿದೆ. ಇಲ್ಲಿ ೧೬೦೦ ರಿಂದ ೧೮೩೪ರವರೆಗೂ ಆಡಳಿತ ನಡೆಸಿದವರು ಹಾಲೇರಿ ವಂಶದ ಅರಸರು. ಮಡಿಕೇರಿಯ ದಸರಾವು ಸರಿ ಸುಮಾರು ಮುಮ್ಮಡಿಯವರ ಕಾಲಕ್ಕೆ ಮೈಸೂರಿನಂತೆ ಈ ರಾಜವಂಶದವರ ಕಾಲದಲ್ಲೇ ಆರಂಭವಾಗಿದೆ. ಹಾಗಾಗಿ ಇಲ್ಲಿ ಪ್ರತಿವರ್ಷವೂ ಮೈಸೂರಿನ ದಸರದ ದಿನವೆ ಇಲ್ಲಿ ದಸರ ಜರುಗುತ್ತದೆ.

ರಾಜರ ಕಾಲದಿಂದಲೂ ಆರಾಧನೆಗೊಳ್ಳುತ್ತಾ ಬಂದಿರುವ ಶಕ್ತಿದೇವತೆಗಳೆಂದರೆ, ಮಡಿಕೇರಿಯಲ್ಲಿ ಕುಂದೂರು ಮೊಟ್ಟೆ ಮಾರಿಯಮ್ಮ, ಕಂಚಿಕಾಮಾಕ್ಷಿಯಮ್ಮ, ಕೋಟೆ ಮಾರಿಯಮ್ಮ ಮತ್ತು ದಂಡಿನ ಮಾರಿಯಮ್ಮ. ಈ ನಾಲ್ಕು ಶಕ್ತಿ ದೇವಾಲಯಗಳು ಕೊಡಗಿನ ನಾಲ್ಕು ದಿಕ್ಕುಗಳಲ್ಲಿ ನೆಲೆ ನಿಂತು ಕೊಡಗಿನ ರಕ್ಷಣೆಗೆ ಕಾವಲಿರುವಂತೆ ಸಂದರ್ಭದ ಮೊದಲನೇ ದಿನವೇ ಕರಗೋತ್ಸವ ಪ್ರಾರಂಭವಾಗುತ್ತದೆ.

ಕುಂದೂರು ಮೊಟ್ಟೆಯ ಶ್ರೀ ಚಾಮುಂಡೇಶ್ವರಿ ದೇವಾಲಯಕ್ಕೆ ಸುಮಾರು ೩೦೦ ವರ್ಷಗಳ ಚರಿತ್ರೆ ಇದೆ. ಶತಮಾನಗಳ ಹಿಂದೆ ಕೊಡಗು ಪಾಳೆಗಾರರ ಆಡಳಿತದಲ್ಲಿತ್ತು. ಈ ಸಂದರ್ಭದಲ್ಲಿ ಮಲೇರಿಯಾ, ಪ್ಲೇಗ್, ಮಾರಿಬೇನೆ ಮುಂತಾದ ಭೀಕರ ರೋಗಗಳಿಗೆ ಅಂದಿನ ಜನತೆ ತುತ್ತಾಗುತ್ತಿದ್ದರಂತೆ. ಇದನ್ನೆಲ್ಲ ನಿವಾರಣೆ ಮಾಡಲೆಂದೆ ಈ ದೇವಾಲಯವನ್ನು ನಿರ್ಮಿಸಿದರೆಂದು ಈ ದೇವಾಲಯದ ಅರ್ಚಕ ಸತೀಶ್‌ರವರು ತಿಳಿಸಿದ್ದಾರೆ.

ಮಡಿಕೇರಿಯ ಗೌಳಿಬೀದಿಯಲ್ಲಿರುವ ಶ್ರೀ ಕಂಚಿಕಾಮಾಕ್ಷಿ ದೇವಾಲಯ ನಾಲ್ಕು ಕರಗ ದೇವಸ್ಥಾನಗಳ ಪೈಕಿ ಪ್ರಮುಖವಾದುದು. ಹಿಂದೆ ಅರಸರ ಕಾಲದಲ್ಲಿ ತಮಿಳುನಾಡಿನಿಂದ ವಲಸೆ ಬಂದ ನಾಯಕರು ಕಂಚಿ ಕಾಮಾಕ್ಷಿ ದೇವಾಲಯದ ಪೂಜೆ ಪುರಸ್ಕಾರ ಹಾಗೂ ಉತ್ಸವಗಳನ್ನು ಆಚರಿಸಿಕೊಂಡು ಬರುತ್ತಿದ್ದಾರೆ. ಹಿಂದೆ ಅರಸರ ಕಾಲದಲ್ಲಿ ಈ ದೇವಾಲಯದ ಗುಡಿ ಪುಟ್ಟ ಗುಡಿಸಲಾಗಿ ಮಣ್ಣಿನ ಗೋಡೆಯಿಂದ ಕೂಡಿದ್ದು ನಂತರದ ದಿನಗಳಲ್ಲಿ ಸ್ವರೂಪ ಬದಲಾವಣೆ ಹೊಂದುತ್ತ ಎರಡು ಸಲ ಜೀರ್ಣೋದ್ಧಾರಗೊಂಡಿದೆ.

ಮಡಿಕೇರಿಯ ಗೌಳಿ ಬೀದಿ ಬಳಿಯ ಶ್ರೀ ಕೋಟೆಮಾರಿಯಮ್ಮ ದೇವಾಲಯವು ಹಲವು ವರ್ಷಗಳ ಇತಿಹಾಸವನ್ನು ಹೊಂದಿರುವ ಮತ್ತೊಂದು ದೇವಾಲಯವಾಗಿದ್ದು ಇಲ್ಲೂ ನವರಾತ್ರಿಯಂದು ಕರಗೋತ್ಸವ ಜರುಗುತ್ತದೆ. ಹಾಗೆಯೇ ಶ್ರೀ ದಂಡಿನ ಮಾರಿಯಮ್ಮ ದೇವಾಲಯವು ಸುಮಾರು ೧೫೦ ವರ್ಷಗಳ ಇತಿಹಾಸವನ್ನು ಹೊಂದಿದ್ದು ಕರಗೋತ್ಸವವನ್ನು ನಡೆಸಲಾಗುತ್ತದೆ. ದಸರಾ ಸಂದರ್ಭದಲ್ಲಿ ಈ ದೇವಾಲಯಕ್ಕೆ ನಾಲ್ಕು ಕರಗಗಳು ಆದ ಬಳಿಕವೇ ಬನ್ನಿ ಮರ ಕಡಿಯಲು

ದಂಡೆತ್ತುವ ಪರಿಪಾಠವಿದೆ. ಈ ಕರಗೋತ್ಸವದ ಬಗ್ಗೆ ಹಾಗೂ ದೇವಾಲಯದ ಬಗ್ಗೆ ಕುಂದೂರು ಮೊಟ್ಟೆಯ ಶ್ರೀ ಚಾಮುಂಡೇಶ್ವರಿ ದೇವಾಲಯದ ಅರ್ಚಕರಾದ ಸತೀಶ್ ಎಂಬ ವ್ಯಕ್ತಿವಿನಿಂದ ವಿವರ ಪಡೆಯಲಾಗಿದೆ.

**ಶಿವಪಾರ್ವತಿ ಮರಗೋಡು ಜಾತ್ರೆ**

ಮರಗೋಡು ಗ್ರಾಮವು ಮಡಿಕೇರಿ ತಾಲೂಕಿಗೆ ಸೇರಿದ್ದು ಇಲ್ಲಿ ಸುಂದರವಾದ ಶಿವಪಾರ್ವತಿ ದೇವಾಲಯವಿದೆ. ಇಲ್ಲಿನ ದೇವರು ಶಿವ ಮತ್ತು ಪಾರ್ವತಿ. ಈ ಶಿವನ ಆದಿ ನಲೆಯ ಕುಂದುಮೆ ಎಂಬ ಗ್ರಾಮವಾಗಿದೆ. ಅಲ್ಲಿ ಶಿವನ ಮೂರ್ತಿ ಇದೆ. ಇಲ್ಲಿ ನಿತ್ಯವು ಪೂಜೆ ನಡೆಯುತ್ತದೆ. ಆಧರೆ ಮರಗೋಡು ಎಂಬಲ್ಲಿ ಹೊಸದಾಗಿ ದೇವಾಲಯ ನಿರ್ಮಿಸಿ ಅಲ್ಲಿ ಶಿವಪಾರ್ವತಿ ಪ್ರತಿಷ್ಠಾಪಿಸಿ ಪ್ರತಿವರ್ಷ ಇಲ್ಲಿನ ದೇವಾಲಯ ಸಮಿತಿಯವರು ಹಾಗೂ ಗ್ರಾಮಸ್ಥರು ಸೇರಿ ಏಪ್ರಿಲ್ ೩೦ನೇ ತಾರೀಖಿನಂದು ಎರಡು ದಿನಗಳ ಕಾಲ ಜಾತ್ರೆಯನ್ನು ನಡೆಸುತ್ತಾರೆ.

ಈ ದೇವಾಲಯ ಹಾಗೂ ದೇವಾಲಯದ ಒಡೆತನ ಐದು ತಕ್ಕ ಮುಖ್ಯಸ್ಥರ ಒಡೆತನದಲ್ಲಿದೆ. ಅವುಗಳೆಂದರೆ ತಾತಾಪಂಡ ನಾಡತಕ್ಕ, ಪಾಂಡನ ದೇವತಕ್ಕ, ಮುಕ್ಕಾಟೆ ಪರಿಯಪ್ಪಮ್ಮ ಮತ್ತು ಪಚ್ಚಾರಾಂಡ ಈ ಐದು ಮನೆತನದವರು ಈ ದೇವಾಲಯದ ತಕ್ಕ ಮುಖ್ಯಸ್ಥರಾಗಿದ್ದು ಇವರುಗಳ ಉಸ್ತುವಾರಿಕೆ ಹಾಗೂ ಮೇಲ್ವಿಚಾರಣೆಯಲ್ಲಿ ಪ್ರತಿವರ್ಷ ಜಾತ್ರೆ ನಡೆಯುತ್ತದೆ.

ಜಾತ್ರೆ ಪ್ರಾರಂಭ ಆಗುವ ಮುಂಚೆ ಎರಡು ದಿನಗಳವರೆಗೆ ಅವರದೆ ಆದ ಕಟ್ಟುಪಾಡುಗಳನ್ನು ಮಾಡಿಕೊಂಡು ಅದರಂತೆ ತುಂಬಾ ಕಟ್ಟುನಿಟ್ಟಿನಿಂದ ಅಲ್ಲಿ ಗ್ರಾಮಸ್ಥರು ಹಾಗೂ ಸಮಿತಿಯವರು ಇರುತ್ತಾರೆ. ಹಸಿ ಮರ ಕಡಿಯುವ ಹಾಗಿಲ್ಲ. ಯಾವುದಕ್ಕು ಹಿಂಸೆ ಮಾಡುವಹಾಗಿಲ್ಲ. ಪ್ರಾಣಿಬಲಿ ನೀಡುವಹಾಗಿಲ್ಲ ಹೀಗೆ ಜಾತ್ರೆ ಪ್ರಾರಂಭ ಆಗವು ಏಳು ದಿನಗಳ ಮುಂಚೆ ಕಟ್ಟುಪಾಡು ಮಾಡಿಕೊಂಡಿರುತ್ತಾರೆ. ಪಾಂಡವ ಎಂಬುತಕ್ಕ ಮುಖ್ಯಸ್ಥರು ದೇವತಕ್ಕರಾಗಿರುವುದರಿಂದ ಇವರ ಮನೆಯಲ್ಲಿ ದೇವರ ಭಂಡಾರ ಇರುತ್ತದೆ. ಅಂದರೆ ದೇವರ ವಿಗ್ರಹ, ಅಲಂಕಾರಕ ವಸ್ತುಗಳ ದೇವರಿಗೆ ಸಂಬಂಧಿಸಿದ ವಸ್ತುಗಳು, ಇವುಗಳನ್ನು ಧಾರ್ಮಿಕ ವಿಧಿ, ಆಚರಣೆ ಮೂಲಕ ದೇವರ ಪೂಜಾ ಕಾರ್ಯ ಮಾಡಿ ಉತ್ಸವ ಮೂರ್ತಿಯನ್ನು ತಡಂಬು ಹೊತ್ತು ಕುಂದುಮೆ (ಆದಿಸ್ಥಾನ) ಯಿಂದ ಮರಗೋಡು ದೇವಾಲಯಕ್ಕೆ ತರುತ್ತಾರೆ.

ಪಟ್ಟಣಿ:- ದೇವರಿಗೆ ಪಾಯಸದ ನೈವೇದ್ಯ ಮಾಡುವವರೆಗೂ ಊರಿನ ಪ್ರತಿಯೊಬ್ಬರು ಉಪವಾಸ ಇರುತ್ತಾರೆ. ಅಂದರೆ ಸಾಂಬಾರ್ ತಿನ್ನುವುದಿಲ್ಲ. ಬದಲಾಗಿ ಇಡ್ಲಿ ದೋಸೆ ಮಾತ್ರ ಸೇವಿಸುತ್ತಾರೆ. ನೈವೇದ್ಯ ಆದ ಮೇಲೆ ಮಾತ್ರ ಎಲ್ಲರೂ ಉಪವಾಸ ಬಿಡುತ್ತಾರೆ ಇದನ್ನು ಪಟ್ಟಣಿ ಎನ್ನುವರು.

**ಎತ್ತು ಪೊರಾಟ**

ಈ ಜಾತ್ರೆಯಲ್ಲಿ ಎತ್ತು ಪೊರಾ ಜರುಗಿಸಲಾಗುತ್ತದೆ. ಉತ್ಸವಮೂರ್ತಿಯನ್ನು ತಲೆಮೇಲಿಟ್ಟು, ಅದರ ಹಿಂದೆ ಎತ್ತುಗಳ ಭುಜದ ಮೇಲೆ ಆರ್ಯೆಯನ್ನಿಟ್ಟು ದೇವಾಲಯದ ಸುತ್ತ ಸುತ್ತುವುದೆ ಎತ್ತು ಪಾರಾಟವಾಗಿದ್ದು ಈ ಜಾತ್ರೆಯಲ್ಲಿ ದೇವಾಲಯದ ಸುತ್ತ ಒಂಬತ್ತು ಸುತ್ತು ಸುತ್ತುತ್ತಾರೆ. ಇದನ್ನು ನೋಡಲು ಜನ ಮುಗಿಬೀಳುತ್ತಾರೆ.

ಇದಲ್ಲದೆ ಮನೋರಂಜನೆಗಾಗಿ ತೆಂಗಿನಕಾಯಿಗೆ ಗುಂಡು ಹೊಡೆಯುವುದು ಅಂಬುಕಾಯ ಕೀಳುವುದು ಈ ಆಟವನ್ನು ಆಡಿಸುತ್ತಾರೆ. ಇದಾದ ಮೇಲೆ ಮಹಾಪೂಜೆ ಜರುಗುತ್ತದೆ. ಜರುಗಿದ ಮೇಲೆ ಅಲ್ಲಿ ನೆರೆದಿರುವ ಎಲ್ಲಾ ಭಕ್ತರಿಗೂ ಅನ್ನದಾನ ನೀಡಲಾಗುತ್ತದೆ.

ಎರಡನೆಯ ದಿನ ಸಂಜೆ ಈ ದೇವಾಲಯದಲ್ಲಿ ದೈವಕೋಲನಗಳನ್ನು ನಡೆಸಲಾಗುತ್ತದೆ. ತೋತ ಅಜ್ಜಪ್ಪ, ನೊಚ್ಚಟೆ ವಿಷ್ಣುಕೋಲ ಹೀಗೆ ಒಟ್ಟು ೮ ಕೋಲಗಳು ಆ ರಾತ್ರಿ ಪೂರಾ ನಡೆಯುತ್ತದೆ. ಈ ಕೋಲಗಳ ನೃತ್ಯ, ತಾಳಮೇಳ, ವಾದ್ಯಗಳ ಶಬ್ದ ಕೇಳಲು, ನೋಡಲು ಮನಮೋಹಕ ದೃಶ್ಯವಾಗಿ ಕಂಡು ಬರುತ್ತದೆ.

ಇದಾದ ಮೇಲೆ ಮಹಾಪೂಜೆಯೊಂದನ್ನು ಮಾಡಿ ಉತ್ಸವಮೂರ್ತಿ, ಭಂಡಾರಪೆಟ್ಟಿಗೆಯನ್ನು ಪುನಹ ಪಾಂಡನ ಮುಖ್ಯಸ್ಥರ ಐನ್ ಮನೆಯಲ್ಲಿ ಇಡಲಾಗುತ್ತದೆ. ಹೀಗೆ ಮರಗೋಡು ಎಂಬಲ್ಲಿ ಶಿವಪಾರ್ವತಿ ದೇವರ ಜಾತ್ರೆಯು ಎರಡು ದಿನಗಳ ಕಾಲ ಬಹಳ ವಿಜೃಂಭಣೆಯಿಂದ ಜರುಗುತ್ತದೆ.

ವಕ್ತೃ ಹೇಳುವ ಪ್ರಕಾರ ಈ ಜಾತ್ರೆಗೆ ೩೦೦೦ ಜನ ಸೇರುತ್ತಾರಂತೆ. ಈ ಜಾತ್ರೆಯಲ್ಲಿನ ಖರ್ಚು ವೆಚ್ಚವೆಲ್ಲವನ್ನು ಜಾತ್ರೆಗೆಂದು ನೀಡಿದ ಹಣದಿಂದ ಹಾಗೂ ದೇವಾಲಯದ ಸಮಿತಿಯಲ್ಲಿನ ಹಣದಿಮದ ಭರಿಸಲಾಗುತ್ತದೆ. ಈ ಮೇಲಿನ ಜಾತ್ರೆಯ ಇವಳವನ್ನು ವಕ್ತೃಗಳಾದ ಕಾನಡ್ಕ ಬಸಪ್ಪ, ಪಾಂಡನ ಆರ್ ವಿಘ್ನೇಶ್, ಅರ್ಚಕರಾದ ಮಹೇಶ್‌ಭಟ್‌ರರು ಮಾಹಿತಿ ನೀಡಿರುತ್ತಾರೆ.

# ವಿರಾಜಪೇಟೆ ತಾಲೂಕಿನ ಜಾತ್ರೆಗಳು

| | | |
|---|---|---|
| * | ಪನ್ನಂಗಾಲ ತಮ್ಮೆ ಜಾತ್ರೆ | – ಅರಮೇರಿ, ಯವಕಪಾಡಿ |
| * | ಶ್ರೀ ಭಗವತಿ ಕೈಕೇರಿ ಜಾತ್ರೆ | – ಗೋಣಿಕೊಪ್ಪ |
| * | ಶ್ರೀ ಉಮಾ ಮಹೇಶ್ವರಿ ಜಾತ್ರೆ | – ಗೋಣಿಕೊಪ್ಪ |
| * | ಶ್ರೀ ಅಯ್ಯಪ್ಪ ಜಾತ್ರೆ– ಪೊನ್ನಂಪೇಟೆ | – ಪೊನ್ನಂಪೇಟೆ |
| * | ಶ್ರೀ ಮಂದತವ್ವ ಜಾತ್ರೆ | – ಬೆಕ್ಕೆಸೊಡ್ಲು |
| * | ಅಂದಗಾಲ ಶ್ರೀ ಸುಬ್ರಹ್ಮಣ್ಯ ಜಾತ್ರೆ | – ಅಂದಗಾಲ |
| * | ವಗರೆ ಶ್ರೀ ಈಶ್ವರ ಅಯ್ಯಪ್ಪ ಜಾತ್ರೆ | – ವಗರೆ |
| * | ಶ್ರೀ ಮೃತ್ಯುಂಜಯ ಜಾತ್ರೆ | – ಬಾಡಗರಕೇರಿ |
| * | ಶ್ರೀ ಪುತ್ತು ಭಗವತಿ ಜಾತ್ರೆ | – ಬಿರುನಾಣಿ |
| * | ಕೊರಕೋಟು ಶ್ರೀ ಅಯ್ಯಪ್ಪ ಜಾತ್ರೆ | – ಕರಕೋಟು |
| * | ಹೇರ್ಮಾಡು ಶ್ರೀ ಈಶ್ವರ ಜಾತ್ರೆ | – ಬಾಡಗ |
| * | ಇರ್ಪು ಶ್ರೀ ರಾಮೇಶ್ವರ ಜಾತ್ರೆ | – ಇರ್ಪು |
| * | ಶ್ರೀ ಪೆರುಮಾಳೇಶ್ವರ ಜಾತ್ರೆ | – ತಾವಳಗೇರಿ |
| * | ಶ್ರೀ ಪೆರುಮಾಳ್ ಶಾರ್ತಾವು ಜಾತ್ರೆ | – ಚೆಲವಾರ |
| * | ಶ್ರೀ ಮಲೆ ಮಹದೇಶ್ವರ ಜಾತ್ರೆ | – ಮಗ್ಗುಲ |
| * | ಕುದ್ರೆ ಹಬ್ಬದ ಜಾತ್ರೆ | – ಕುಂದ |
| * | ಕಾಕೋಟು ಪರಂಬು ಜಾತ್ರೆ | – ಕಾಕೋಟು |
| * | ಕುಟ್ಟತ್ತಮ್ಮ ಜಾತ್ರೆ | – ಕುಟ್ಟ |
| * | ಕೋತೂರು ಮಾರಿಯಮ್ಮ ಜಾತ್ರೆ | – ಕೋತೂರು |
| * | ಶ್ರೀ ಭದ್ರಕಾಳೀ ಮತ್ತು ಶ್ರೀ ಮಹಾವಿಷ್ಣು ಜಾತ್ರೋತ್ಸವ | – ಕಲ್‌ಮಡಗೇರಿ |
| * | ಬೈರಂಬಾಡ ಷಷ್ಠಿ ಜಾತ್ರೆ | – ಬೈರಂಬಾಡ |
| * | ಬಿಟ್ಟಂಗಾಲ ಭಗವತಿ ಮತ್ತು ಮಹಾವಿಷ್ಣು ಜಾತ್ರೆ | – ಬಿಟ್ಟಂಗಾಲ |

## ೪.೨ ವಿರಾಜಪೇಟೆ ತಾಲ್ಲೂಕಿನ ಜಾತ್ರೆಗಳು

### ಪನ್ನಂಗಾಲ ತಮ್ಮೆ ಜಾತ್ರೆ

### ಅರಮೇರಿ ಗ್ರಾಮದಲ್ಲಿನ ಉತ್ಸವ

ಅರಮೇರಿ ಗ್ರಾಮದಲ್ಲಿ ಪ್ರತಿವರ್ಷ ಏಪ್ರಿಲ್ ೧೨ ಮತ್ತು ೧೩ನೇ ತಾರೀಖಿನಂದು ಈ ಉತ್ಸವವನ್ನು ಆಚರಿಸುತ್ತಾರೆ. ಈ ದೇವಾಲಯದಲ್ಲಿ ನೆಲೆ ನಿಂತಿರುವ ದೇವರುಗಳೆಂದರೆ, ಕರಿಚಾಮುಂಡಿ, ಪುಲಿ ಚಾಮುಂಡಿನಾಥ(ಸುಬ್ರಹ್ಮಣಿ) ಅಯ್ಯಪ್ಪ, ಅಜ್ಜತಂಬೀರ, ಮುಂತಾದ ದೇವರುಗಳನ್ನು ಅಲ್ಲಿ ಪ್ರತಿಷ್ಠಾಪಿಸಲಾಗಿದೆ. ಪ್ರತಿ ದೇವತೆಗು ಪ್ರತಿಯೊಬ್ಬ ಪುರೋಹಿತರನ್ನು ನೇಮಿಸಲಾಗಿದೆ.

ಉತ್ಸವ ನಡೆಯುವ ಏಳುದಿನ ಮುಂಚೆ ಕಟ್ಟು ಬೀಳುತ್ತದೆ. ಅದರಂತೆ ಅವರದೆ ಆದ ನೀತಿ ನಿಯಮ ಗಳನ್ನು ಆಚರಿಸುತ್ತಾರೆ. ಮನೆಯ ಹೊರಗೆ ಮಲಗುವುದು, ಮರಗಳನ್ನು ಏರದಿರುವುದು, ಹಣ್ಣು ಕೀಳದಿರುವುದು. ಸೌದೆ ಕಡಿಯದಿರುವುದು ಹೀಗೆ ಹತ್ತು ಹಲವಾರು ಕಟ್ಟುಪಾಡುಗಳನ್ನು ಮಾಡಿಕೊಂಡು ಉತ್ಸವವನ್ನು ಆಚರಿಸುತ್ತಾರೆ. ಮೊದಲನೆಯ ದಿನ ಉತ್ಸವ ಮೂರ್ತಿಯನ್ನು ಹೊಳೆಯಲ್ಲಿ ಮಜ್ಜನ ಮಾಡಿಸಿ ಪೀಪಿ ಒಲಗ ನೃತ್ಯದೊಂದಿಗೆ ದೇವಾಲಯಕ್ಕೆ ತಂದು ಪ್ರತಿಷ್ಠಾಪಿಸಿ ನಂತರ ಕೊಡೆಯನ್ನು ಹಿಡಿದು ನೃತ್ಯ ಮಾಡುತ್ತ ಅಲ್ಲಿನ ಎಲ್ಲಾ ಮುಖ್ಯಸ್ಥರು ಪುರೋಹಿತರು ದೇವಾಲಯದ ಸುತ್ತ ಭಕ್ತಿ ಪೂರ್ವಕವಾಗಿ ಸುತ್ತುತ್ತಾರೆ. ಅದಾದ ಮೇಲೆ ತಕ್ಕ ಮುಖ್ಯಸ್ಥ ಮನೆತನದವರು ನೆರವೇರಿಸಿಕೊಡುತ್ತಾರೆ. ಎತ್ತು ಪಾರೋಟವನ್ನು ತಕ್ಕ ಮುಖ್ಯಸ್ಥರು ಎತ್ತುಗಳು ಮೇಲೆ ಅಕ್ಕಿ ಚೀಲ ವನ್ನಿಟ್ಟು ಭಕ್ತಿಪೂರ್ವಕವಾಗಿ ದೇವಾಲಯದ ಸುತ್ತ ಸುತ್ತಿ ಅಕ್ಕಿಯನ್ನು ದೇವಾಲಯದ ಸಮಿತಿಗೆ ಅರ್ಪಿಸುತ್ತಾರೆ. ಇದಾದ ನಂತರ ಹರಕೆಮಾಡಿಕೊಂಡವರು ಮಕ್ಕಳನ್ನು ತೊಟ್ಟಿಲಲ್ಲಿ ಕೂರಿಸಿ ದೇವಾಲಯದ ಸುತ್ತ ಸುತ್ತಿ ಬರುತ್ತಾರೆ.

ಇಲ್ಲಿ ಪ್ರತಿಯೊಂದು ದೇವರನ್ನು ಪೂಜಿಸುವ ಪುರೋಹಿತರಿಗೆ ಆಯಾದೇವರು ಆವಾಹನೆಯಾಗಿದೆ ಎಂದು ಆವೇಶಭರಿತರಾಗಿ ನೃತ್ಯ ಮಾಡುತ್ತಾರೆ. ಆಗಾಗ್ಗೆ ಅವರ ಕೈಯಲ್ಲಿರುವ ಕತ್ತಿಯಿಂದ ಹಣೆಯನ್ನು ಕೆಚ್ಚಿಕೊಳ್ಳುತ್ತಾರೆ. ರಕ್ತವು ಸಹ ಬರುತ್ತದೆ. ಇದು ಹಲವರಲ್ಲಿ ಭಕ್ತಿಯ ಪರಾಕಾಷ್ಟೇ ಎನಿಸುತ್ತದೆ. ವಾದ್ಯದ ತಾಳಕ್ಕೆ ತಕ್ಕಂತೆ ಕುಣಿಯುತ್ತ ಮೈಮೇಲೆ ಬಂದ ದೇವರು ಹೋದರೆಂದು ಜನರಿಗೆ ಮನವರಿಕೆಯಾಗಲು ಕುಸಿದು ಬೀಳುತ್ತಾರೆ. ಅವರನ್ನೆಲ್ಲ ಭಕ್ತಾದಿಗಳು ಬಂದು ಎತ್ತಿಕೊಂಡು ಹೋಗಿ ಅಲ್ಲಿ ಅವರಿಗೆ ವಿಶ್ರಾಂತಿ ನೀಡುತ್ತಾರೆ. ಇವರು ಈ ರೀತಿ ಸುಸ್ತಾಗಲು ಕಾರಣವೆಂದರೆ ಈ ದಿನ ಬೆಳಿಗ್ಗೆಯಿಂದಲೇ ಏನು ತಿನ್ನದೆ ಪೂಜಾ ಕಾರ್ಯ. ನೃತ್ಯದಲ್ಲಿ ತೊಡಗಿರು ವುದರಿಂದ ಸುಸ್ತಾಗುತ್ತಾರೆ ಎಂಬುದನ್ನು ನಾನು ಗಮನಿಸಿದೆ. ಈ ದಿನ ಪೂರ್ತಿ ಇದೆ ರೀತಿ ಉತ್ಸವ ಮೂರ್ತಿಯ ಮೆರವಣಿಗೆ ಪೂಜಾಕಾರ್ಯ ನಡೆಯುತ್ತದೆ. ಜೊತೆಗೆ ಅಲ್ಲಿ ನೆರದಿರುವ ಭಕ್ತ ಜನರು ಭಕ್ತಿಯ ಜೊತೆಗೆ ಜಾತ್ರೆಯಲ್ಲಿ ನೆರೆದಿರುವ ಅಂಗಡಿ ಮುಂಗಟ್ಟುಗಳಲ್ಲಿ ತಮಗೆ ಬೇಕಾದ

ವಸ್ತುಗಳನ್ನು ತಿನ್ನುವ ಕೊಳ್ಳುವ ಕಾರ್ಯವನ್ನು ಮಾಡುತ್ತಾರೆ. ಈ ಎಲ್ಲಾ ಕಾರ್ಯಗಳು ಈ ದೇವಾಲಯದ ತಕ್ಕ ಮುಖ್ಯಸ್ಥರಾದ ಡಾಲಿ ಬೆಳ್ಳಿಯಪ್ಪ ಹಾಗೂ ಪೂವಯ್ಯ ಇವರ ನೇತೃತ್ವದಲ್ಲಿ ಬಹಳ ಭಕ್ತಿಪೂರ್ವಕವಾಗಿ ಯಾವುದೇ ಗೊಂದಲವಿಲ್ಲದೆ ನೆರವೇರುತ್ತದೆ.

ಎರಡನೆಯ ದಿನವು ಸಹ ಉತ್ಸವ ಹಾಗೂ ಪೂಜಾ ಕಾರ್ಯ ನೆರವೇರುತ್ತದೆ. ಈ ದಿನ ಭಕ್ತರು ತಾವು ಮಾಡಿಕೊಂಡ ಹರಕೆಯನ್ನು ಒಪ್ಪಿಸುವ ದಿನವಾಗಿರುತ್ತದೆ. ಈ ಗ್ರಾಮದವರು ಬೇರೆ ಕಡೆ ಉದ್ಯೋಗ ಮದುವೆ, ನಿಮಿತ್ತ ಹೋಗಿದ್ದರು. ಈ ಜಾತ್ರೆಗೆ ತಪ್ಪದೆ ಹಾಜರಾಗಿ ದೇವರ ಭಕ್ತಿಗೆ ಪಾತ್ರರಾಗುತ್ತಾರೆ. ಈ ದಿನ ಎಲ್ಲಾ ದೇವರುಗಳ ಮುಂದೆ ಭಂಡಾರದ ಪೆಟ್ಟಿಗೆ ಇದ್ದು ಭಕ್ತರು ಪೂಜೆಯ ನಂತರ ಭಂಡಾರವನ್ನು ( ಹಣ)ಹುಂಡಿಗೆ ಹಾಕುತ್ತಾರೆ. ದೇವರು ಮೈಮೇಲೆ ಬಂದು ನೃತ್ಯ ಮಾಡುತ್ತ ಪುರೋಹಿತರಿಗೆ ಹೂಮಾಲೆ ಅರ್ಪಿಸುತ್ತಾರೆ. ಇದರ ಜೊತೆಗೆ ಇಲ್ಲಿನ ಎಲ್ಲಾ ಭಕ್ತರು ನಾಥ ಎಂಬ ದೇವರಲ್ಲಿ ಮದ್ಯಪಾನ ನೀಡುವ ಹರಕೆಯನ್ನು ಮಾಡಿದ್ದು ಅದನ್ನು ಒಪ್ಪಿಸುವ ಸಲುವಾಗಿ ಸಾಲಾಗಿ ನಿಲ್ಲುತ್ತಾರೆ. ಇದು ವಿಚಿತ್ರವೆನಿಸಿದರು ಸತ್ಯವು ಹೌದು. ಇವರುಗಳ ಹರಕೆಗಳಲ್ಲಿ ಇದು ಒಂದು ಹರಕೆಯಾಗಿದೆ. ಪ್ರತಿಯೊಬ್ಬರು ತಮ್ಮ ಹರಕೆಯಂತೆ ಅವರಿಗೆ ಸರಿ ಎನಿಸಿದ ವಿವಿಧ ಬ್ರಾಂಡ್‌ನ ಮಧ್ಯವನ್ನು ಕೈಯಲ್ಲಿ ಹಿಡಿದು ಅದನ್ನು ಆರಾಧಿಸುವ ಪುರೋಹಿತರ ಹತ್ತಿರ ತಂದುಕೊಡುತ್ತಾರೆ. ಅವರು ಅದರ ಮುಚ್ಚಳವನ್ನು ಹರಿದು ಮಣ್ಣಿನ ಬಟ್ಟಲಿಗೆ ಮದ್ಯವನ್ನು ಸುರಿದು ಆ ಬಟ್ಟಲಿನಿಂದ ಪುರೋಹಿತ ಸ್ವಲ್ಪ ಸೇವಿಸಿ ಹರಕೆ ಒಪ್ಪಿಸಿದವರ ತಲೆಯ ಮೇಲೆ ಕೈಯನ್ನಿಟ್ಟು ಆಶೀರ್ವದಿಸಿ ಕಳುಹಿಸುತ್ತಾರೆ. ಹೀಗೆ ನೂರಾರು ಭಕ್ತರುಗಳು ಸಾಲಿನಲ್ಲಿ ನಿಂತು ತಮ್ಮ ಹರಕೆಯನ್ನು ಒಪ್ಪಿಸಿ ಮನಸ್ಸನ್ನು ಉಲ್ಲಾಸಪಡಿಸಿಕೊಳ್ಳುತ್ತಾರೆ.

ಇದಾದ ನಂತರ ಮತ್ತೊಂದು ಹರಕೆ ಎಂದರೆ ಇಲ್ಲಿರುವ ದೇವರಿಗೆ ಸಂತೃಪ್ತಿಪಡಿಸಲು ಸಲುವಾಗಿ ಭಾರಣೆಯನ್ನು ನಡೆಸುತ್ತಾರೆ. ಅಂದರೆ ಪ್ರಾಣಿ ಬಲಿ ನೀಡುವುದಾಗಿದೆ. ಇಲ್ಲಿರುವ ಕೆಲವು ದೇವರಿಗೆ ಕೋಳಿ ಬಲಿ, ಆಡು ಹಾಗೂ ಹಂದಿ ಬಲಿಯನ್ನು ಆಯಾ ದೇವರುಗಳ ಮುಂದೆ ಬಲಿ ಕಲ್ಲಿನ ಹತ್ತಿರ ನೀಡುತ್ತಾರೆ. ಇದನ್ನು ಕಡಿಯುವವರು ಆವೇಶ ಭರಿತರಾಗಿ ಕತ್ತಿಯಿಂದ ಪ್ರಾಣಿಗಳನ್ನು ಕಡಿದು ದೇವರಿಗೆ ಅರ್ಪಿಸುತ್ತಾರೆ. ಇದನ್ನು ಸಾಮಾನ್ಯವಾಗಿ ಸ್ತ್ರೀಯರು ಬಾಣಂತಿಯರು, ಗರ್ಭಿಣಿಯರು ನೋಡುವುದಿಲ್ಲ. ಏಕೆಂದರೆ ಅವರ ಮನಸ್ಸಿಗೆ ಘಾಸಿಯಾಗಬಹುದೆಂದು ಇದಾದ ಬಳಿಕ ಪುರೋಹಿತರೆಲ್ಲ ಆವೇಶಭರಿತರಾಗಿ ಕುಣಿದು ಧಣಿವಾದ ಮೇಲೆ ಹೊಳೆಯಲ್ಲಿ ಮಿಂದು ಬಂದು ದೇವರಿಗೆ ನೈವೇದ್ಯ ಮಾಡುವ ಸಲುವಾಗಿ ಹಾಗೆಯ ಹರಕೆ ನೀಡಿದವರಿಗೆ ಪ್ರಸಾದ ನೀಡುವ ಸಲುವಾಗಿ ಬಲಿಯಾದದುದನ್ನು ಬೆಂಕಿಯಲ್ಲಿ ಬೇಯಿಸಿ ಪ್ರಸಾದ ರೂಪದಲ್ಲಿ ಅದನ್ನು ನೀಡುತ್ತಾರೆ. ಕೆಲವರು ಅಲ್ಲೆ ಸೇವಿಸಿದರೆ ಮತ್ತೆ ಕೆಲವರು ಮನೆಗೆ ತೆಗೆದುಕೊಂಡು ಹೋಗಿ ಮಾಂಸದ ಜೊತೆ ಸೇರಿಸಿ ಅಡುಗೆ ಮಾಡಿ ಸೇವಿಸುವುದಾಗಿ ಹೇಳಿದರು. ಇದಾದ ನಂತರ ಭಕ್ತರು ತಂದಿರುವ ಕಾಯಿಯನ್ನು ಸಂಬಂಧಿಸಿದ ಪುರೋಹಿತ

ಹೋಳು ಮಾಡಿ ಅದರ ನೀರು ಕುಡಿದು ಎಸೆಯುತ್ತಾರೆ. ಸಂಬಂಧಪಟ್ಟವರು ಆ ಕಾಯಿಯನ್ನು ಪಡೆದು ಇಟ್ಟುಕೊಳ್ಳುತ್ತಾರೆ. ಇದಾದ ನಂತರ ಮನರಂಜನೆಗಾಗಿ ಎಲ್ಲರೂ ನೃತ್ಯ ಮಾಡುತ್ತಾರೆ. ಹಾಗೆಯೇ ಮುಖ್ಯಸ್ಥ ಮನೆಯವರು ಸಂಪ್ರದಾಯದಂತೆ ಮರಕ್ಕೆ ತೆಂಗಿನಕಾಯಿಇಟ್ಟು ಗುಂಡು ಹಾರಿಸಿ ಹೊಡೆಯುವುದನ್ನು ಮಾಡುತ್ತಾರೆ. ಇದಾದ ನಂತರ ಪುನಹ ಉತ್ಸವ ಮೂರ್ತಿಯನ್ನು ಹೊಳೆಯಲ್ಲಿ ಎಲ್ಲ ಸೇರಿ ಶುದ್ದೀಕರಿಸಿ ನೃತ್ಯದೊಂದಿಗೆ ದೇವರ ಗರ್ಭಗುಡಿಗೆ ತಂದು ಕೂರಿಸುತ್ತಾರೆ. ಈ ದಿನ ಈ ಜಾಗದಲ್ಲಿ ಕತ್ತಲಾದ ಮೇಲೆ ಯಾವುದೇ ಜನರು ಇರುವಹಾಗಿಲ್ಲ. ಪುರೋಹಿತರು ಮಾತ್ರ ಇರುವ ಹರಕೆ ಪ್ರಸಾದವನ್ನು ಎಲ್ಲರೂ ಸೇವಿಸಿ ಇಡೀ ರಾತ್ರಿ ಅಲ್ಲೆ ಇದ್ದು ನಿದ್ರಿಸುತ್ತಾರೆ.

ಮರುದಿನ ಬೆಳಿಗ್ಗೆ ಯಾವುದೇ ಭಕ್ತರು ದೇವಾಲಯದ ಹತ್ತಿರ ಬರುವುದಿಲ್ಲ. ದೇವಾಲಯದ ತಕ್ಕ ಮುಖ್ಯಸ್ಥರು ಪುರೋಹಿತರು, ಗ್ರಾಮದ ಮುಖ್ಯಸ್ಥರ ಸಮ್ಮುಖದಲ್ಲಿ ಹಣದ ಹುಂಡಿಯನ್ನು ತೆಗೆದು ಲೆಕ್ಕಾಚಾರ ಮಾಡಿ ದೇವಾಲಯ ಸಮಿತಿಗೆ ಸೇರಿದ ಬ್ಯಾಂಕ್‌ಗೆ ಹಣವನ್ನು ಜಮಾ ಮಾಡಿ ದೇವಾಲಯದ ಅಭಿವೃದ್ಧಿಗೆ ಅಲ್ಲಿನ ತಕ್ಕ ಮುಖ್ಯಸ್ಥರು, ಗ್ರಾಮಸ್ಥರು ಶ್ರಮಿಸುತ್ತಿದ್ದಾರೆ.

ದೇವರಿಗೆ ಬಲಿಕೊಡುವುದು ನಮ್ಮ ಪೂರ್ವಿಕರಿಂದ ತಲತಲಾಂತರಿಂದ ನಡೆದುಕೊಂಡು ಬಂದಿರುವ ಹರಕೆಯ ಸಮರ್ಪಣೆಯಾಗಿದೆ. ಅದರಂತೆ ಈ ಗ್ರಾಮದವರು ಮಾಡಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಪ್ರಾಣಿ ಬಲಿ ಕಾನೂನು ಬಾಹಿರವಾಗಿದೆ. ಆದರೆ ಈಗಿನ ಜನರು ಅವರ ಪೂರ್ವಿಕರು ಮಾಡಿರುವುದನ್ನು ತಪ್ಪಿಸಿದ್ರೆ ಅಪಚಾರವಾಗುತ್ತದೆ ಎಂದು ಚಾಚೂ ತಪ್ಪದೆ ನಡೆಸಿಕೊಂಡು ಬರುತ್ತಾರೆ.

ನಾನು ಈ ಜಾತ್ರೆ ಬಗ್ಗೆ ಅಧ್ಯಯನ ನಡೆಸಲು ಹೋದಾಗ ಬಲಿ ಹರಕೆಯ ಬಗ್ಗೆ ಪೋಟೋ ತೆಗೆದು, ಸಾಮಾಜಿಕ ತಾಣದಲ್ಲಿ ಬಿಟ್ಟರೆ ನಮ್ಮ ಆಚಾರ ವಿಚಾರಕ್ಕೆ ತೊಂದರೆಯಾಗಬಹುದೆಂದು ಕೆಲವರು ಮಾಹಿತಿ ನೀಡಲು ಹಿಂಜರಿದರು ಮತ್ತೆ ಕೆಲವರು ಕೋಪದಿಂದ ರೇಗಿದ್ದು ಉಂಟು. ಆದರೆ ನನ್ನ ಕಾರ್ಯಭಾರ ನಾ ನಿರ್ವಹಿಸಲೇಬೇಕಾದ್ದರಿಂದ ತಕ್ಕ ಮುಖ್ಯಸ್ಥ ಡಾಲಿ ಬೆಳ್ಳಿಯಪ್ಪ, ಉತ್ತಯ್ಯ ಹಾಗೂ ಪುರೋಹಿತ ಅಚ್ಚಪ್ಪ ಮಾಲೆಯವರಿಂದ ಕೇಳಿ ಹಾಗೂ ನಾನು ಕಣ್ಣಾರೆ ಕಂಡದ್ದನ್ನು ದಾಖಲಿಸಿದ್ದೇನೆ.

**ಯಮಕವಾಡಿ ಪನ್ನಂಗಾಲ ತಮ್ಮೆ ಕೊಡೆ ಜಾತ್ರೆ**

ಈ ಪನ್ನಂಗಾಲ ತಮ್ಮೆಯ ಉತ್ಸವದ ಆಚರಣೆ ಇಲ್ಲು ಬಹಳ ವಿಶೇಷ. ಈಕೆ ಹಂಸ ರೂಪಿಣಿ ಎಂಬ ಕಲ್ಪನೆ ಎಲ್ಲರಲ್ಲೂ ಇದೆ, ಅಣ್ಣ ಇಗ್ಗುತ್ತಪ್ಪ ನೆಲೆ ನಿಂತಿರುವ ಕೆಳಭಾಗದ ತಪ್ಪಲಿನಲ್ಲಿ ವಿಶಾಲವಾದ ಗದ್ದೆ ಪ್ರದೇಶದಲ್ಲಿ ಉತ್ಸವ ಆಚರಿಸುತ್ತಾರೆ.

ವರ್ಷಕ್ಕೊಮ್ಮೆ ತನ್ನಣ್ಣ ಬೇಟೆಗಾಗಿ ಬಂದೇ ಬರುತ್ತಾನೆಂಬ ಮಾತಿನೊಂದಿಗೆ ಹೊರಡಲನು ವಾಗುವಂತೆ ಆವಾಹನೆಯಾಗುವುದು ವಿಶೇಷವಾಗಿ ನಿರ್ಮಿಸಲಾದ ಉದ್ದನೆಯ ಬಿದಿರಿನ ಕೊಡುಗೆ

ಪನ್ನಂಗಾಲ ತಮ್ಮೆಗೆ ಒಂದು ವರ್ಷ ದೊಡ್ಡ ಹಬ್ಬವಾದರೆ ಮತ್ತೊಂದು ವರ್ಷ ಚಿಕ್ಕಹಬ್ಬ. ದೊಡ್ಡ ಹಬ್ಬದಲ್ಲಿ ದೊಡ್ಡ ಕೊಡೆ, ಚಿಕ್ಕ ಹಬ್ಬಕ್ಕೆ ಚಿಕ್ಕ ಕೊಡೆ. ದೊಡ್ಡ ಹಬ್ಬದಂದು ಸಂಪ್ರದಾಯಬದ್ಧರಾಗಿ ತಕ್ಕರ ಮನೆಯಿಂದ ಒಡ್ಡೊಲಗದೊಂದಿಗೆ ಭಂಡಾರ, ಕೊಡೆಯನ್ನು ತರುವುದರೊಂದಿಗೆ, ಉತ್ಸವ ಆಚರಣೆ ಪ್ರಾರಂಭವಾಗುತ್ತದೆ.

ದೇವರು ಸಾಮಾನ್ಯವಾಗಿ ಮನುಷ್ಯರಿಗೆ ಅವಾಹನೆಯಾಗುವುದನ್ನು ಕಂಡಿದ್ದೇವೆ, ಕೇಳಿದ್ದೇವೆ. ಆದರೆ ಇಲ್ಲಿ ಇವರು ಸಿದ್ದಪಡಿಸಿರುವ ಕೊಡೆಗೆ ಪನ್ನಂಗಾಲ ತಮ್ಮೆ ಅವಾಹನೆಯಾಗುತ್ತಾಳೆ ಎಂಬುದು ಎಲ್ಲರ ನಂಬಿಕೆ. ಇದನ್ನು ಹಲವರು ಹಿಡಿದು ತರುವ ಈ ಕೊಡೆ ಇದ್ದಕಿದ್ದಂತೆ ತಿರುಗಲು ಪ್ರಾರಂಭಿಸುತ್ತದೆ. ಇದು ಪನ್ನಂಗಾಲ ತಮ್ಮೆ ತನ್ನಣ್ಣ ಇಗ್ಗುತ್ತಪ್ಪನನ್ನು ಕಾಣಲು ಯತ್ನಿಸುವುದು ಎಂಬುದಾಗಿ ಜನರ ನಂಬಿಕೆ. ಈ ಕೊಡೆ ಸುತ್ತುವ ಪರಿಯನ್ನು ನೋಡಲು ತುಂಬ ಜನಸಾಗರವಿರುತ್ತದೆ. ಅದು ಹೇಗೆ ಸುತ್ತುತ್ತದೆ ಎಂಬುದನ್ನು ಹತ್ತಿರದಿಂದ ನೋಡಲು ಕಷ್ಟವಾಗುವಷ್ಟು ಜನ ಸೇರಿರುತ್ತಾರೆ. ಒಟ್ಟಿನಲ್ಲಿ ಈ ಕೊಡೆ ಮೇಲೇರಿ ಹೋಗದಂತೆ ಎಲ್ಲರೂ ತಮ್ಮ ಕೈಯಿಂದ ಹಿಡಿದು ನೆಲಕ್ಕೆ ಇಡುತ್ತಾರೆ. ಹಿಡಿದು ನಿಲ್ಲಿಸುವಾಗ ನೆಲದ ಸುತ್ತ ಗುಂಡಿಉಂಟಾಗುತ್ತದೆ. ಅಷ್ಟಕ್ಕೂ ಕೊಡೆಯನ್ನು ಹಾರಲು ಬಿಡುವುದಿಲ್ಲವೇಕೆ ಎಂಬ ಪ್ರಶ್ನೆ ಮಾಡಿದರೆ ಕೊಡೆ ಹಾರಿ ಹೋದರೆ ನಾಡಿಗೆ ಆಪತ್ತು ಉಂಟಾಗುತ್ತದೆ ಎಂಬುದು ಅವರ ಉತ್ತರವಾಗಿರುತ್ತದೆ.

ಇವೆಲ್ಲ ಸಹ ಅರಮೇರಿ ಗ್ರಾಮದಲ್ಲಿ ನಡೆಯುವ ಪೂಜಾ ಕಾರ್ಯದಂತೆ. ಉತ್ಸವಮೂರ್ತಿ ಶುದ್ಧಿಗೊಳಿಸಿ ಹೂವಿನಿಂದ ಅಲಂಕರಿಸಿ ತಲೆ ಮೇಲಿಟ್ಟು ನೃತ್ಯ ಮಡುವುದು ಒಂದೆಡೆ ಕೂರಿಸಿ ಪೂಜಿಸುವುದು ಹರಕೆ ಒಪ್ಪಿಸುವುದು ಈ ಎಲ್ಲಾ ಕಾರ್ಯವನ್ನು ಎರಡು ದಿನಗಳವರೆಗೆ ಬಹಳ ಭಕ್ತಿಪೂರ್ವಕವಾಗಿ ಇಲ್ಲಿನ ಗ್ರಾಮಸ್ಥರು ನಡೆಸುತ್ತಾರೆ. ಹಾಗೆಯೇ ಇಲ್ಲಿಯೂ ದೇವರಿಗೆ ಬಲಿ ನೀಡಿ ದೇವರನ್ನು ಸಂತೃಪ್ತಿಗೊಳಿಸಿ ದೇವಿ ಕೃಪೆಗೆ ಪಾತ್ರರಾದೆವೆಂದು ಸಂತಸಗೊಳ್ಳುತ್ತಾರೆ. ಎರಡು ದಿನ ನಡೆಯುವ ಈ ಉತ್ಸವ ನೋಡುಗರ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತದೆ. ಇದರ ಬಗ್ಗೆ ಕಕ್ಕಬ್ಬೆ ಗ್ರಾಮದ ನವೀನ್ ಎಂಬುವವರು ಆಟೋ ಡ್ರೈವರ್ ಮಾಹಿತಿ ನೀಡಿ ಸಹಕರಿಸುತ್ತಾರೆ.

**ಶ್ರೀ ಭಗವತಿ ಕೈಕೇರಿ ಜಾತ್ರೆ**

ಕೊಡಗಿನ ವಿರಾಜಪೇಟೆಯಿಂದ ಗೋಣಿಕೊಪ್ಪಕ್ಕೆ ಹೋಗುವ ದಾರಿಯಲ್ಲಿ ಗೋಣಿಕೊಪ್ಪಕ್ಕೆ ಸಮೀಪವಾಗಿರುವಂತಿರುವ ಈ ದೇವಾಲಯವು ಹಾತೂರು ಗ್ರಾಮ ಪಂಚಾಯಿತಿಗೆ ಒಳಪಡುವ ಕೈಕೇರಿಯಲ್ಲಿದೆ. ಅಂದಾಜು ಆರುನೂರು ವರ್ಷಗಳ ಇತಿಹಾಸವಿರುವ ಈ ದೇವಸ್ಥಾನವು ಹೆದ್ದಾರಿಗೆ ಕಾಣಿಸುವಂತಿರುವುದು. ಶ್ರೀ ಭಗವತಿ ದೇವಿಯು ಬಾಡಗರಕೇರಿಯಲ್ಲಿ ನೆಲೆನಿಂತಿರುವ ಶ್ರೀ ಮೃತ್ಯುಂಜಯ ದೇವರ ಸೋದರಿಯೆಂದು ಹೇಳಲಾಗುವುದು. ಈ ದೇವಾಲಯದಲ್ಲಿ ಮುಂಜಾನೆ ಹಾಗೂ ಮುಸ್ಸಂಜೆ ಎರಡು ಹೊತ್ತು ಸಂಜೆ ಆರರಿಂದ ಏಳರವರಗೆ ಪೂಜಾ ಸಮಯವಾಗಿರುವುದು.

ಗರ್ಭ ಗುಡಿಯಲ್ಲಿ ಸರ್ವಾಲಂಕಾರಭೂಷಿತೆಯಾಗಿ ವಿರಾಜಮಾನವಾಗಿರುವ ಶ್ರೀ ಭಗವತಿ ದೇವಿಯ ಬಲಪಾರ್ಶ್ವದಲ್ಲಿ ಶ್ರೀ ಗಣಪತಿ ದೇವರ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿರುವುದು. ಒಳಾಂಗಣದಲ್ಲಿ ಗುಡಿಯ ಬಲಪಾರ್ಶ್ವ ಹಾಗು ಎಡಪಾರ್ಶ್ವಗಳಲ್ಲಿ ಮೆಟ್ಟಿಲುಗಳಿರುವುದು. ಮುಖಮಂಟಪದ ಬಲಪಾರ್ಶ್ವ ಹಾಗು ಎಡಪಾರ್ಶ್ವಗಳಲ್ಲಿ ಮೆಟ್ಟಿಲುಗಳಿರುವುದು. ದೇವಾಲಯದ ಮುಂಭಾಗದಲ್ಲಿ ಕಟ್ಟೆ ಕಟ್ಟಲಾಗಿರುವ ದೊಡ್ಡದಾದ ಅರಳಿ ಮರವಿರುವುದು. ದೇವಾಲಯದ ಹೊರಾಂಗಣದಲ್ಲಿ ಪೂಜೆಗಿರುವ ನೀರಿನ ವ್ಯವಸ್ಥೆಗಾಗಿ ಬಾವಿ ಇರುವುದು.

ದೇವತಕ್ಕರಾದ ಕುಪ್ಪಂಡ ಐನ್ ಮನೆಯ ಸಮೀಪದಲ್ಲಿರುವ ದೇವರ ಭಂಡಾರ ಮನೆಯಲ್ಲಿ ಭಂಡಾರವನ್ನು ಇಡಲಾಗುವುದು. ಉತ್ಸವದ ಸಮಯದಲ್ಲಿ ಅಲ್ಲಿಂದ ದೇವಸ್ಥಾನಕ್ಕೆ ಭಂಡಾರ ತರಲಾಗುವುದು. ಜಮ್ಮಡ ಮನೆಯವರು ಊರು ತಕ್ಕರಾಗಿರುವರು. ದೇವಾಲಯದ ಸಮೀಪದಲ್ಲಿ ಕೆರೆ ಇರುವುದು. ಈ ದೇಗುಲದಲ್ಲಿ ಹೆಚ್ಚಾಗಿ ಹೋಮ ಹವನಗಳು ನಡೆಯುತ್ತವೆ.

ಈ ದೇವಸ್ಥಾನದಲ್ಲಿ ಕಾರ್ಯ ಸಿದ್ಧಿಗಾಗಿ ದೇವಿಯನ್ನು ಭಕ್ತಿಯಿಂದ ಮನದಲ್ಲಿ ನೆನೆದು ದೇವಿಗೆ ಅಲಂಕಾರ ಪೂಜೆ ಮಾಡಿ ಪ್ರಾರ್ಥಿಸಿಕೊಂಡರೆ ಫಲ ಪ್ರಾಪ್ತಿಯಾಗುವುದೆಂಬುದು ಫಲಾನುಭವಿಗಳ ಹೇಳಿಕೆಯಾಗಿದೆ. ಹೀಗಾಗಿ ಇಲ್ಲಿ ಭಕ್ತರು ಕಾರ್ಯ ಸಿದ್ಧಿಯ ಹರಕೆ ಹೊತ್ತು ಕಾರ್ಯಕ್ಕೆ ಮೊದಲು ಹಾಗು ನಂತರ ಅಲಂಕಾರ ಪೂಜೆಯನ್ನು ಮಾಡಿಸುವರು. ಸೀರೆ, ಬಳೆ, ಅರಿಶಿನ ಕುಂಕುಮ, ಕರಿಮಣಿ ಬಿಚ್ಚೋಲೆ ಹಾಗು ಬಿಳಿ ಹೂವಿನಿಂದ ಅಲಂಕಾರ ಪೂಜೆಮಾಡಲಾಗುವುದು. ದೇವಿಗೆ ಹೆಚ್ಚಾಗಿ ಇಲ್ಲಿ ಅಲಂಕಾರ ಪೂಜೆಯು ನಡೆಯುತ್ತಿರುತ್ತದೆ. ಪೂಜಾ ಸಮಯದಲ್ಲಿ ಬೆಳಗುವ ಆರತಿಯ ಬೆಳಕಿನಲ್ಲಿ ಹೊಳೆಯುವ ದೇವಿಯ ದಿವ್ಯ ಮನೋಹರ ಸೌಂದರ್ಯವು ವರ್ಣನೆಗೆ ನಿಲುಕದ್ದು. ದೇವಿಯ ಭವ್ಯ ಸಾನಿಧ್ಯದಲ್ಲಿ ಧನ್ಯತಾ ಭಾವವು ಉಕ್ಕಿ ಹರಿಯುವುದು. ದೇವಿಯ ಕೃಪಾಪೂರ್ಣ ದರ್ಶನ ಪಡೆದವರೆ ಧನ್ಯರು.

ಪ್ರತಿವರ್ಷವೂ ಮಾರ್ಚ್ ಹದಿನೈದರಿಂದ ಇಪ್ಪತ್ತೆರಡರವರೆಗೆ ದೇವಿಯ ಉತ್ಸವವು ಜರುಗುವುದು. ನಿತ್ಯವೂ ಅಲಂಕಾರ ಪೂಜೆ ಮಾಡಲಾಗುವುದು. ಮುಂಜಾನೆ ಹಾಗು ರಾತ್ರಿ ಚಂಡೆ ವಾದ್ಯಗಳೊಂದಿಗೆ ದೇವಿಯ ಉತ್ಸವ ಮೂರ್ತಿಯ ಪ್ರದಕ್ಷಿಣೆ ಇರುವುದು. ದೇವಶಯನದ ದಿನದಂದು (ನೆರ್ಪು) ಜಮ್ಮಡ ಮನೆಯವರಲ್ಲಿಂದ ಹಾಗು ಕುಪ್ಪಂಡ ಮನೆಯವರಲ್ಲಿಂದ ಗೋ ವಿವಾಹ (ಎತ್‌ಮಂಗಲ) ದೇಗುಲಕ್ಕೆ ಬರುವುದು ಪದ್ಧತಿ. ಅವಭೃತ ಸ್ನಾನಕ್ಕಾಗಿ ದೇವಿಯು ಒಂದು ಕಿ.ಮೀ. ದೂರದ ಪೊನ್ನಿಮಾನಿಯಲ್ಲಿರುವ ದೇವರ ಕೆರೆಗೆ ಹೋಗುವರು. ಸ್ನಾನಕ್ಕೆ ಹೋಗುವ ದಾರಿಯಲ್ಲಿ ಜಮ್ಮಡ ಮನೆಯವರ ಕೈಮಡದಲ್ಲಿ ಹಾಕಲಾಗುವ ಚಪ್ಪರದಲ್ಲಿ ದೇವರನ್ನಿಟ್ಟು ವಸಂತ ಪೂಜೆ ಮಾಡುವರು. ಜಳಕ ಮಾಡಿ ದೇವಾಲಯಕ್ಕೆ ಹಿಂದಿರುಗಿದ ನಂತರ ದೇವಸ್ಥಾನದಲ್ಲಿ ವಸಂತ ಪೂಜೆ ಮಾಡುವರು.

ಚಾಮುಂಡಿ ಹಾಗು ಮೂರ್ತಿ ಮತ್ತು ದೇವಿಯ ಕಾವಲುಗಾರನಾಗಿರುವ ಪೊಲೊಪ್ಪ ಈ ಮೂರು ದೇವರು, ದೇವಿಯು ಸ್ನಾನಕ್ಕೆ ಹೋಗುವಾಗ ಮತ್ತು ಬರುವಾಗ ಜೊತೆಯಲ್ಲಿ ಇರುವರು.

ಉತ್ಸವದ ಸಮಯದಲ್ಲಿ ದೇವಾಲಯಕ್ಕೆ ಆಗಮಿಸುವ ಭಕ್ತರಿಗೆ ಅಪರಾಹ್ನ ಮತ್ತು ರಾತ್ರಿ ಅನ್ನಪ್ರಸಾದ ನೀಡಲಾಗುವುದು.

ದೇವಾಲಯದ ಸಭಾಂಗಣದಲ್ಲಿ ಮದುವೆ, ನಾಮಕರಣ ಇತ್ಯಾದಿ ಸಮಾರಂಭಗಳು ಆಗಿಂದಾಗ್ಗೆ ನಡೆಯುತ್ತಿರುತ್ತವೆ. ಹಬ್ಬಹರಿದಿನಗಳಲ್ಲಿ ಇಲ್ಲಿಗೆ ಅಧಿಕ ಸಂಖ್ಯೆಯಲ್ಲಿ ಭಕ್ತರು ಆಗಮಿಸಿ ಹರಕೆ ಕಾಣಿಕೆಗಳನ್ನು ಸಲ್ಲಿಸುವರು.

ಈ ದೇವಾಲಯದ ಬಗ್ಗೆ ಅರ್ಚಕರಾದ ಗುರುರಾಜ್‌ರಾವ್ ಮಾಹಿತಿ ನೀಡಿರುತ್ತಾರೆ.

**ಶ್ರೀ ಉಮಾ ಮಹೇಶ್ವರಿ ಜಾತ್ರೆ**

ವಿರಾಜಪೇಟೆ ತಾಲೂಕಿನ ಹೃದಯ ಭಾಗದಲ್ಲಿರುವ ಈ ದೇವಾಲಯವು ಬಹಳ ಪ್ರಾಚೀನ ಕಾಲದ್ದಾಗಿರುತ್ತದೆ. ದೇವಾಲಯಕ್ಕೆ ಬೇಕಾಗಿರುವ ಎಲ್ಲಾ ಕಟ್ಟು ಕಟ್ಟಳೆಗಳನ್ನು ಹೊಂದಿಸಿ ಕಟ್ಟಲ್ಪಟ್ಟಿರುವ ದೇವಸ್ಥಾನ ಇದಾಗಿದೆ. ಪುಟ್ಟ ಪಟ್ಟಣವಾಗಿದ್ದ ಗೋಣಿಕೊಪ್ಪವು ದೇವರ ಕೃಪೆಯಿಂದ ಜನಭರಿತವಾಗಿ ದೊಡ್ಡ ವ್ಯಾಪಾರೀ ಕ್ಷೇತ್ರವಾಗಿ ಸುಂದವಾರ ಪಟ್ಟಣವಾಗಿ ಬೆಳೆದಿರುವುದು.

ಪುರಾತನ ಕಾಲದಲ್ಲಿ ತಮಿಳುನಾಡಿನಿಂದ ಬಂದವರೆನ್ನಲಾದ ಓರ್ವ ವೃದ್ಧ ಸನ್ಯಾಸಿಯು ಈಗ ದೇವಾಲಯವಿರುವ ಈ ಸ್ಥಳದಲ್ಲಿ ವಾಸಿಸುತ್ತಿದ್ದರೆನ್ನಲಾಗುವುದು. ಋಷಿಯ ರೂಪದಲ್ಲಿ ನಿತ್ಯ ಬಿಕ್ಷಾಟನೆ ಮಾಡುತ್ತಾ ಹಸಿವು ನೀಗಿಸಿಕೊಂಡು ಈ ತಾಣದಲ್ಲಿ ಇರುಳು ಕಳೆಯುತ್ತಿದ್ದರೆನ್ನಲಾಗುವುದು. ಈ ಜಾಗದಲ್ಲಿ ಅರಳಿ ಮರದ ನೆರಳಿನಲ್ಲಿ ಈತನ ವಾಸ. ಆ ಮರದ ಸಮೀಪದಲ್ಲಿದ್ದ ಕೆರೆಯ ನೀರನ್ನು ಸ್ವಯಂ ಕೆಲಸಕ್ಕೆ ಹಾಗು ಪೂಜಾ ವಿಧಾನಗಳಿಗೆ ಉಪಯೋಗಿಸುತ್ತಿದ್ದರು ಎಂಬುದಾಗಿ ಉಲ್ಲೇಖಿಸಲಾಗಿರುವುದು.

ಒಂದು ದಿನ ಇದ್ದಕ್ಕಿದಂತೆ ಆ ದೇವತಾ ಸ್ವರೂಪಿಯಂತಿದ್ದ ಸನ್ಯಾಸಿಯು ಕಣ್ಮರೆಯಾಗಲು ಚಕಿತರಾದ ಜನರು ಆ ವೃದ್ಧ ಸನ್ಯಾಸಿಯನ್ನು ಮನೀಶ್ವರನೆಂದು ಪೂಜಿಸಲು ತೀರ್ಮಾನಿಸಿದರು. ಆ ಸ್ಥಳವು ಭಜನಾ ಮಂದಿರವಾಗಿ ರೂಪುಗೊಂಡಿತು. ದೇವರಲ್ಲಿ ಅಪಾರವಾದ ನಂಬಿಕೆಯನ್ನಿಟ್ಟುಕೊಂಡಿದ್ದ ಭಕ್ತರು ಪ್ರಥಮವಾಗಿ ಇಲ್ಲಿ ಗೌರಿ ಗಣೇಶೋತ್ಸವವನ್ನು ಆಚರಿಸಿದರು.

೧೯೪೪ರಲ್ಲಿ ದಕ್ಷಿಣಾಭಿಮುಖವಾಗಿ ಈ ದೇವಾಲಯದ ಸ್ಥಾಪನೆಯಾಯಿತು. ಅರಳಿ ಮರಕ್ಕೆ ಹೊಂದಿಕೊಂಡಂತೆ ಮಾಡು ಕಟ್ಟಿ ಗುಡಿಯನ್ನು ನಿರ್ಮಿಸಿದರು. ಮುನೀಶ್ವರನ ಗುಡಿ ಮಾತ್ರ ಇದ್ದ ಈ ದೇವಾಲಯದಲ್ಲಿ ಕಾಲಾಂತರದಲ್ಲಿ ಶ್ರೀ ಉಮಾ ಮಹೇಶ್ವರಿ ದೇವಿ, ಶ್ರೀ ಗಣಪತಿ ಹಾಗು ಶ್ರೀ ಸುಬ್ರಹ್ಮಣ್ಯ ದೇವರನ್ನು ಪ್ರತಿಷ್ಠಾಪಿಸಲಾಯಿತು. ಶ್ರೀ ಸುಬ್ರಹ್ಮಣ್ಯ ಷಷ್ಟೀಯ ಮುನ್ನಾ ದಿನ ಶ್ರೀ ದೇವಿಯ ಪ್ರತಿಷ್ಠಾಪನೆ ಮಾಡಲಾಯಿತು. ಆ ನಂತರದಲ್ಲಿ ಷಷ್ಠಿಪೂಜೆ ಮಾಡಲಾಯಿತು. ಕೆಲವು ಕಾಲಗಳ ನಂತರ ನವಗ್ರಹಗಳನ್ನು ಪ್ರತಿಷ್ಠಾಪಿಸಿ ಆಮೇಲೆ ನಾಗದೇವರನ್ನು ಪ್ರತಿಷ್ಠಾಪಿಸಿದರು.

ಮೊದಲು ಗೌರಿ ದೇವಸ್ಥಾನವೆಂದು ಕರೆಯಾಲಾಗುತ್ತಿದ್ದ ಈ ದೇವಸ್ಥಾನವನ್ನು ೧೯೪೭ರಲ್ಲಿ ಶ್ರೀ ಕಾಳಿಕಾಂಬ ದೇವಾಲಯವೆಂದು ಹೆಸರಿಸಿ ಗೌರಿ ಗಣೇಶೋತ್ಸವವನ್ನು ಬಹಳ ವಿಜೃಂಭಣೆಯಿಂದ ಆಚರಿಸಲಾಗುವುದು. ಅಂದಿನಿಂದ ಇಂದಿನವರೆಗೂ ಈ ಉತ್ಸವವನ್ನು ಪ್ರತಿವರ್ಷವೂ ವಿಜೃಂಭಣೆಣೆಯಿಂದ ಆಚರಿಸಲಾಗುತ್ತಿರುವುದು.

**ಉತ್ಸವ**

ಯುಗಾದಿ ಹಬ್ಬದ ಸಮಯದಲ್ಲಿ ಇಲ್ಲಿ ಪಾರ್ವತಿ ದೇವಿಯ ಉತ್ಸವವು ಶ್ರೀ ಗೋಪಾಲಕೃಷ್ಣ ತಂತ್ರಿಯವರ ನೇತೃತ್ವದಲ್ಲಿ ನಾಲ್ಕು ದಿನಗಳವರೆಗೆ ಜರುಗುವುದು. ಪ್ರಾರ್ಥನೆ, ವಸಂತ ಪೂಜೆ, ಪಂಚಾಮೃತಾಭಿಷೇಕ, ಇವು ಸಾಮೂಹಿಕವಾಗಿ ಜರುಗುವುವು. ತೂಚಂಬಲಿ, ಮಹಾ ಮಂಗಳಾರತಿ, ಇರುಬೊಳಕು, ದುರ್ಗಾಹೋಮ, ಮುಂತಾದವು ನಡೆಯುವುವು. ದೇವಾಲಯದ ಕೆರೆಯಲ್ಲಿ ದೇವಿಯ ಅವಬೃತ ಸ್ನಾನವಾಗುವುದು. ಉತ್ಸವದ ಸಮಯದಲ್ಲಿ ಅಪರಾಹ್ನ ಮತ್ತು ರಾತ್ರಿ ಅನ್ನದಾನವಿರುವುದು.

ಗೌರಿ ಗಣೇಶೋತ್ಸವವು ಒಂಬತ್ತು ದಿನಗಳವರೆಗೆ ವಿಜೃಂಭಣೆಯಿಂದ ನಡೆಯುವುದು. ಹೂವಿನ ಮಂಟಪದಲ್ಲಿ ಗೌರಿಯ ಮೆರವಣಿಗೆ, ಅಷ್ಟೋತ್ತರ ಗಣಹೋಮ, ಮಹಾಪೂಜೆ ಹಾಗು ಪ್ರಸಾದ ವಿತರಣೆ ನಡೆಯುವುದು. ಹಬ್ಬದ ಎಂಟನೆಯ ರಾತ್ರಿ ವಿದ್ಯುತ್ ಅಲಂಕೃತ ಮಂಟಪದಲ್ಲಿ ಶ್ರೀ ಗೌರಿ ಗಣೇಶ ದೇವರ ಮೆರವಣಿಗೆ ನಡೆದು ಮರುದಿನ ಮುಂಜಾನೆ ದೇವರ ವಿಸರ್ಜನೆ ನಡೆಯುವುದು.

ನವರಾತ್ರಿಯ ಸಮಯದಲ್ಲಿ ಚಂಡಿಕಾಯಾಗ ಮಾಡಲಾಗುವುದು. ಹುತ್ತರಿ ಹಬ್ಬಕ್ಕೆ ಎಲ್ಲರೂ ದೇವಸ್ಥಾನದಿಂದ ಮೆರವಣಿಗೆ ಹೋಗಿ ಕದಿರು ತಂದು ದೇವಿಗೆ ತಂಬಿಟ್ಟು ನೈವೇದ್ಯ ಮಾಡಿ ತಂಬಿಟ್ಟು ಪ್ರಸಾದ ಹಂಚುವರು. ಇಲ್ಲಿ ಸುಬ್ರಹ್ಮಣ್ಯ ಷಷ್ಠಿ ಹಾಗು ಕಿರುಷಷ್ಠಿಯನ್ನು ಆಚರಿಸಲಾಗುವುದು. ಹರಕೆ, ತಲೆಮುಡಿ, ತುಲಾಭಾರದೊಂದಿಗೆ ಹಲವಾರು ಪೂಜೆಗಳನ್ನು ಮಾಡಲಾಗುವುದು. ಅನ್ನಸಂತರ್ಪಣೆ ಇರುವುದು. ಶಿವರಾತ್ರಿಯಂದು ಸಾಮೂಹಿಕ ಶತರುದ್ರಾಭಿಷೇಕವು ಶೃಂಗೇರಿ ತಂತ್ರಿಗಳ ನೇತೃತ್ವದಲ್ಲಿ ನಡೆಯುವುದು ಹಾಗು ಅನ್ನ ಪ್ರಸಾದವಿರುವುದು.

**ಶ್ರೀ ಅಯ್ಯಪ್ಪ ಜಾತ್ರೆ , ಪೊನ್ನಂಪೇಟೆ**

ವಿರಾಜಪೇಟೆ ತಾಲೂಕಿನ ಪೊನ್ನಂಪೇಟೆಯಿಂದ ಕುಂದಕ್ಕೆ ಹೋಗುವ ಮಾರ್ಗದಲ್ಲಿ ತುಸು ದೂರ ಕ್ರಮಿಸಿದಾಗ, ಈ ಶ್ರೀ ಅಯ್ಯಪ್ಪ ದೇವರ ದೇವಸ್ಥಾನವು ಕಾಣಿಸಿಗುವುದು.

೧೯೭೬ರಲ್ಲಿ ಸ್ವಾಮಿಯ ಭಕ್ತರಾದ ಭಾಸ್ಕರ ಗುರುಸ್ವಾಮಿಯವರು ನೆರೆರಾಜ್ಯವಾದ ಕೇರಳದಿಂದ ಶ್ರೀ ಅಯ್ಯಪ್ಪ ದೇವರ ಶಿಲಾ ವಿಗ್ರಹವನ್ನು ತಂದಿಲ್ಲಿ ಪೂಜಿಸಿದರು. ತೀತಿರ ಪೊನ್ನಪ್ಪನವರು ಈ ದೇಗುಲಕ್ಕಿರುವ ಸ್ಥಳವನ್ನು ದಾನವಾಗಿ ನೀಡಿದರು. ಅವರು ದಾನವಾಗಿ ನೀಡಿದ ಈ ಸ್ಥಳದಲ್ಲಿ

೧೯೭೭ರಲ್ಲಿ ಶ್ರೀ ಅಯ್ಯಪ್ಪ ದೇವರನ್ನು ಪ್ರತಿಷ್ಠಾಪಿಸಿ ಗುಡಿಯನ್ನು ಕಟ್ಟಲಾಯಿತು. ದೇವರ ನಿತ್ಯ ಪೂಜೆಗಾಗಿ ಅರ್ಚಕರನ್ನು ನೇಮಿಸಲಾಯಿತು. ಪೂಜೆಗಿರುವ ನೀರಿಗಾಗಿ ದೇಗುಲದ ಹೊರಾಂಗಣದಲ್ಲಿ ಬಾವಿ ತೋಡಿಸಲಾಯಿತು.

ಪೂರ್ವಕ್ಕೆ ಮುಖ ಮಾಡಿರುವ ಈ ದೇಗುಲ ಒಳಾಂಗಣ ಪ್ರವೇಶಿಸಿದಾಗ ಗರ್ಭಗುಡಿಯಲ್ಲಿ ಅಲಂಕಾರಗೊಂಡು ಭಕ್ತರನ್ನು ಹರಸುತ್ತಾ ವಿರಾಜಮಾನವಾಗಿರುವ ಶ್ರೀ ಅಯ್ಯಪ್ಪ ದೇವರ ದರ್ಶನ ಭಾಗ್ಯ ಲಭಿಸುವುದು. ಗರ್ಭಗುಡಿಯಲ್ಲಿ ಶ್ರೀ ಅಯ್ಯಪ್ಪ ದೇವರ ಉತ್ಸವಮೂರ್ತಿಯನ್ನು ಅಲಂಕರಿಸಿಟ್ಟು ಪೂಜಿಸಲಾಗುವುದು.

ಗರ್ಭಗುಡಿಯ ಹಿಂದೆ ಶ್ರೀ ಗಣಪತಿ ದೇವರ ಗುಡಿಯಿರುವುದು. ಜೊತೆಯಲ್ಲೇ ಶ್ರೀ ಸುಬ್ರಹ್ಮಣ್ಯ ದೇವರ ಗುಡಿ ಹಾಗು ಸಮೀಪದಲ್ಲೇ ನವಗ್ರಹ ಗುಡಿಯಿರುವುದು. ಶ್ರೀ ಅಯ್ಯಪ್ಪ ದೇವರ ಎಡಪಾರ್ಶ್ವದಲ್ಲಿ ಶ್ರೀ ಈಶ್ವರ ದೇವರ ಗುಡಿಯಿರುವುದು.

ಡಿಸೆಂಬರ್ ೨೫, ೨೬ ಅಥವಾ ೨೭ರಲ್ಲಿ ಶಬರಿ ಮಲೆಯಲ್ಲಿ ಮಂಡಲ ಪೂಜೆ ನಡೆಯುವ ದಿನದಂದು ಇಲ್ಲಿಯೂ ಮಂಡಲ ಪೂಜೆಯ ಬಹಳ ವಿಶೇಷತೆಯೊಂದಿಗೆ ನಡೆಯುವುದು ತಾತ್ಕಾಲಿಕವಾಗಿ ಹದಿನೆಂಟು ಮೆಟ್ಟಿಲುಗಳನ್ನು ನಿರ್ಮಾಣ ಮಾಡಲಾಗುವುದು. ಮೆಟ್ಟಿಲುಗಳ ತುಂಬ ಮಣ್ಣಿನ ಹಣತೆಗಳನ್ನು ಉರಿಸಿಡಲಾಗುವುದು. ದೀಪದ ಬೆಳಕಿನಲ್ಲಿ ಅಲಂಕಾರಗೊಂಡಿರುವ ಶ್ರೀ ಅಯ್ಯಪ್ಪ ದೇವರ ಮೂರ್ತಿಯು ಅತ್ಯಂತ ಪ್ರಕಾಶಮಾನವಾಗಿ ಪ್ರಜ್ವಲಿಸುವುದು. ಮಂಡಲ ಪೂಜೆಯ ದಿನ ಶ್ರೀ ಅಯ್ಯಪ್ಪ ಸ್ವಾಮಿಯ ಮಾಲೆ ಹಾಕಿದ ಭಕ್ತರೆಲ್ಲರೂ ಸೇರಿ ದೀಪಾರಾಧನೆ ಮಾಡುವರು. ಅನಂತರ ದೇವರಿಗೆ ಅಲಂಕಾರ ಪೂಜೆ ಮಾಡಲಾಗುವುದು. ಅ ಸಮಯದಲ್ಲಿ ಪಚ್ಚ ಕರ್ಪೂರ, ಅಗರಬತ್ತಿ ಮಿಶ್ರಿತ ಪರಿಮಳ ಹಾಗು ಆಧ್ಯಾತ್ಮದ ಕಂಪು ದೇವಾಲಯದ ಸುತ್ತಮುತ್ತಲೆಲ್ಲಾ ಪಸರಿಸಿರುವುದು. ಅಯ್ಯಪ್ಪ ಭಕ್ತರೆಲ್ಲರೂ ಒಂದೇ ಮನಸ್ಸಿನಿಂದ ಶ್ರೀ ಅಯ್ಯಪ್ಪ ದೇವರನ್ನು ಸುತ್ತಿಸಿ ಭಜಿಸಿ, ಅರ್ಚಿಸಿ ಧನ್ಯರಾಗುವರು. ಮಂಡಲ ಪೂಜೆಯ ದಿನದಂದು, ಅತೀ ಹೆಚ್ಚಿನ ಅಂದರೆ ಐದು ಸಾವಿರಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರು ದೇಗುಲಕ್ಕೆ ಭೇಟಿ ನೀಡಿ ದೇವರ ಪೂಜೆಯಲ್ಲಿ ಪಾಲ್ಗೊಂಡು ಅನ್ನಪ್ರಸಾದ ಸ್ವೀಕರಿಸಿ ದೇವರ ಕೃಪೆಗೆ ಪಾತ್ರರಾಗುವರು.

ಶಿವರಾತ್ರಿಯಂದು ಇಲ್ಲಿರುವ ಶ್ರೀ ಈಶ್ವರ ದೇವರಿಗೆ ಮುಂಜಾನೆಯಿಂದಲೆ ರುದ್ರಾಭಿಷೇಕ ನಡೆಯುವುದು. ಚೌತಿಯಂದು ಶ್ರೀ ಗಣಪತಿ ದೇವರ ಗುಡಿಯಮುಂದೆ ಶ್ರೀ ಗಣೇಶನ ಮಣ್ಣಿನ ಮೂರ್ತಿಯನ್ನಿಟ್ಟು ಏಳು ಅಥವಾ ಹನ್ನೊಂದು ದಿನಗಳ ಕಾಲ ಪೂಜಿಸಿ ಆ ನಂತರ ದೇವರ ಮೆರವಣಿಗೆಯೊಂದಿಗೆ ವಿಸರ್ಜಿಸಲಾಗುವುದು. ಸುಬ್ರಹ್ಮಣ್ಯ ಷಷ್ಠಿಯಂದು ಶ್ರೀ ಸುಬ್ರಹ್ಮಣ್ಯ ದೇವರಿಗೆ ವಿಶೇಷ ಪೂಜೆಯನ್ನು ಸಲ್ಲಿಸಲಾಗುವುದು. ಅಪರಾಹ್ನ ಅನ್ನಪ್ರಸಾದವು ಇರುವುದು. ಆ ದಿನ

ಭಕ್ತಾದಿಗಳು ತಮ್ಮ ಹರಕೆಯ ಕಾಣಿಕೆಗಳನ್ನು ಶ್ರೀ ಸುಬ್ರಹ್ಮಣ್ಯ ದೇವರಿಗೆ ಸಲ್ಲಿಸಿ ಅನ್ನ ಪ್ರಸಾದ ಸ್ವೀಕರಿಸಿ ಕೃತಾರ್ಥರಾಗುವರು.

ಇಲ್ಲಿ ಸಭೆ ಸಮಾರಂಭಗಳಿಗೆ ಅನುಕೂಲವಾಗುವಂತ ಸುಸಜ್ಜಿತ ಸಭಾಂಗಣವಿರುವುದು. ಈ ಸಭಾಂಗಣದಲ್ಲಿ ಹಲವಾರು ಸಮಾರಂಭಗಳು ನಡೆಯುವವು, ಹೆಚ್ಚಾಗಿ ನಾಮಕರಣಗಳು, ಸಮಾರಂಭದ ಊಟದ ವ್ಯವಸ್ಥೆಯನ್ನು ಇಲ್ಲಿನ ಅರ್ಚಕರು ರುಚಿಕಟ್ಟಾಗಿ ತಯಾರಿಸಿ, ಅಚ್ಚುಕಟ್ಟಾಗಿ ನಿಭಾಯಿಸುವರು. ದೇವರ ಕೃಪೆಯಿಂದಾಗಿ ದೇಗುಲಕ್ಕೆ ಹರಿದು ಬರುತ್ತಿರುವ ಹಲವಾರು ದಾನಿಗಳ ಹಾಗು ಭಕ್ತರ ಹರಕೆ ಕಾಣಿಕೆಗಳಿಂದ ಈ ದೇಗುಲವು ಇನ್ನೂ ಹೆಚ್ಚಿನ ಅಭಿವೃದ್ಧಿಯತ್ತ ಸಾಗುತ್ತಿದೆ.

ಈಗಾಗಲೆ ಸ್ವಚ್ಛ ಸುಂದರವಾಗಿ ರೂಪುಗೊಂಡಿರುವ ಈ ದೇವಾಲಯವನ್ನು ಇನ್ನೂ ಹೆಚ್ಚು ಆಕರ್ಷಣೀಯಗೊಳಿಸುವತ್ತ ಗಮನ ಹರಿಸಲಾಗುತ್ತಿರುವುದು. ಈ ದೇವಸ್ಥಾನದ ಬಗ್ಗೆ ಇಲ್ಲಿನ ಅರ್ಚಕರಾದ ಶಿವಪ್ರಸಾದ್ ರವರುಮಾಹಿತಿ ನೀಡಿರುತ್ತಾರೆ.

### ಶ್ರೀ ಮಂದತವ್ವ ಜಾತ್ರೆ

ವಿರಾಜಪೇಟೆ ತಾಲ್ಲೂಕಿನ ಪೊನ್ನಂಪೇಟೆಯಲ್ಲಿರುವ ಕಾನೂರು-ಕುಟ್ಟ ರಸ್ತೆಯಲ್ಲಿ ಹತ್ತು ಕಿ.ಮೀದೂರ ಕ್ರಮಿಸಿದಾಗ ಶ್ರೀ ಮಂದತವ್ವ ದೇವಾಲಯವು ಕಾಣಸಿಗುವುದು. ಅಂದಾಜು ೬೦೦ ವರ್ಷಗಳಷ್ಟು ಪ್ರಾಚೀನವಾದ ಈ ದೇವಾಲಯವು ಬೆಕ್ಕೆಸೊಡ್ಲೂರು ಗ್ರಾಮದಲ್ಲಿರುವುದು. ಈ ದೇವಸ್ಥಾನವು ಕೊಟ್ಟಗೇರಿ ನಾಡಿಗೂ ಸಂಬಂಧ ಪಟ್ಟಿರುವುದು.

ಬಯಲಿನಲ್ಲಿರುವ ದೊಡ್ಡ ಮರದ ಬುಡದಲ್ಲಿ ಶ್ರೀ ಪಾರ್ವತಿ ದೇವಿಯ ಮನದುರ್ಗೆಯೆಂದು ಕರೆಯಲ್ಪಡುವ ಶ್ರೀ ಮಂದತವ್ವ ದೇವಿಯ ಶಿಲಾಸ್ಥಾನವಿರುವುದು. ಒಂದಿರುಳಿನಲ್ಲಿ ದೇವಿಗೆ ಗುಡಿಯ ನಿರ್ಮಾಣವಾಗಬೇಕೆಂಬ ನಿಯಮವಿರುವ ಕಾರಣ, ಆದರೆ ಪ್ರಾಣಿ ಪಕ್ಷಿಗಳು ಗೂಡು ಸೇರಿದ ಬಳಿಕ ಗುಡಿಯ ನಿರ್ಮಾಣ ಶುರು ಮಾಡಿದರೆ ಮುಂಜಾನೆ ಅವು ಏಳುವ ವೇಳೆಗೆ ನಿರ್ಮಿಸಿ ಆಗಬೇಕೆಂಬ ಶಾಸ್ತ್ರವಿರುವುದರಿಂದಾಗಿ ದೇವಿಗೆ ಗುಡಿಯನ್ನು ನಿರ್ಮಿಸುವ ಕಾರ್ಯವನ್ನು ಕೈಗೊಂಡಿರುವುದಿಲ್ಲ. ಹೀಗಾಗಿ ಈ ಸ್ಥಾನವು ತೆರೆದ ದೇವಾಲಯವಾಗಿರುವುದು.

ಶ್ರೀ ಮಂದತವ್ವ ದೇವಿಯ ದರ್ಶನ ಮಾಡುವ ಮೊದಲು ಅಲ್ಲೆ ಸಮೀಪದಲ್ಲೇ ಇರುವ ಶ್ರೀ ಮಹದೇವರ ದೇವಸ್ಥಾನದಲ್ಲಿರುವ ಶ್ರೀ ಮಹದೇವರ ದರ್ಶನಮಾಡಬೇಕೆಂಬ ನಿಯಮವಿರುವುದು. ಸಮೀಪದಲ್ಲಿರುವ ಕೀರೆಹೊಳೆಯಲ್ಲಿ ಮಿಂದು ಶುಚಿರ್ಭೂತರಾಗಿ ದೇವಿಗೆ ಪ್ರದಕ್ಷಿಣೆ ಬಂದು ಹರಕೆ ಒಪ್ಪಿಸಿದ್ದೆ ಅದಲ್ಲಿ ಬಯಸಿದ್ದು ಫಲಿಸುವುದೆಂಬುದು ಭಕ್ತರ ನಂಬಿಕೆಯಾಗಿದೆ. ಈ ಪವಿತ್ರ ಸ್ಥಾನದಲ್ಲಿ ನೊಂದವರು ತಮ್ಮ ಅಹವಾಲವನ್ನು ಭಕ್ತಿಯಿಂದ ಹೇಳಿಕೊಂಡಲ್ಲಿ ಪರಿಹಾರ ಕಾಣದೆ ಉಳಕೊಂಡಿರುವ ವ್ಯಾಜ್ಯಗಳು ತೀರ್ಮಾನಗೊಂಡು ಅಂತ್ಯಗೊಳ್ಳುವುದೆಂದು ಹೇಳುವರು.

ಈ ಸ್ಥಾನದಲ್ಲಿ ಶ್ರೀ ಮಂದತವ್ವ ದೇವಿಗೆ ನಿತ್ಯ ಪೂಜೆ ಪುನಸ್ಕಾರಗಳು, ಆರತಿ, ಅಭಿಷೇಕ, ಅರ್ಚನೆ, ಹಣ್ಣುಕಾಯಿ ಯಾವುದೂ ನಡೆಯುವುದಿಲ್ಲ. ದೇವಿಯ ಅನುಗ್ರಹ ಬೇಡಿ ಬರುವ ಭಕ್ತರಿಗೆ ಮೃತಿಕೆಯನ್ನು ಪ್ರಸಾದ ರೂಪದಲ್ಲಿ ನೀಡಲಾಗುವುದು. ಪ್ರತಿ ವರ್ಷ ಕೈಲು ಮುಹೂರ್ತ ಹಾಗು ಹುತ್ತರಿ ಹಬ್ಬದ ಸಮಯದಲ್ಲಿ ಈ ಸ್ಥಾನದಲ್ಲಿ ಹಬ್ಬದ ವಾತವರಣ ಸೃಷ್ಟಿಯಾಗುವುದು. ಈ ಸಮಯದಲ್ಲಿ ದೇವಿಗೆ ಅಲಂಕಾರ ಮಾಡಲಾಗುವುದು. ದೇವರ ಭಂಡಾರವನ್ನು ಭಂಡಾರ ತಕ್ಕರಾದ ಪೋರಂಗಡ ಮನೆಯಲ್ಲಿ ಇಡಲಾಗುವುದು. ಮಾಚಂಗಡ ಮನೆಯವರು ದೇವ ತಕ್ಕರಾಗಿರುವರು. ಹುತ್ತರಿ ಹಬ್ಬದಂದು ದೇವರ ಗದ್ದೆಯಲ್ಲಿ ಇಲ್ಲಿನ ಅರ್ಚಕರು ಕದಿರು ತೆಗೆಯುವರು. ಹುತ್ತರಿ ಕಳೆದ ಎರಡನೇಯ ದಿನದಂದು ದೇವಿಗೆ ಅಲಂಕಾರ ಮಾಡುವರು. ತೀತಮಾಡ ಮನೆಯವರು ಊರು ತಕ್ಕರಾಗಿರುವರು.

ಪ್ರತಿ ಮೂರು ವರ್ಷಕ್ಕೊಮ್ಮೆ ಇಲ್ಲಿ ಬೇಡು ಹಬ್ಬವು ಬಹಳ ಅದ್ದೂರಿಯಿಂದ ನಡೆಯುವುದು. ಹಬ್ಬಕ್ಕೆ ಹದಿನೈದು ದಿನ ಮುಂಚಿತವಾಗಿ ಶಾಸ್ತ್ರ ಮೊಟ್ಟೆಯೆಂಬ ಪ್ರದೇಶದಲ್ಲಿ ಎಲ್ಲರು ಸೇರಿ ಹಬ್ಬದ ಕುರಿತಾಗಿ ತೀರ್ಮಾನಿಸುವರು. ಹಬ್ಬಕಟ್ಟು ಬಿದ್ದ ಮೇಲೆ ಊರಿನಲ್ಲಿ ಅಡುಗೆಗೆ ಒಗ್ಗರಣೆ ಹಾಕುವಂತಿಲ್ಲ. ಮರಗಿಡಗಳನ್ನು ಕಡಿಯುವಂತಿಲ್ಲ. ಹಾಗೂ ಮಾಂಸಹಾರ ನಿಷೇದಿಸಲಾಗುವುದು. ಈ ಹಬ್ಬವು ಏಳುದಿನಗಳವರೆಗೆ ಬಹಳ ವಿಜೃಂಭಣೆಯಿಂದ ನಡೆಯುವುದು. ಮೊದಲ ದಿನದಂದು ಸಂಜೆ ಆರು ಗಂಟೆಗೆ ದೀಪ ಹಚ್ಚುವುದರ ಮೂಲಕ ಈ ಹಬ್ಬ ಶುರುವಾಗುವುದು. ವಾದ್ಯ ಮೇಳಗಳೊಂದಿಗೆ ದೇವರ ನೃತ್ಯಗಳು ನಡೆಯುವದು. ಈ ನೃತ್ಯದ ಸಮಯಾವಧಿಯು ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಗಿ ಕೊನೆಯ ದಿನದಂದು ಮುಂಜಾನೆಯವರೆಗೂ ನಡೆಯುವುದು. ದೇವಾಲಯದಲ್ಲಿ ದೇವರಿಗೆ ಉರಿಸಿದ ದೀಪದಿಂದ ಅಗ್ನಿಯನ್ನು ತಂದು ಬಿದಿರಿನ ಮೆಳೆಗಳನ್ನು ಉರಿಸಿ ಬೆಂಕಿಕೊಂಡ ತಯಾರಿಸುವರು. ಹಬ್ಬದ ಕೊನೆಯ ದಿನದಂದು ಹರಕೆ ಹೊತ್ತ ಭಕ್ತರು ಅದಲು ಬದಲು ವೇಷಾಧಾರಿಗಳಾಗಿ ಅಂದರೆ ಸ್ತ್ರೀಯು ಪುರುಷನಂತೆ ಮತ್ತು ಪುರುಷನ ಸ್ತ್ರೀಯಂತೆ ವೇಷಧರಿಸಿ ಕಳಸ ಹೊತ್ತು ಬಂದು ಹರಕೆ ಒಪ್ಪಿಸುವುದು ಇಲ್ಲಿನ ವಿಶೇಷ ಸೇವೆಯಾಗಿದೆ.

ಈ ದೇವಾಲಯಕ್ಕೆ ಎರಡುವರೆ ಎಕರೆಯಷ್ಟು ನಿತ್ಯ ಹರಿದ್ವರ್ಣ ದೇವರ ಬನವಿದೆ. ಬಹಳ ವರ್ಷಗಳ ಹಿಂದೆ ಟಿಪ್ಪುಸುಲ್ತಾನನು ಈ ಸ್ಥಳಕ್ಕೆ ಆಗಮಿಸಿ ದೇವಿಯ ಸ್ಥಾನವನ್ನು ಹಾಳುಗೆಡವಲೆತ್ನಿಸಿದಾಗ ಹೆಜ್ಜೇನು ದಾಳಿಯಾಗಿ ಅವನು ಅಲ್ಲಿಂದ ಕಾಲ್ಕಿತ್ತನೆನ್ನಲಾಗುವುದು.

ನಂಬಿದ ಭಕ್ತರನ್ನು ಸಲಹುತ್ತಾ, ಬೇಡಿದ ವರವನ್ನಿಯುತ್ತಾ ಸಲಹುತ್ತಿರುವ ಕರುಣಾಮಯಿಯಾದ ಶ್ರೀ ಮಂದತವ್ವ ದೇವಿಯ ಮಹಿಮೆ ಅಪಾರ ಈ ದೇವಸ್ಥಾನದ ಬಗ್ಗೆ ತೀತಮಾಡ ಅರಸು ರವರು ಮಾಹಿತಿ ನೀಡಿರುತ್ತಾರೆ.

## ಅಂದಗಾಲ ಶ್ರೀ ಸುಬ್ರಹ್ಮಣ್ಯ ಜಾತ್ರೆ

ವಿರಾಜಪೇಟೆ ತಾಲೂಕಿನ ಶ್ರೀಮಂಗಲ ತಾವಳಗೇರಿ ಗ್ರಾಮದ ಅಂದಂಗಾಲದಲ್ಲಿ ಶ್ರೀ ಸುಬ್ರಹ್ಮಣ್ಯ ದೇವಸ್ಥಾನವಿರುವುದು. ಪಶ್ಚಿಮಕ್ಕೆ ಮುಖ ಮಾಡಿರುವ ಈ ದೇಗುಲದ ಗರ್ಭಗುಡಿಯಲ್ಲಿ ಶ್ರೀ ಸುಬ್ರಹ್ಮಣ್ಯ ದೇವರ ಶಿಲಾಮೂರ್ತಿಯಿರುವುದು. ಗುಡಿಯ ಎಡಪಾರ್ಶ್ವದಲ್ಲಿ ಶ್ರೀ ಗಣಪತಿಯ ಗುಡಿ ಹಾಗು ಗುಡಿಯ ಹಿಂದೆ ನಾಗ ದೇವರ ಸ್ಥಾನವಿರುವುದು. ಗುಡಿಯ ಹಿಂದೆ ಬಲಕ್ಕೆ ತುಳಸಿಕಟ್ಟೆಯಿರುವುದು. ಮಹಾದ್ವಾರದ ಹೊರಗೆ ಅರಳಿ ಕಟ್ಟೆ ಇರುವುದು. ಅರಳಿ ಮರದ ಬುಡದಲ್ಲಿ ಶ್ರೀ ಸುಬ್ರಹ್ಮಣ್ಯ ದೇವರ ವಾಹನವಾದ ನವಿಲಿನ ಸಿಮೆಂಟನಿಂದ ಮಾಡಿದ ಆಕೃತಿಯನ್ನು ದೇವರಿಗಭಿಮುಖವಾಗಿ ಇಡಲಾಗಿರುವುದು. ದೇವಾಲಯದ ಪೂರ್ವಕ್ಕೆ ಅನತಿ ದೂರದಲ್ಲಿ ನಾಗರ ಕಲ್ಲಿದೆ. ದೇಗುಲದಿಂದ ಈ ಸ್ಥಾನಕ್ಕೆ ಐದು ನಿಮಿಷದ ಕಾಲು ನಡಿಗೆ.

ಈ ದೇವಸ್ಥಾನದ ತಕ್ಕ ಮುಖ್ಯಸ್ಥರಾಗಿದ್ದ ಕುಪ್ಪಡಿರ ಮಾದಮ್ಮಯ್ಯನವರ ಪತ್ನಿಯವರು ಮದುವೆಯಾದ ಹೊಸತರಲ್ಲಿ, ಅವರ ಮನೆಯಮುಂದೆ ಸಮೀಪದಲ್ಲೆ ಇರುವ ದೇವಾಲಯದ ಈ ನಾಗರಕಲ್ಲಿಗೆ ಪ್ರತಿನಿತ್ಯ ಪೂಜೆ ಸಲ್ಲಿಸುತ್ತಿದ್ದರು. ಕೆಲವು ದಿನಗಳು ಕಳೆದಾಗ ಅವರಿಗೆ ಎಲ್ಲೆಂದರಲ್ಲಿ ಹಾವು ಕಾಣಿಸಲು ಶುರುವಾಗತೊಡಗಿತು. ಮನೆಯ ಇತರ ಸದಸ್ಯರಿಗೆ ಹಾವು ಕಾಣಿಸಿಕೊಳ್ಳುತ್ತಿರಲಿಲ್ಲ. ವಿಚಾರಿಸಿ ನೋಡಿದಾಗ ಪೂಜೆಯಲ್ಲಿ ಅಶುದ್ಧವಾಗುತ್ತಿರುವುದರಿಂದಾಗಿ ಈ ರೀತಿ ಅವರಿಗೆ ಮಾತ್ರ ಹಾವು ಕಾಣಿಸಿಕೊಳ್ಳುತ್ತಿರುವುದೆಂದು ತಿಳಿದು ಬಂದಿತು. ಆ ನಂತರ ಆ ನಾಗರಕಲ್ಲಿಗೆ ವರ್ಷಕ್ಕೊಂದು ಬಾರಿ ಕುಂಬ್ಯಾರು ತಿಂಗಳಲ್ಲಿ ಅರ್ಚಕರೇ ಪೂಜಿಸಿ ನೈವೇದ್ಯ ಅರ್ಪಿಸುವಂತೆ ತೀರ್ಮಾನಿಸಲಾಯಿತು. ಆ ಮೇಲಿಂದ ಅವರಿಗೆ ಹಾವು ಕಾಣಿಸದಂತಾಯಿತು.

ಬಹಳ ಪುರಾತನ ಕಾಲದಲ್ಲಿ ಈ ದೇಗುಲವಿರುವ ಸ್ಥಳದಲ್ಲಿ ಒಂದು ದೊಡ್ಡ ಮರವಿತ್ತು. ಆ ಮರದ ಬುಡದಲ್ಲಿ ಶ್ರೀ ಸುಬ್ರಹ್ಮಣ್ಯ  ಶಿಲಾರೂಪಿ ಶಿಲೆಯಿತ್ತು. ಈ ಶಿಲೆಗೆ ಊರಿನವರೆಲ್ಲ ಸೇರಿ ಪೂಜೆ ಸಲ್ಲಿಸುತ್ತಿದ್ದರು. ಅಲ್ಲೇ ಸುತ್ತಮುತ್ತ ಮೇಯುತ್ತಿದ್ದ ಹಸುಗಳು ಆ ಶಿಲೆಗೆ ಹಾಲು ಕರೆಯುತ್ತಿದ್ದವೆಂಬುದಾಗಿ ಹೇಳುವರು.

ಸುಬ್ರಹ್ಮಣ್ಯ ಷಷ್ಠಿಯ  ಸಮಯದಲ್ಲಿ ಇಲ್ಲಿ ದೇವರ ಉತ್ಸವವು ಐದು ದಿನಗಳವರೆಗೆ ನಡೆಯುವುದು. ಊರು ಬಳಕ್, ಹರಕೆಯ ಬಳಕ್, ತುಲಾಭಾರ, ರುದ್ರಾಭಿಷೇಕ, ವಸಂತ ಪೂಜೆ, ಹೀಗೆ ಹಲವಾರು ಪೂಜೆಗಳನ್ನು ಉತ್ಸವದ ಸಮಯದಲ್ಲಿ ಮಾಡಲಾಗುವುದು. ಮತ್ತು ಪ್ರತಿದಿನ ಮುಂಜಾನೆ ಹಾಗು ಮುಸ್ಸಂಜೆ ಹೊತ್ತಿನಲ್ಲಿ ದೇವರ ಪ್ರದಕ್ಷಿಣೆ ಇರುವುದು. ಉತ್ಸವ ಮುಗಿಯುವವರೆಗೂ ಅಪರಾಹ್ನ ಮತ್ತು ರಾತ್ರಿ ಅನ್ನದಾನದ ವ್ಯವಸ್ಥೆ ಮಾಡಲಾಗುವುದು. ಷಷ್ಠಿಯ ದಿನದಂದು ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರು ಹರಕೆ ಮುಡಿಯನ್ನು ಒಪ್ಪಿಸುವರು. ದೇವಾಲಯದಿಂದ ಮೂರು ಕಿ.ಮೀ ದೂರದಲ್ಲಿರುವ ಬಣ್ಣಕೆರೆಗೆ ದೇವರು ಉತ್ಸವದ ಕೊನೆಯ ದಿನದಂದು ಅವಭೃತ ಸ್ನಾನಕ್ಕೆ ತೆರಳುವರು. ಷಷ್ಠಿಯ

ದಿನದಂದು ಅಧಿಕ ಸಂಖ್ಯೆಯಲ್ಲಿ ಭಕ್ತರು ಈ ದೇಗುಲಕ್ಕೆ ಆಗಮಿಸಿ ದೇವರ ದರ್ಶನ ಪಡೆದು ಪೂಜಿಸಿ ಅನ್ನ ಪ್ರಸಾದ ಸ್ವೀಕರಿಸುವರು. ಆ ದಿನದಂದು ದೇವಾಲಯದ ಮುಂದಿರುವ ವಿಶಾಲವಾದ ಮೈದಾನದಲ್ಲಿ ಅಂಗಡಿಯ ಮುಂಗಟ್ಟುಗಳಿಂದ ಕೂಡಿದ ಜಾತ್ರೆಯ ವಾತಾವರಣ ಸೃಷ್ಟಿಯಾಗುವುದು.

ದೇವರ ವಿಗ್ರಹ ಹಾಗು ಭಂಡಾರವನ್ನು ದೇವಸ್ಥಾನದ ತಕ್ಕ ಮುಖ್ಯಸ್ಥರಾದ ಕುಪ್ಪಡಿರ ದಿವಂಗತ ಮಾದಮ್ಮಯ್ಯನವರ ಪುತ್ರರಾದ ಕುಪ್ಪಡಿರ ತಿಲಕದಾಸ ಅವರ ಮನೆಯಲ್ಲಿ ಇಡಲಾಗುವುದು. ಉತ್ಸವದ ಸಮಯದಲ್ಲಿ ಅವರ ಮನೆಯಿಂದ ದೇಗುಲಕ್ಕೆ ತರಲಾಗುವುದು.

ಹುತ್ತರಿ ಹಬ್ಬದಂದು ಊರಿನವರೆಲ್ಲಾ ದೇವಸ್ಥಾನದಲ್ಲಿ ಸೇರಿ ತಕ್ಕನ ಮನೆಗೆ ಹೋಗಿ, ಅಲ್ಲಿಂದ ತಕ್ಕನ ಗದ್ದೆಯಲ್ಲಿ ಕದಿರು ತೆಗೆದು ದೇವಾಲಯಕ್ಕೆ ಹಿಂದಿರುಗಿ ಆ ಮೇಲಿಂದ ತಮ್ಮ ತಮ್ಮ ಮನೆಗೆ ಕದಿರು ಒಯ್ಯುವರು. ಈ ದೇವಸ್ಥಾನಕ್ಕೆ ನಾಲ್ಕುವರೆ ಎಕರೆಯಷ್ಟು ನಿತ್ಯ ಹರಿದ್ವರ್ಣ ದೇವರ ಬನವಿದೆ. ಈ ದೇವಾಲಯದ ಬಗ್ಗೆ ಕುಪ್ಪಡಿರ ದಿ॥ ಮಾದಮ್ಮಯ್ಯನವರು ಮಾಹಿತಿ ನೀಡಿರುತ್ತಾರೆ.

**ವಗರೆಶ್ರೀ ಈಶ್ವರ ಅಯ್ಯಪ್ಪ ಜಾತ್ರೆ**

ದಕ್ಷಿಣ ಕೊಡಗಿನ ವಿರಾಜಪೇಟೆ ತಾಲೂಕಿನಲ್ಲಿರುವ ಟಿ. ಶೆಟ್ಟಿಗೇರಿ ಗ್ರಾಮದಿಂದ ಮೂರು ಕಿ.ಮೀ. ದೂರ ಪಯಣಿಸಿದಾಗ ಸಿಗುವ ವಗರ ಎಂಬ ಸಣ್ಣ ಊರಿನಲ್ಲಿ ಸುಂದರವಾದ ಈ ವಗರೆ ಈಶ್ವರ ದೇವಸ್ಥಾನವು ಕಾಣಸಿಗುವುದು.

ಶಿಲೆಯಿಂದ ನಿರ್ಮಿಸಲಾದ ಮೆಟ್ಟಿಲುಗಳನ್ನು ಏರಿ ಹೆಬ್ಬಾಗಿಲನ್ನು ದಾಟಿದಾಗ ಹೊರಾಂಗಣದಲ್ಲಿ ಧ್ವಜಸ್ತಂಬ ಕಾಣಸಿಗುವುದು. ಮುನ್ನಡೆದು ದೇಗುಲದ ಪ್ರವೇಶ ದ್ವಾರ ದಾಟಿ ಒಳಾಂಗಣ ಪ್ರವೇಶಿಸಿದಾಗ ಗರ್ಭಗುಡಿಯಲ್ಲಿ ವಿರಾಜಮಾನವಾಗಿರುವ ಶ್ರೀ ಈಶ್ವರ ಲಿಂಗದ ಜೊತೆಯಲ್ಲಿ ಈಶ್ವರನ ವಿಗ್ರಹದ ದರ್ಶನವಾಗುವುದು. ಗುಡಿಯ ಬಲಭಾಗಕ್ಕೆ ಶ್ರೀ ಗಣೇಶನ ಗುಡಿ ಹಾಗು ಶ್ರೀ ಅಯ್ಯಪ್ಪ ದೇವರ ಸನ್ನಿದಿ ಮತ್ತು ನವಗ್ರಹ ಪ್ರತಿಷ್ಠಾಪಿಸಲಾಗುವುದು. ಹೊರಾಂಗಣದಲ್ಲಿ ಗುಡಿಯ ಎಡಭಾಗದಲ್ಲಿ ನಾಗದೇವರ ಗುಡಿಯನ್ನು ಕಾಣಬಹುದಾಗಿದೆ. ಅಲ್ಲಿ ನಾಗದೇವರ ಶಿಲಾರೂಪದಲ್ಲಿ ಕೊಳಲುದಾರಿ ಶ್ರೀ ಕೃಷ್ಣನ ಶಿಲಾ ವಿಗ್ರಹವಿರುವುದು.

ಬಹಳ ವರ್ಷಗಳ ಹಿಂದೆ ಕೊಡಗಿನ ನೆರೆರಾಜ್ಯವಾದ ಕೇರಳದಲ್ಲಿರುವ ತಿರುನೆಲಿಯ ಪೆಮ್ಮಯ್ಯ ದೇವರ ಸನ್ನಿದಿಯಿಂದ ಐವರು ದೇವತೆಯರು ಕೊಡಗಿಗೆ ಆಗಮಿಸಿದರು. ಆ ಸಮಯದಲ್ಲಿ ತಿರ್‌ಮೆಲಿ ಕೊಡಗಿಗೆ ಸೇರಿತು. ಅವರಲ್ಲಿ ಮೂವರು ಸ್ತ್ರೀ ದೇವಿಯರು ಮತ್ತು ಇಬ್ಬರು ಪುರುಷ ದೇವರು. ಈ ಐದು ದೇವತೆಯರು ಪುಣ್ಯಭೂಮಿ ಕೊಡಗಿನ ಮಣ್ಣಿನಲ್ಲಿ, ಕಾವೇರಿಯ ಮಡಿಲಿನಲ್ಲಿ ನೆಲೆ ನಿಂತರು. ವಗರೆಯಲ್ಲಿ ಶ್ರೀ ಈಶ್ವರ, ಮತ್ತೂರಿನಲ್ಲಿ ಶ್ರೀ ಭೂತನಾಥೇಶ್ವರ, ಪೂಕೊಳದಲ್ಲಿ ಶ್ರೀ ಮುತ್ತು ಭಗವತಿ, ರುದ್ರಗುಪ್ಪೆಯಲ್ಲಿ ಇಬ್ಬರು ದೇವಿಯರು, ಶ್ರೀ ಜೋಡು ಭಗವತಿಯಾಗಿ ನೆಲೆನಿಂತರು.

ಅಂದಾಜು ಮುನ್ನೂರು ವರ್ಷಗಳ ಹಿಂದೆ ಕಟ್ಟೆರ ಕುಟುಂಬದವರಾದ ಮಾದಪ್ಪ ಎಂಬುವವರು ತಮ್ಮ ಮನೆಯ ಸಮೀಪದಲ್ಲಿದ್ದ ಅರಣ್ಯಕ್ಕೆ ಬೇಟೆಯಾಡಲೆಂದು ಹೋದಾಗ ದೂರದಲ್ಲೊಂದು ಕಾಡು ಕಡವೆ ಕೂಗಿದಂತೆ ಕೇಳಿಸಲು ಧ್ವನಿ ಕಡೆಗೆ ದಾವಿಸಿದಾಗ ಅಲ್ಲೊಂದು ಶಿವಲಿಂಗರೂಪಿ ಶಿಲೆಯ ದರ್ಶನವಾಯಿತು. ಶಿಲೆ ಕಂಡು ದಿಗ್ಭ್ರಮೆಗೊಂಡ ಮಾದಪ್ಪನವರು ಊರಿಗೆ ಹಿಂದಿರುಗಿ ಉಳುವಂಗಡ ಕುಟುಂಬದ ಓರ್ವ ಸದಸ್ಯನಿಗೆ ವಿಷಯ ತಿಳಿಸಿ ಕರೆದೊಯ್ದು ಶಿಲೆಯನ್ನು ತೋರಿಸಿದನು. ಆಮೇಲಿಂದ ಇಬ್ಬರೂ ಸೇರಿ ಸಮೀಪದಲ್ಲಿದ್ದ ಚೆಟ್ಟಂಡ ಹಾಗು ಚೊಟ್ಟೆಯಂಡಮಾಡ ಕುಟುಂಬದವರ ಸೇರಿ ಸಮೀಪದಲ್ಲಿದ್ದ ಚೆಟ್ಟಯಂಡಮಾಡ ಕುಟುಂಬದವರ ಸಹಕಾರದೊಂದಿಗೆ ಶಿವರೂಪಿ ಶಿಲೆಗೆ ಗುಡಿಯನ್ನು ಕಟ್ಟಿ ನಿತ್ಯಪೂಜೆಗಾಗಿ ಪುರೋಹಿತರನ್ನು ನೇಮಿಸಿದರು.

ಈ ನಾಲ್ಕು ಕುಟುಂಬದವರು ಸೇರಿ ಮೊದಲನೆಯದಾಗಿ ಶಿವಲಿಂಗವನ್ನು ದರ್ಶಿಸಿದ ಕಟ್ಟೆರ ಮಾದಪ್ಪನವರನ್ನು ತಕ್ಕನಾಗಿ ಮಾಡಿದರು. ಆಮೇಲಿಂದ ಜೊತೆಯಾದ ಉಳುವಂಗಡ ಸದಸ್ಯನನ್ನು ಚಂಗನನ್ನಾಗಿ ಮಾಡಿದರು. ಇಂದು ಸಲ ಈ ಸಣ್ಣ ಗುಡಿಗೆ ಕಾಡ್ಗಿಚ್ಚು ಬಿದ್ದು ಸುಟ್ಟು ಹೋಗಿತ್ತು. ಆದರೆ ಲಿಂಗ ಮಾತ್ರ ಹಾಗೆ ಇತ್ತು. ಒಂದುಚೂರು ಹಾನಿಯಾಗಿರಲಿಲ್ಲ. ಅಲ್ಲಿಂದ ಪುನಃ ಎಲ್ಲಾರು ಸೇರಿ ಗುಡಿಕಟ್ಟಿದರು.

**ಉತ್ಸವ**

ಮಾರ್ಚ್ ಅಥವಾ ಏಪ್ರಿಲ್ ತಿಂಗಳ ಹದಿನೈದು ತಾರೀಖೀನ ನಂತರ ಬರುವ ಉತ್ತರ ನಕ್ಷತ್ರದಲ್ಲಿ ಈ ದೇಗುಲದ ಉತ್ಸವ ಶುರುವಾಗುವುದು. ಏಳು ದಿನಗಳು ನಡೆಯುವ ಈ ಉತ್ಸವದಲ್ಲಿ ಊರ್ ಬೊಳಕ್, ಹರಕೆ ಬೊಳಕ್, ನಿತ್ಯ ಪೂಜೆಯ ಜೊತೆಗೆ ಮುಂಜಾನೆ ಹಾಗು ಸಾಯಂಕಾಲ ಬಲಿಪೂಜೆಯು ನಡೆಯುವುದು. ಅಪರಾಹ್ನ ಹಾಗು ರಾತ್ರಿ ಊಟದ ವ್ಯವಸ್ಥೆಯೂ ಇರುವುದು. ರಾತ್ರಿ ದೇಗುಲದ ಹೊರಾಂಗಣದಲ್ಲಿ ಕೊಡಿಮರ ನಿಲ್ಲಿಸುವುದರ ಮೂಲಕ ಉತ್ಸವ ಶುರುವಾಗುವುದು. ಕೊಡಿಮರ ನಿಲ್ಲಿಸಿದ ನಂತರ ಮಣ್ಣಿನ ಕುಡಿಕೆಗೆ ಸಗಣಿ ಹುಡಿ ಹಾಗು ಹುತ್ತದ ಮಣ್ಣು ಹಾಕಿ ನವಧಾನ್ಯ ಬಿತ್ತನೆ ಮೊಳಕೆಯೊಡೆದಿದ್ದರೆ ಊರಿಗೆ ಶುಭ ಸಂಕೇತವೆಂಬ ನಂಬಿಕೆ.

ಇಲ್ಲಿ ಕಟ್ಟೆರ ಕುಟುಂಬದವರ ಐನ್‌ಮನೆ ಮತ್ತು ದೇವರ ಭಂಡಾರ ಮನೆ ಒಂದೆ ಆಗಿರುವುದು. ಉತ್ಸವದ ಎರಡನೆ ದಿನದಂದು ರಾತ್ರಿ ಭಂಡಾರ ಮನೆಯಿಂದ ಮೊದಲ ಭಂಡಾರವು ದೇವಸ್ಥಾನಕ್ಕೆ ಬರುವುದು. ದೇವರ ಉತ್ಸವ ಮೂರ್ತಿಯನ್ನು ಅಂದೇ ಎಲ್ಲರ ಸಮ್ಮುಖದಲ್ಲಿ ತರಲಾಗುವುದು. ಎರಡನೆ ಭಂಡಾರವು ಆರನೆಯ ದಿನ ಅಂದರೆ ದೇವಶಯನದಂದು ತರುವರು. ಮೂರನೆ ಭಂಡಾರ ಏಳನೆಯ ದಿವಸ ಅಂದರೆ ಉತ್ಸವದಂದು ತರುವರು. ಹೀಗೆ ಮೂರು ಸಲ ಭಂಡಾರ ತರುವ ಪದ್ಧತಿ ಇರುವುದು. ಊರಿನವರೆಲ್ಲರೂ ಸೇರಿ ತಟ್ಟೆಯಲ್ಲಿ ದೀಪ ಉರಿಸಿಕೊಂಡು ವಾಲಗದೊಂದಿಗೆ ತಕ್ಕನ ಕರೆದುಕೊಂಡು ಭಂಡಾರ ತರುವುದು ಪದ್ಧತಿ. ತಕ್ಕನು ಭಂಡಾರದ ತಟ್ಟೆಯನ್ನು ಕೈಯಲ್ಲಿ ಹಿಡಿದುಕೊಂಡು ಊರಿನವರೊಂದಿಗೆ ದೀಪ ವಾಲಗ ಸಮೇತ ದೇವಸ್ಥಾನಕ್ಕೆ ಬರುವನು.

ಹಬ್ಬದ ಕಟ್ಟು ಬಿದ್ದಲ್ಲಿಂದ, ಊರಿನಲ್ಲಿ ಗುಂಡು ಹೊಡೆಯುವುದು, ಪ್ರಾಣಿಹತ್ಯೆ, ಮರಕಡಿಯುವುದು, ಮಾಂಸ ಮೀನಿನ ಸೇವನೆ, ಇದೆಲ್ಲವನ್ನು ನಿಷೇಧಿಸಲಾಗುವುದು. ಉತ್ಸವದ ಎರಡನೆ ದಿನದಿಂದ ಐದನೆ ದಿನದವರೆಗೆ ಪ್ರತಿ ಮನೆಗೊಬ್ಬ ಸದಸ್ಯನಂತೆ ಇರುಳು ದೇಗುಲಕ್ಕೆ ಮಲಗಲು ಹೋಗುವ ಪದ್ಧತಿ ಇರುವುದು. ಅಕಸ್ಮಾತ್ ಏನಾದರು ಸಮಸ್ಯೆಯಿಂದಾಗಿ ಗೈರುಹಾಜರಾಗುವವರಿಗೆ ಕ್ಷಮೆ ಸಿಗುವುದು. ಯಾವಾಗಲು ದೇವರ ಪ್ರದಕ್ಷಿಣೆ ಇರುವುದು.

ಉತ್ಸವದ ಆರನೆಯ ದಿನದಂದು, ದೇವಶಯನದಂದು ಇಲ್ಲಿ ನಡೆಯುವ ಪಲ್ಲಿ ಬೇಟೆಯು ಬಹಳ ವಿಶೇಷವಾಗಿದೆ. ಅಂದು ಮುಂಜಾನೆ ಊರಿನ ಐದು ಕುಮಾರರು ತಣ್ಣೀರು ಸ್ನಾನ ಮಾಡಿ ಬರಿ ಮೈಗೆ ಬಿಳಿ ಪಂಚೆಯನ್ನು ಕತ್ತರಿ ಆಕಾರದಲ್ಲಿ ತೊಟ್ಟು, ದೇಗುಲದ ದೇವನಡೆಗೆ ಬಂದು ಮೊದಲೇ ಸಿದ್ದಪಡಿಸಿಟ್ಟಿರಲಾಗುವ ಬಿಲ್ಲು, ಬಾಣ, ಕೋಲುಗಳನ್ನು ಹಿಡಿದು, ದೇವರಿಗೆ ಕಾಣಿಸಿಕೊಳ್ಳದಂತೆ ಹೊರಾಂಗಣ ಸುತ್ತಿ, ಒಳಾಂಗಣ ಪ್ರದಕ್ಷಿಣೆ ಬಂದು ಗರ್ಭಗುಡಿಯ ಬಾಗಿಲಲ್ಲಿ ಆಯುಧಗಳನ್ನಿಟ್ಟು ಗುಡಿಯ ಬಲಭಾಗದ ಮೂಲೆಯಲ್ಲಿ ತಮ್ಮ ಕೈಯಿಂದ ಮುಖ ಮುಚ್ಚಿ ನಿಲ್ಲುವರು. ಹೊರಾಂಗಣದಲ್ಲಿ ಇವರನ್ನು ಹುಡುಕಿ, ಒಳಾಂಗಣ ಪ್ರವೇಶಿಸಿ ಅಲ್ಲೂ ಇವರನದನು ಕಾಣದೆ, ದೇವರು ಗರ್ಭಗುಡಿ ಪ್ರವೇಶಿಸುವರು. ಈ ಹುಡುಕಾಟದಲ್ಲಿ ಪರಸ್ಪರ ಕಾಣಿಸಿಕೊಂಡರೆ ಅಶುಭವೆನ್ನುವರು. ಈ ಆಚರಣೆಯ ಸಮಯದಲ್ಲಿ ಹೆಣ್ಣುಮಕ್ಕಳ ಇರುವಿಕೆ ನಿಷೇಧ. ಪೂಜೆಯ ನಂತರ ಕುಮಾರರಿಗೆ ಪ್ರಸಾದ ರೂಪದಲ್ಲಿ ಆಶೀರ್ವಾದ ದೊರಕುವುದು.

ಸಾಯಂಕಾಲ ದೇವರ ಪ್ರದಕ್ಷಿಣೆಯ ನಂತರ ಇರುಳಾದಂತೆ ದೇವಶಯನ. ಗರ್ಭಗುಡಿಯಲ್ಲಿರುವ ಲಿಂಗದ ಮುಂದಿರುವ ಶಿಲೆಯ ಮೇಲೆ ಕೆಂಪು ವಸ್ತ್ರ ಹಾಸಿ ಮೇಲೆ ಭತ್ತ ಹರಡಿ ವಿಗ್ರಹವನ್ನು ಮಲಗಿಸಿ, ಮೇಲೆ ಕೆಂಪು ವಸ್ತ್ರ ಮುಚ್ಚಿ, ಬಾಗಿಲು ಹಾಕಿ ಕಡಕಲೆ, ಬಿಲ್ಲು, ಬಾಣಗಳನ್ನು ಬಾಗಿಲ ಹೊರಗಿಡುವರು. ಮರುದಿನ ಗೋವನ್ನು ಗರ್ಭಗುಡಿಯ ಮುಂದೆ ನಿಲ್ಲಿಸಿ ಬಾಗಿಲು ತೆರೆದು ವಿಗ್ರಹ ಹೊರತಂದು ಗೋವಿನ ಮುಂದೆ ಹಿಡಿದು ವಸ್ತ್ರ ತೆಗೆದು ಗೋವಿಗೆ ಮುಟ್ಟಿಸಿ ಶುದ್ಧಕಲಶ ಮಾಡಿ ಪೂಜಿಸುವರು. ಮಹಾಪೂಜೆಯ ನಂತರ ಗೋವಿವಾಹ, ಕಾಯಿಗೆ ಗುಂಡು ಹೊಡೆಯುವುದು, ಚೆಣ್ಣರಿಗೆ ಪರಸ್ಪರ ಕಾಯಿ ಎಳೆದಾಡುವ ಸ್ಪರ್ಧೆ ಇರುವುದು. ನಂತರ ದೇವರ ಪ್ರದಕ್ಷಿಣೆಯ ಬಳಿಕ ಅವಭೃತ ಸ್ನಾನಕ್ಕೆ ಮೂರು ಕಿ.ಮೀ. ದೂರದಲ್ಲಿರುವ ಕಕ್ಕಟ್ ಹೊಳೆಗೆ ತೆರಳುವರು. ಹಿಂದಿರುಗಿದ ಮೇಲೆ ಹೊರಾಂಗಣದಲ್ಲಿ ದೇವರ ನೃತ್ಯ ಪ್ರದಕ್ಷಿಣೆಯ ಬಳಿಕ ಒಳಾಂಗಣದಲ್ಲಿರುವ ಉಯ್ಯಾಲೆಯಲ್ಲಿಟ್ಟು ವಸಂತ ಪೂಜೆ ಆಮೇಲೆ ಗರ್ಭಗುಡಿಯಲ್ಲಿ ಅಲಂಕಾರ ಪೂಜೆಯೊಂದಿಗೆ ಉತ್ಸವವು ಕೊನೆಗೊಳ್ಳುವುದು.

ಜಳಕವಾಡಿ ಪೂಜಿಸಿ ಬಿದಿರಿನ ದೊಣ್ಣೆಯನ್ನು ಉರಿಸಿಕೊಂಡು ಅಂದರೆ ಪಂಜಿನೊಂದಿಗೆ ವಾಪಸ್ ಬರುವಾಗ ದಾರಿಯಲ್ಲಿ ಭದ್ರಕಾಳಿ ದೇವಿಯ ದಾರಿಯಲ್ಲಿ ಪೂಜಿಸಿ, ಅರಳಿಮರದ ಸಮೀಪದಲ್ಲಿ ದೇವರನ್ನು ಆಹ್ವಾನಿಸಿ ದೇವಸ್ಥಾನಕ್ಕೆ ಬರುವರು. ದೇವಸ್ಥಾನದಲ್ಲಿ ಉತ್ಸವ ಮೂರ್ತಿಯ ಹನ್ನೊಂದು

ಪ್ರದಕ್ಷಿಣೆ, ಸಿಡಿಮದ್ದಿನ ಪ್ರದರ್ಶನವಿರುವುದು. ಜಳಕವಾಗಿ ಬರುವಾಗ ಜೊತೆಯಲ್ಲಿ ಬರುವವರು ತೇನಮರದ ಕೊಂಬೆಯನ್ನು ಹಿಡಿದುಕೊಂಡು ತೇನ ಹಾಡು ಹಾಡುತ್ತಾ ದೇವಸ್ಥಾನಕ್ಕೆ ಪ್ರದಕ್ಷಿಣೆ ಬರುವರು. ಉತ್ಸವ ಶುರುವಾದಲ್ಲಿಂದ ಮುಗಿಯುವವರೆಗೂ ಅಪರಾಹ್ನ ಹಾಗು ರಾತ್ರಿ ಅನ್ನಪ್ರಸಾದ ವ್ಯವಸ್ಥೇ ಮಾಡಲಾಗುವುದು. ಉತ್ಸವ ಮುಗಿದ ಮರುದಿನ ಶುದ್ಧಕಲಶ ಪೂಜೆ ನಡೆಯುವುದು.

ವರ್ಷಂಪ್ರತಿ ಉತ್ಸವದ ಕೊನೆಯ ದಿನದಂದು ದೇವರು ಸ್ನಾನಕ್ಕೆ ಹೊರಡುವ ಸಮಯದಲ್ಲಿ ಮಳೆ ಬರುವುದು ವಿಶೇಷ. ಜೋರಾಗಿ ಬರಲಿಲ್ಲವೆಂದರೂ ಸಣ್ಣದಾಗಿ ಹನಿ ಜಿನುಗುವುದಂತೂ ಖಂಡಿತ.

ಯಾರಾದರೂ ಯಾರಿಗಾದರು ಅನ್ಯಾಯ ಮಾಡಿದ್ದಲ್ಲಿ, ನಿರಪರಾಧಿಗಳು, ದೇಗುಲಕ್ಕೆ ಬಂದು, ದೇವರನ್ನು ಭಕ್ತಿಯಿಂದ ಮನಃಪೂರ್ವಕವಾಗಿ ನೆನೆದು ಅಡ್ಡಬಿದ್ದಲ್ಲಿ, ಅನ್ಯಾಯ, ಅಪರಾಧ ಮಾಡಿದವರಿಗೆ ಶಿಕ್ಷೆಯಾಗಿ, ನಿರಾಪರಾಧಿಗಳಿಗೆ ಶುಭವಾಗುವುದೆನ್ನುವರು.

ಗಣೇಶ ಚತುರ್ಥಿಯಂದು ಈ ದೇಗುಲದಲ್ಲಿರುವ ಗಣೇಶ ಗುಡಿಯ ಸಮೀಪದಲ್ಲಿ ಊರಿನವರೆಲ್ಲ ಸೇರಿ, ಸಾಮೂಹಿಕ ಗಣಹೋಮ ಮಾಡುವರು. ಅಯ್ಯಪ್ಪ ಭಕ್ತರು ಮಾಲೆ ಹಾಕಿಸಿಕೊಂಡು ಇದ್ದುಕೊಂಡು ಇರುಮುಡಿ ಕಟ್ಟಿ ಪೂಜೆ ಮಾಡಿಕೊಂಡು ಶಬರಿಮಲೆಗೆ ಹೋಗಿ ಬರುವರು.

ರೋಹಿಣಿ ನಕ್ಷತ್ರದ ದಿನದಂದು ಹಗಲು ಹೊತ್ತಿನಲ್ಲಿ ವಗರೆ ಶ್ರೀ ಈಶ್ವರ ಅಯ್ಯಪ್ಪ ದೇವಗರಿಗೆ ರೋಹಿಣಿ ನಕ್ಷತ್ರದಲ್ಲಿ ಕದಿರು ತೆಗೆಯಲಾಗುವುದು. ಆ ದಿನ ದೇವರ ಗದ್ದೆಯಲ್ಲಿ ಎರಡು ತೋರಣ ಕಟ್ಟಿ ಒಂದರಲ್ಲಿ ಅರ್ಚಕರು ದೇವರಿಗೆಂದು ಕದಿರು ತೆಗೆಯುವರು. ಆ ನಂತರ ತಕ್ಕನು ಇನ್ನೊಂದರಲ್ಲಿ ಊರಿನವರಿಗೆಂದು ಕದಿರು ತೆಗೆಯುವನು. ಆನಂತರ ಎಲ್ಲರೂ ದೇಗುಲಕ್ಕೆ ಹಿಂದಿರುಗಿ ದೇಗುಲದಲ್ಲಿರುವ ಬಲಿಕಲ್ಲಿಗೆ ಕದಿರುಹಾಕಿ ಅವರವರ ಮನೆಗಳಿಗೆ ಹಿಂದಿರುಗಿ ಗದ್ದೆಯಲ್ಲಿ ಕದಿರು ತೆಗೆಯುವರು.

ದೇಗುಲದ ಮುಂದೆ ಹೊರಾವರಣದಲ್ಲಿ ನರಿ ಅಂಬಲವಿರುವುದು. ದೊಡ್ಡ ಹಲಸಿನ ಮರದ ಬುಡದಲ್ಲಿರುವ ದೊಡ್ಡ ಶಿಲೆ ಈ ಅಂಬಲದ ಪ್ರತೀಕ. ಹಿಂದಿನ ಕಾಲದಲ್ಲಿ ಬೇಟೆಗೆ ಹೋದವರು ಹುಲಿಯನ್ನು ಕೊಂದರೆ ಅವರಿಗೆ ನರಿಮಂಗಲ (ಹುಲಿಮದುವೆ) ಮಾಡುವ ಪದ್ಧತಿ ಇತ್ತು. ಈ ಅಂಬಲದಲ್ಲಿ ಹುಲಿಕೊಂದ ವೀರನಿಗೆ ಶಾಸ್ತ್ರೋಕ್ತವಾಗಿ ಮದುವೆ ಮಾಡುತ್ತಿದ್ದರು. ಚೊಟ್ಟೆಯಂಡಮಾಡ ನಾಣಯ್ಯ ಎಂಬವರಿಗೆ ಇಲ್ಲಿ ಹುಲಿ ಮದುವೆ ಆಗಿತ್ತೆನ್ನುವರು. ಈ ದೇವಾಲಯದ ಆಚರಣೆ ಬಗ್ಗೆ ಕಟ್ಟೆರ ಅಚ್ಚಪ್ಪ, ಈಶ್ವರ, ಚೆಟ್ಟಂಡ ಸೋಮಯ್ಯನವರುಗಳು ಮಾಹಿತಿ ನೀಡಿರುತ್ತಾರೆ.

**ಶ್ರೀ ಮೃತ್ಯುಂಜಯ ಜಾತ್ರೆ**

ಕೊಡಗಿನ ಪಶ್ಚಿಮ ಘಟ್ಟ ಪ್ರದೇಶದಲ್ಲಿ ಸುಂದರ ನದಿ–ವನಗಳ ಬೀಡಾದ ಮಲೆನಾಡಿನ ಪುಣ್ಯ ಭೂಮಿಯಲ್ಲೆ ನಿಂತಿರುವ ಶ್ರೀ ಮೃತ್ಯುಂಜಯ ಸ್ವಾಮಿಯ ದೇವಸ್ಥಾನವು ಬಾಡಗರಕೇರಿಯಲ್ಲಿದೆ.

ಬಾಡಗರಕೇರಿ, ಬಿರುನಾಣಿ, ತೆರಾಲು, ಮತ್ತು ಪಕರಟಕೇರಿ ಸೇರಿ ಮರೆನಾಡೆಂದು ಕರೆಯಲಾಗುತ್ತದೆ. ಬಾಡಗ, ಗರಿಕೇರಿ, ಪೊರಾಡು ಈ ಮೂರು ಕೇರಿ ಸೇರಿ ಬಾಡಗರಕೇರಿ ಗ್ರಾಮ ಆಗಿರುವುದು. ದಕ್ಷಿಣ ಭಾರತಕ್ಕಾಗಿ ಇರುವಂತಹ ಮೃತ್ಯುಂಜಯ ದೇವಸ್ಥಾನ ಇದೊಂದೆ.

ಇದು ಕೇರಳದ ಗಡಿ ಪ್ರದೇಶಕ್ಕೆ ಅಂಡಿಕೊಂಡಂತಿರುವುದು. ಗೋಣಿಕೊಪ್ಪದಿಂದ ಸುಮಾರು ೩೫ಕಿ.ಮೀ ದೂರದಲ್ಲಿರುವುದು. ಟಿ. ಶೆಟ್ಟಿಗೇರಿಯಿಂದ ಬಿರುನಾಣಿಗೆ ಹೋಗುವ ಮಾರ್ಗದಲ್ಲಿ ಈ ದೇವಸ್ಥಾನ ಸಿಗುವುದು.

ಶ್ರೀ ಮೃತ್ಯುಂಜಯ ದೇವರ ಲಿಂಗದ ಸ್ಥಾಪನೆಯು ಒಂದು ಸಾವಿರ ವರ್ಷಗಳ ಹಿಂದೆ ಆಗಿರಬಹುದೆಂದು ಅಂದಾಜಿಸಲಾಗುವುದು. ಈ ಕ್ಷೇತ್ರದಲ್ಲಿ ಮಹಾಮೃತ್ಯುಂಜಯ ಹೋಮ, ಗಾಹು ಸಾಮೂಹಿಕ ಮೃತ್ಯುಂಜಯ ಹೋಮವನ್ನು ಪ್ರತಿನಿತ್ಯ ಮಾಡಲಾಗುವುದು. ಈ ಹೋಮವನ್ನು ಮಾಡಿಸುವುದರಿಂದ ದುರ್ಮರಣಕ್ಕೀಡಾಗುವುದು ತಪ್ಪುವುದೆಂದು ಭಕ್ತರ ನಂಬಿಕೆಯಾಗಿದೆ. ಪ್ರತಿ ದಿನ ಅಪರಾಹ್ನ ಹನ್ನೆರಡು ಗಂಟೆಗೆ ಮಹಾಪೂಜೆಯು ನಡೆಯುವುದು. ಆನಂತರ ಸಮೀಪದಲ್ಲಿರುವ ವಿಷ್ಣು ದೇವಸ್ಥಾನದಲ್ಲಿ ಪೂಜೆ ನಡೆಯುವುದು. ಈ ದೇಗುಲಕ್ಕೆ ಒಂದು ಕೆರೆ ಇದೆ. ಇಲ್ಲಿಗೆ ಆಗಮಿಸುವ ಭಕ್ತರಿಗೆಲ್ಲ ಮಹಾಪೂಜೆಯ ಬಳಿಕ ಊಟೋಪಚಾರದ ವ್ಯವಸ್ಥೆ ಮಾಡಲಾಗುವುದು. ಸುಸಜ್ಜಿತ ಬೋಜನಾ ಮಂದಿರವು ಅಚ್ಚುಕಟ್ಟಾಗಿರುವುದು.

ಹಲವಾರು ವರ್ಷಗಳ ಹಿಂದೆ ಕೊಡಗಿನ ಉತ್ತರ ಭಾಗವನ್ನು ಪಾಳೆಗಾರರು ಮತ್ತು ಪೂರ್ವದ ಭಾಗಗಳನ್ನು ನಾಯಕರು ಆಳುತ್ತಿದ್ದರು. ದಕ್ಷಿಣ ಭಾಗವನ್ನು ಕೇರಳದ ರಾಜ ಚರಕಲ್ ಆಳುತ್ತಿದ್ದನು.ಜಿಲ್ಲೆ ತೆಕ್ಕಡ ಮನೆ ಅಚ್ಚಮ್ಮ ಎಂಬುವವರು ಕಂದಾಯ ವಸೂಲಿ ಮಾಡಿ ರಾಜರಿಗೆ ಕಪ್ಪಕಾಣಿಕೆಯನ್ನು ಕಳುಹಿಸುತ್ತಿದ್ದರು. ಕೋಟೆ ಕುಟ್ಟಂಡ ಮುದ್ದ ಎಂಬುವವನು ಅಗತ್ಯವಾದ ವಸ್ತುಗಳನ್ನು ಕೇರಳದಿಂದ ಇಲ್ಲಿಗೆ ತರುವ ವ್ಯಾಪಾರದ ವಹಿವಾಟು ಮಾಡಿಕೊಂಡಿದ್ದನು. ರಾಜನಿಗೆ ಕೊಡಗಿನ ಜನರ ದಕ್ಷತೆ ಕಾರ್ಯನಿರ್ವಹಣೆಯ ಮೇಲೆ ವಿಶ್ವಾಸ, ನಂಬಿಕೆ ಇತ್ತು.

ರಾಜನಿಗೆ ಹುಟ್ಟುತ್ತಿದ್ದ ಮಕ್ಕಳು ಬದುಕುತ್ತಿರಲಿಲ್ಲ. ಹೀಗಾಗಿ ಅವನು ಕೇರಳದ ಕೋಟೆಯಲ್ಲಿ ಶ್ರೀ ಮೃತ್ಯುಂಜಯ ಸ್ವಾಮಿಯ ಪ್ರಾರ್ಥನೆ, ಪೂಜೆ ಮಡುತ್ತಿದ್ದನು. ಆ ಮೇಲಿಂದ ಅವನಿಗೆ ಇಬ್ಬರು ಗಂಡು ಮಕ್ಕಳು ಜನಿಸಿ ಬದುಕಿದರು. ಸಮಯಾಂತರದಲ್ಲಿ ಕಣ್ಣೂರಿನ ರಾಜ ಚರಕಲ್ ರಾಜನ ಮೇಲೆ ದಾಳಿ ಮಾಡುವ ವಿಚಾರ ತಿಳಿದ ರಾಜನು ಮಕ್ಕಳ ಸುರಕ್ಷತೆಯ ಬಗ್ಗೆ ಚಿಂತಿಸಿದನು. ವ್ಯಾಪಾರಿ ಮುದ್ದನಿಗೆ ಮಕ್ಕಳನ್ನು ಎಲ್ಲಿಯಾದರು ಅಡಗಿಸಿಡುವಂತೆ ಹೇಳಿ ಒಪ್ಪಿಸಿದನು. ಮುದ್ದನು ಮಕ್ಕಳನ್ನು ಬಾಡಗರಕೇರಿಯಲ್ಲಿರುವ ಕೊಡವ ಮನೆಯಲ್ಲಿ ಅಡಗಿಸಿಟ್ಟನು. ಚರಕಲ್ ರಾಜನು ಯುದ್ಧದಲ್ಲಿ ಕಣ್ಣೂರಿನ ರಾಜನನ್ನು ಪರಾಜಯಗೊಳಿಸಿ ತನ್ನ ರಾಜ್ಯವನ್ನು ಉಳಿಸಿಕೊಂಡು ಅಡಗಿಸಿಟ್ಟಿದ್ದ ಮಕ್ಕಳನ್ನು ವಾಪಾಸು ಕರೆಸಿಕೊಂಡನು.

ಶ್ರೀ ಮೃತ್ಯುಂಜಯ ದೇವರ ಕೃಪೆಯಿಂದಾಗಿ ರಾಜ್ಯ ಮತ್ತು ಮಕ್ಕಳು ಸುರಕ್ಷಿತವಾಯಿತೆಂದು ಮನಗಂಡ ರಾಜನು, ದೇವರನ್ನು ಭಕ್ತಿಯಿಂದ ಭಜಿಸಿದನು. ಮಕ್ಕಳು ಅಡಗಿದ್ದ ಜಾಗದಲ್ಲಿ ಶ್ರೀ ಮೃತ್ಯುಂಜಯ ದೇವರ ದೇಗುಲ ನಿರ್ಮಿಸಲು ನಿರ್ಧರಿಸಿದನು. ಹೀಗೆ ಬಾಡಗರಕೇರಿಯಲ್ಲಿ ಶ್ರೀ ಮೃತ್ಯುಂಜಯ ದೇವರ ದೇಗುಲ ನಿರ್ಮಾಣವಾಯಿತು. ಅಲ್ಲಿಂದ ಇಲ್ಲಿವರೆಗೆ ದೇವಸ್ಥಾನವು ಅಭಿವೃದ್ಧಿಯನ್ನು ಕಾಣುತ್ತಾ ಪುಜೆ ಪುನಸ್ಕಾರ ನಡೆಯುತ್ತಿರುವುದು.

ಈ ದೇವಾಲಯಕ್ಕೆ ನಾಲ್ಕು ಎಕರೆಯಷ್ಟು ಜಾಗವಿದೆ. ಸುತ್ತಮುತ್ತಲಲ್ಲಿ, ಭಗವತಿ ದೇವಸ್ಥಾನ, ಪೊನ್ಯ ಭಗವತಿ, ಕಳತ್ ಭಗವತಿ, ಕಿಕ್ಕಟ್ ಅಯ್ಯಪ್ಪ, ಕೂಟ್ಯಾಲ್ ಅಯ್ಯಪ್ಪ, ಊರ್ ಚಾಮುಂಡಿ ನೆಲೆ ಸ್ಥಾನ, ಕೋಟೆ ಭಗವತಿ, ಮಂದಣ್ಣಮೂರ್ತಿ, ಕಾಕೋಟ್ ಈಶ್ವರ ಮತ್ತು ಅಯ್ಯಪ್ಪ ಹೀಗೆ ಹಲವಾರು ಪುಣ್ಯ ನೆಲೆಗಳಿವೆ.

ವರ್ಷಕ್ಕೊಮ್ಮೆ ಕುಂಬ್ಯಾರ್ ತಿಂಗಳಲ್ಲಿ ಅರಿದ್ರಾ ನಕ್ಷತ್ರದಲ್ಲಿ ಕೊಡಿಮರ ನಿಲ್ಲಿಸಿ ಹನ್ನೊಂದು ದಿನ ಉತ್ಸವ ಆಚರಿಸುವರು. ಅವಭೃತಸ್ನಾನಕ್ಕಾಗಿ ಕಕ್ಕಟ್ ಹೊಳಗೆ ಹೋಗುವರು. ಈ ದೇಗುಲದ ಬಗ್ಗೆ ಅರ್ಚಕರಾದ ಗಿರೀಶ್ ರವರು ಮಾಹಿತಿ ನೀಡಿರುತ್ತಾರೆ.

### ಶ್ರೀ ಪುತ್ತು ಭಗವತಿ ಜಾತ್ರೆ

**ಕೊ**ಡಗಿನ ವಿರಾಜಪೇಟೆ ತಾಲ್ಲೂಕಿನಲ್ಲಿರುವ ಟಿ. ಶೆಟ್ಟಿಗೇರಿಯಿಂದ ಹದಿನಾಲ್ಕು ಕಿ.ಮೀ. ದೂರದಲ್ಲಿರುವ ಬಿರುನಾಣಿಯಲ್ಲಿ ಈ ದೇವನೆಲೆ ಇರುವುದು. ಪರಕಟಗೇರಿ, ಕಳಕೂರು, ಬಿರುನಾಣಿ ಈ ಮೂರು ಗ್ರಾಮವನ್ನು ಸೇರಿಸಿ ಪಾಕೇರಿ ನಾಡೆಂದು ಕರೆಯುವರು. ಹಸಿರು ತುಂಬಿದ ಪ್ರದೇಶ. ಶ್ರೀ ಪುತ್ತು ಭಗವತಿ ದೇವಿ ನೆಲೆ ನಿಂತಿರುವ ಪುಣ್ಯನೆಲೆ ಈ ಬಿರುನಾಣಿಯಲ್ಲಿರುವುದು.

ಸುಂದರವಾದ, ಆಕರ್ಷಣೀಯವಾದ ನಿಸರ್ಗ ಸೌಂದರ್ಯದ ಮಧ್ಯದಲ್ಲಿ ನೆಲೆನಿಂತಿರುವ ದೇವಿಯು ನೆರೆರಾಜ್ಯವಾದ ಕೇರಳದಿಂದ ಆಗಮಿಸಿದಳೆನ್ನಲಾಗುವುದು. ಅಂದಾಜು ಏಳುನೂರು ವರ್ಷಗಳಿಂದೆ ಸ್ಥಾಪಿಸಲಾದ ದೇವನೆಲೆ.

ಸೃಷ್ಟಿಕರ್ತ ಬ್ರಹ್ಮದೇವನ ಶಕ್ತಿಯಿಂದ ಚಿನ್ನದ ಶಂಕದಿಂದ ಐದು ದೇವತೆಯರು ಪಕ್ಷಿರೂಪದಲ್ಲಿ ಜನ್ಮ ತಳೆದರಂತೆ. ಮಹಾಕಾಳಿಯ ಮಾಯಾಶಕ್ತಿಯ ಗಾಳಿ ಬೀಸುವಾಗ ಮರದ ಮೇಲಿದ್ದಶಂಕಗಳು ಕೆಳಗೆ ಬಿದ್ದು, ಪಕ್ಷಿ ರೂಪದಲ್ಲಿದ್ದ ದೇವತೆಗಳು, ದೇವತಾ ಸ್ವರೂಪ ಪಡೆದರಂತೆ. ಆ ಮೇಲಿಂದ ಈ ದೇವತಾ ಸ್ವರೂಪಿ ನೆಲೆನಿಲ್ಲಲು ಕಳುಹಿಸಿದರಂತೆ. ಐವರಲ್ಲಿ ಇಬ್ಬರು ಪುರುಷ ದೇವರು. ಮೂವರು ಸ್ತ್ರೀ ದೇವಿಯರು. ಇವರಲ್ಲಿ ಓರ್ವ ದೇವನು ಮತ್ತೂರು ಗ್ರಾಮದಲ್ಲಿ ಭೂತನಾಥ ಅಯ್ಯಪ್ಪನಾಗಿ ಮತ್ತೋರ್ವ ದೇವನು ವಗರೆ ಗ್ರಾಮದಲ್ಲಿ ಈಶ್ವರ ಅಯ್ಯಪ್ಪನಾಗಿ ನೆಲೆನಿಲ್ಲುವರು. ಇಬ್ಬರು ದೇವಿಯರು ರುದ್ರಗುಪ್ಪೆ ಗ್ರಾಮದಲ್ಲಿ ದುರ್ಗಿ ಮತ್ತು ದುರ್ಗಾಪರಮೇಶ್ವರಿಯಾಗಿ ನೆಲೆನಿಲ್ಲುವರು. ಜೋಡು ಭಗವತಿಯಾಗಿ ಪೂಜಿಸಲ್ಪಡುವರು.

ನಾಲ್ವರಾದ ಮೇಲೆ ಉಳಿದ ಐದನೆಯ ದೇವಿಯ ಸೂಕ್ತನೆಲೆ ಹುಡುಕುತ್ತಾ ಕೇರಳದ ಕಡೆಗೆ ಪಶ್ಚಿಮಾಭಿಮುಖವಾಗಿ ಹೊರಟಳು. ಇದನ್ನು ನೋಡಿದ ಚಾಮುಂಡಿ ದೇವಿಯು ಪ್ರತ್ಯಕ್ಷವಾಗಿ ಬೆಳಗಾಗುತ್ತಿರಲು ದೇವಿಯನ್ನು ಯಾರಿಗೂ ಕಾಣಿಸದಿರಲೆಂದು ಹುತ್ತದ ಮರೆಯಲ್ಲಿ ಅವಿಸಿಟ್ಟು ತಾನು ಜೇನುನೊಣದ ರೂಪಾಂತರಗೊಂಡು ಊರಿನ ಕಡೆಗೆ ಹಾರಿದಳು. ಊರಿನ ಮನೆಯೊಂದರಲ್ಲಿ ಮಲಗಿ ನಿದ್ರಿಸುತ್ತಿದ್ದ ವ್ಯಕ್ತಿಯೋರ್ವನನ್ನು ಶಬ್ದ ಮಾಡಿ ಎಬ್ಬಿಸಿ ಹುತ್ತದ ಕಡೆಗೆ ಕರೆದೊಯ್ದು ದೇವಿಯನ್ನು ತೋರಿಸುವಳು. ಆ ವ್ಯಕ್ತಿಯು ದೇವಿಯನ್ನು ಕಂಡು ಚಕಿತನಾಗಿ, ಸಂತೋಷದಿಂದ ಸ್ತುತಿಸಿ, ಭಕ್ತಿಯಿಂದ ನಮಿಸಿ ಊರಿಗೆ ಹಿಂತಿರುಗಿ ಊರಿನ ಜನರಿಗೆ ವಿಷಯ ತಿಳಿಸಿ ಕರೆದೊಯ್ಯುವನು. ಊರಿನ ಮಧ್ಯದಲ್ಲಿರುವ ಸುಂದರ ಪ್ರಕೃತಿಯ ಎತ್ತರವಾದ ಪ್ರದೇಶದಲ್ಲಿ ದೇವಿಯನ್ನು ನೆಲೆನಿಲ್ಲುವಂತೆ ಬೇಡಿಕೊಳ್ಳುವರು. ಹಸಿರು ತುಂಬಿದ ತಂಪು ವಾತಾವರಣದ ಆ ಪ್ರದೇಶದಲ್ಲಿ ಜನರ ಪ್ರಾರ್ಥನೆಯನ್ನು ಮೆಚ್ಚಿ ದೇವಿ ನೆಲೆನಿಲ್ಲುವಳು. ಎಲ್ಲರೂ ಸೇರಿ ದೇವಿಗೆ ಗುಡಿಯನ್ನು ನಿರ್ಮಿಸಿ ನಿತ್ಯ ಪೂಜೆಗಾಗಿ ಅರ್ಚಕರನ್ನು ನೇಮಿಸುವರು. ಹುತ್ತದ ಸಮೀಪದಲ್ಲಿ ದೇವಿಯ ದರ್ಶನವಾದ ಕಾರಣ ದೇವಿಯನ್ನು ಪುತ್ತು (ಹುತ್ತ) ಭಗವತಿ ಎಂದು ಕರೆದರು. ಶ್ರೀ ಪುತ್ತೂರಮ್ಮೆ ಎಂದೂ ಕರೆಯುವರು. ದೇವಿಯು ಪಶ್ಚಿಮಾಭಿಮುಖವಾಗಿ ಹೊರಟ್ಟಿದ್ದರಿಂದ, ದೇಗುಲವು ಪಶ್ಚಿಮಕ್ಕೆ ಮುಖಮಾಡಿರುವುದು.

ನಾಡಿನ ಜನರಿಗೆ ಕಷ್ಟ ನಷ್ಟ, ತೊಂದರೆ, ಕಾಯಿಲೆಗಳು ಉಂಟಾಗಲು ದೇವಿಯನ್ನು ಪ್ರಾರ್ಥಿಸಿದಾಗ ಪೊಮ್ಮಂಗಲ ಮಾಡಿದರೆ ಎಲ್ಲಾ ಪರಿಹಾರವಾಗುವುದೆಂದು ದೇವಿಯ ಅಭಯವನ್ನೀಯುವಳು. ದೇವಿಯ ಆಗ್ರಹದಂತೆ ಇಲ್ಲಿ ಪೊಮ್ಮಂಗಲ ಹರಕೆ ಒಪ್ಪಿಸುವ ಪದ್ಧತಿ ಇರುವುದು. ಇದರಿಂದಾಗಿ ಮಕ್ಕಳು ಆರೋಗ್ಯವಂತರಾಗಿ, ವಿದ್ಯಾವಂತರಾಗಿ, ಐಶ್ವರ್ಯದಿಂದ ಬದುಕುವರೆಂದು ನಂಬಲಾಗಿದೆ.

## ಉತ್ಸವ

ವಾರ್ಷಿಕ ಉತ್ಸವದ ಎಂಟನೆ ದಿನದಂದು ಪೊಮ್ಮಂಗಲ ಹರಕೆ ಹೊತ್ತ ಮಕ್ಕಳು ಮುಂಜಾನೆ ದೇಗುಲಕ್ಕೆ ಹೋಗಿ ದೇವಿಯ ಆಶೀರ್ವಾದ ಪಡೆದು ಮನೆಗೆ ಹಿಂತಿರುಗಿ, ಅದಲು ಬದಲು ಉಡುಪು ಧರಿಸಿ ಮದಮಕ್ಕಳಂತೆ ಅಲಂಕರಿಸಿಕೊಂಡು ತಮ್ಮ ತಮ್ಮ ಮನೆಯಲ್ಲಿ ಕೊಡವ ಸಾಂಪ್ರದಾಯಿಕ ಮದುವೆ ಕಾರ್ಯ ನೆರವೇರಿಸಿಕೊಂಡು, ಅಪರಾಹ್ನ ಬಾಳೊಪಾಟ್‌ನೊಂದಿಗೆ (ಕೊಡವ ಸಾಂಪ್ರದಾಯಿಕ ಹಾಡು) ದೇಗುಲಕ್ಕೆ ಮೂರು ಸುತ್ತು ಪ್ರದಕ್ಷಿಣೆ ಬಂದು ದೇವಿಗೆ ಹರಕೆ ಒಪ್ಪಿಸುವರು. ಇದಕ್ಕೆ ಎಡಮ್ಮ ಮದುವೆ ಅಂತಾನು ಹೇಳುವರು.

ಮಾರ್ಚ್ ಹದಿನೈದರ ನಂತರ ಬರುವ ಮೊದಲ ಉತ್ತರ ನಕ್ಷತ್ರದಲ್ಲಿ ಈ ದೇಗುಲದ ವಾರ್ಷಿಕ ಉತ್ಸವವು ಒಂಬತ್ತು ದಿನಗಳ ಕಾಲ ಬಹಳ ವಿಜೃಂಭಣೆಯಿಂದ ಜರುಗುವುದು. ಉತ್ಸವದ ಮೊದಲ ಮೂರು ದಿನ ತೂಚಂಬಲಿ, ನಾಲ್ಕನೆ ದಿನ ರಾತ್ರಿ ಚಾಮುಂಡಿ ದೇವಿಯ ಬೇಡು ಹಬ್ಬ, ಐದನೆ ದಿನ ನಾಡು ಬೊಳಕ್, ತುಲಾಭಾರ ಸೇವೆ. ಆರು ಮತ್ತು ಏಳರಂದು ಹರಕೆ ಬಳಕು, ತುಲಾಭಾರ, ಎಂಟನೆ ದಿನ ದೇವಶಯನ ಒಂಬತ್ತರಂದು ಹಲವಾರು ಪೂಜಾಕಾರ್ಯಗಳು ನಡೆದು

ಸಾಯಂಕಾಲ ದೇವರ ಪ್ರದಕ್ಷಿಣೆಯ ಬಳಿಕ ಅವಭೃತ ಸ್ನಾನಕ್ಕೆ ಹೋಗುವಾಗ ದಾರಿಯಲ್ಲಿರುವ ಅಶ್ವಥಕಟ್ಟೆಯಲ್ಲಿ ದೇವಿಯನ್ನಿಟ್ಟು ಪೂಜಿಸಿ ಪ್ರಸಾದ ವಿತರಿಸಿ ಮುಂದೆ ಸಾಗುವರು. ಹಿಂದಿರುಗಿದ ಮೇಲೆ ದೇವರ ನೃತ್ಯ, ವಸಂತ ಪೂಜೆಯೊಂದಿಗೆ ಉತ್ಸವ ಕೊನೆಗೊಳ್ಳುವುದು.

**ಕೊರಕೋಟು ಶ್ರೀ ಅಯ್ಯಪ್ಪ ಜಾತ್ರೆ**

ಕೊರಕೋಟು ಶ್ರೀ ಅಯ್ಯಪ್ಪ ದೇವಸ್ಥಾನವು ಕೊಡಗಿನ ವಿರಾಜಪೇಟೆಯ ತಾಲ್ಲೂಕಿನ ಶ್ರೀಮಂಗಲ ನಾಡು ಟಿ. ಶೆಟ್ಟಿಗೇರಿ ಗ್ರಾಮದಲ್ಲಿದೆ. ಸಂಪದ್ಭರಿತವಾಗಿ ಬೆಳೆದಿರುವ ಕಾಫಿ ತೋಟದ ಮಧ್ಯದಲ್ಲಿರುವ ಕಾಡು ಈ ದೇವನೆಲೆಯ ಸುತ್ತಮುತ್ತ ತುಂಬಿರುವುದು. ಮುಖ್ಯ ರಸ್ತೆಯಿಂದ ಸ್ವಲ್ಪ ಒಳಗಿರುವ ಈ ದೇವಾಲಯದಲ್ಲಿ ಜನರ, ವಾಹನಗಳ ಸದ್ದುಗದ್ದಲ ಕೇಳಿಸದಂತೆ ಪ್ರಶಾಂತ ವಾತಾವರಣ ತುಂಬಿರುವುದು. ಮುಖ್ಯ ರಸ್ತೆಯಿಂದ ದೇವಸ್ಥಾನಕ್ಕೆ ಹೋಗಲು ಒಳ್ಳೆಯ ಮಾರ್ಗವಿರುವುದು.

ಇದೇ ಗ್ರಾಮದಲ್ಲಿ ವಾಸವಿರುವ ಪುರೋಹಿತ ವರ್ಗದವರು ದೇವರ ಪೂಜೆಯನ್ನು ಚಾಚೂ ತಪ್ಪದಂತೆ ನಡೆಸಿಕೊಂಡಿರುವರು. ಇಲ್ಲಿ ವಾಸಿಸುತ್ತಿರುವ ಕುಟುಂಬದವರೆಲ್ಲಾ ಸೇರಿ ದೇಗುಲದ ಖರ್ಚು ವೆಚ್ಚವನ್ನು ಭರಿಸುವರು. ದೇವಸ್ಥಾನದ ಅಭಿವೃದ್ಧಿಗಾಗಿ ಆಡಳಿತ ಮಂಡಳಿಯವರು ಹಾಗು ಗ್ರಾಮಸ್ಥರು ಶ್ರಮವಹಿಸುವರು. ಜಮ್ಮಕುಳದವರಾದ ಅಮ್ಮಕೊಡವರು, ಚೊಟ್ಟೆಕೊರಿಯಂಡ ಕುಟುಂಬದವರು ದೇಗುಲವನ್ನು ನೋಡಿಕೊಳ್ಳುವರು.

**ಜಾತ್ರೆ**

ದೇವರ ಉತ್ಸವವು ಪ್ರತಿವರ್ಷ ಏಪ್ರಿಲ್ ತಿಂಗಳ ೧೪ ರಿಂದ ೨೦ರ ತನಕ ನಡೆಯುವುದು. ಉತ್ಸವದ ಸಮಯದಲ್ಲಿ ಹರಕೆ, ಕಾಣಿಕೆಯ ರೂಪದಲ್ಲಿ ಸಾಕಷ್ಟು ಧನ ಸಹಾಯವು ಸಿಗುವುದು. ಏಳು ದಿನಗಳವರೆಗೆ ನಡೆಯುವ ಈ ಉತ್ಸವದಲ್ಲಿ ದೇವರ ಪ್ರದಕ್ಷಿಣೆ, ಹರಕೆ ಬೊಳಕ್ ಇತ್ಯಾದಿ ಪೂಜೆಗಳೊಂದಿಗೆ ಭಕ್ತರಿಗೆ ಊಟೋಪಚಾರದ ವ್ಯವಸ್ಥೆಯನ್ನೂ ಮಾಡಲಾಗುವುದು. ಉತ್ಸವದ ಕೊನೆಯ ದಿನ ಅವಭೃತ ಸ್ನಾನಕ್ಕೆ ಹೋಗುವಾಗ ದೇವರು ಮೂಲಸ್ಥಾನವಾದ ಉದ್ಯಾನವೆಂಬ ಜಾಗದಲ್ಲಿರುವ ಪೀಠದಲ್ಲಿ ಕುಳಿತು ಪೂಜೆ ಮಾಡಿಸಿಕೊಂಡು ಮುಂದಕ್ಕೆ ಹೊರಡುವರು. ದೇಗುಲದಿಂದ ಮೂರು ಕಿ.ಮೀ. ದೂರದಲ್ಲಿರುವ ಲಕ್ಷ್ಮಣತೀರ್ಥ ಹೊಳೆಯಲ್ಲಿ ಜಳಕವಾಗಿ ಅಲ್ಲಿರುವ ಪೀಠದಲ್ಲಿ ಪೂಜಿಸಿಕೊಂಡು ಹಿಂದಿರುಗುವರು.

ನೂರು ವರ್ಷಗಳ ಹಿಂದೆ ಪ್ರತೀ ಐದು ವರ್ಷಕ್ಕೊಮ್ಮೆ ದೇವರು ಇರ್ಪುವಿಗೆ ಹೋಗಿ ಸ್ನಾನ ಮಾಡಿ ಬರುತ್ತಿದ್ದರೆಂದು ಹೇಳಲಾಗುವುದು. ಮೊದಲು ದೇವರು ನೆಲೆನಿಂತಿದ್ದ ಉದ್ಯಾನದಲ್ಲಿ ನಿತ್ಯ ಪೂಜೆಯು ಇರುವುದಿಲ್ಲ. ಹುತ್ತರಿ ಹಬ್ಬದಂದು ಹಾಗು ಉತ್ಸವದಂದು ಕೊರಕೋಟುವಿನ ದೇಗುಲದಲ್ಲಿ ಪೂಜಿಸಿದ ನಂತರ ಉದ್ಯಾನದಲ್ಲಿ ಪೂಜಿಸಲಾಗುವುದು.

ಸೊಗಸಾಗಿ ಬೆಳೆದು ನಿಂತಿರುವ ಕಾಫೀ ತೋಟದ ಮಧ್ಯದಲ್ಲಿರುವ ಈ ದೈವಿಕ ನೆಲೆಯು ಬಹಳ ಪವಿತ್ರವಾಗಿದೆ. ಈ ದೇಗುಲಕ್ಕೆ ಮುವತ್ತೆರಡು ಏಕರೆಯಷ್ಟು ವಿಸ್ತೀರ್ಣ ಹೊಂದಿರುವ ನಿತ್ಯ ಹರಿದ್ವರ್ಣ ದೇವರ ಬನವಿದೆ.

ದಿವ್ಯ ಮನೋಹರ ಭಗವತ್ ಕೃಪೆಯಿಂದಾಗಿ ಗ್ರಾಮಸ್ಥರು ಸಮೃದ್ಧಿಯಿಂದ ಆರೋಗ್ಯವಂತರಾಗಿ ಸುಖ ಜೀವನ ನಡೆಸುವಂತಾಗಿದೆ. ಈ ದೇವಾಲಯದ ಜಾತ್ರೆಯ ಬಗ್ಗೆ ಕೋಟ್ರಮಡ ಅರುಣ್ ಅಪ್ಪಣ್ಣನವರು ಮಾಹಿತಿ ನೀಡಿರುತ್ತಾರೆ.

**ಹೇರ್ಮಾಡು ಶ್ರೀ ಈಶ್ವರ ಜಾತ್ರೆ**

ಈ ದೇಗುಲವು ವಿರಾಜಪೇಟೆ ತಾಲೂಕಿನಲ್ಲಿರುವ ಶ್ರೀಮಂಗಲ ನಾಡಿನ ಕುಮಟೂರು – ಬಾಡಗ ಗ್ರಾಮದಲ್ಲಿರುವುದು ಸುಂದರವಾದ ಪರಿಸರದ ಮಧ್ಯದಲ್ಲಿರುವ ಈ ದೇವಸ್ಥಾನವು ಬಹಳ ಪ್ರಾಚೀನವಾದುದು.

ಹಲವಾರು ವರ್ಷಗಳ ಹಿಂದೆ ಕುರುಬ ಜನಾಂಗದವರು ಕಾಡಿನಲ್ಲಿದ್ದ ಈ ಶಿವಲಿಂಗವನ್ನು ಕಂಡು ಊರಿನವರಿಗೆ ತಿಳಿಸಿದರು. ಆ ನಂತರದಲ್ಲಿ ಲಿಂಗವಿರುವ ಪ್ರದೇಶದಲ್ಲಿ ಹುಡಿಯನ್ನು ನಿರ್ಮಿಸಿ ಪೂಜಿಸಲು ಅರ್ಚಕರನ್ನು ನೇಮಿಸಲಾಯಿತು. ಅಂದಿನಿಂದ ಇಂದಿನವರೆಗೂ ಈ ದೇಗುಲದಲ್ಲಿರುವ ಶ್ರೀ ಈಶ್ವರ ದೇವರಿಗೆ ಮೂರು ಹೊತ್ತು ಪೂಜೆ ಸಲ್ಲಿಸಲಾಗುತ್ತಿರುವುದು. ದೇಗುಲದ ಮಹಾದ್ವಾರದ ಮುಂದೆ, ಲಿಂಗವನ್ನು ಮೊದಲು ಕಂಡ ಕುರುಬರ ಹಿರಿಯರಿಗಾಗಿ ಸ್ಥಾಪಿಸಿರುವ ಗುರುವಿನ ಸ್ಥಾನವಿರುವುದು. ದೇಗುಲದ ಹೊರಾಂಗಣದ ಬಲಬದಿಗೆ ಬಿಲ್ವಪತ್ರೆ ಮರ ಹಾಗು ಎಡಕ್ಕೆ ನವಗ್ರಹ ಗುಡಿಯಿರುವುದು. ದೇಗುಲದ ಮುಂಭಾಗದಲ್ಲಿ ಧ್ವಜಸ್ತಂಬ ಹಾಗು ಎಡಕ್ಕೆ ನವಗ್ರಹ ಗುಡಿಯಿರುವುದು. ದೇಗುಲದ ಮಹಾದ್ವಾರದ ಮುಂದೆ, ಲಿಂಗವನ್ನು ಮೊದಲು ಕಂಡ ಕುರುಬರ ಹಿರಿಯರಿಗಾಗಿ ಸ್ಥಾಪಿಸಿರುವ ಗುರುವನ ಸ್ಥಾನವಿರುವುದು. ದೇಗುಲದ ಹೋರಾಂಗಣದ ಬಲತುದಿಗೆ ಬಿಲ್ವಪತ್ರೆ ಮರ ಹಾಗು ಎಡಕ್ಕೆ ನವಗ್ರಹ ಗುಡಿಯಿರುವುದು. ದೇಗುಲದ ಮುಂಭಾಗದಲ್ಲಿ ಧ್ವಜಸ್ತಂಬ ಹಾಗು ಅದರ ಮುಂದೆ ಎರಡು ಬದಿಗೆ ಒಂದೊಂದು ಕಲ್ಲಿನ ದೀಪ ಕಂಬವಿರುವುದು.

ದೇಗುಲದ ಸುತ್ತಲಿನ ಗೋಡೆಯಲ್ಲಿ ಸಾಲಾಗಿ ಹುದುಗಿಟ್ಟಿರುವ ಶಿವರಾತ್ರಿಯಂದು ಉರಿಸಲಾಗುವ ಕಲ್ಲಿನ ದೀಪಗಳು ಗಮನ ಸೆಳೆಯುವವು. ಧ್ವಜದ ಸಮೀಪದಲ್ಲಿ ಬಲಿಕಲ್ಲಿರುವುದು. ಒಳಾಂಗಣದ ಪ್ರವೇಶದ್ವಾರದ ಮೇಲೆ ಮರದಲ್ಲಿ ಕೆತ್ತಲಾಗಿರುವ ಶಿವನ ಚಿತ್ರಣವು ಅದ್ಭುತವಾಗಿದೆ. ಒಳಾಂಗಣದಲ್ಲಿ ಗರ್ಭಗುಡಿಯಲ್ಲಿ ವಿರಾಜಮಾನವಾಗಿರುವ ಶ್ರೀ ಈಶ್ವರ ದೇವರ ದರ್ಶನವಾಗುವುದು. ಗುಡಿಯ ಬಲಭಾಗದಲ್ಲಿ ಶ್ರೀ ಗಣಪತಿ ಹಾಗು ಶ್ರೀ ಸುಬ್ರಹ್ಮಣ್ಯ ದೇವರ ಗುಡಿಯಿರುವುದು.

ಒಳಾಂಗಣದ ಗುಡಿಯ ಎಡಭಾಗದಲ್ಲಿ ಬಾವಿಯಿರುವುದು. ಬಹಳ ವರ್ಷಗಳ ಹಿಂದೆ ಟಿಪ್ಪುಸುಲ್ತಾನನು ಈ ದೇಗುಲಕ್ಕೆ ಆಗಮಿಸಿ ದೇಗುಲವನ್ನು ಧ್ವಂಸಗೊಳಿಸಲೆಂದು ಪ್ರಯತ್ನಿಸುತ್ತಿರುವಾಗ, ದೇವರನ್ನು ಪೂಜಿಸುತ್ತಿದ್ದ ಅರ್ಚಕರು ಟಿಪ್ಪುವಿನ ಕೈಗೆ ಸಿಗದಂತೆ ದೇವರ ವಿಗ್ರಹದೊಂದಿಗೆ ಈ

ಬಾವಿಗೆ ಹಾರಿದನೆನ್ನಲಾಗುವುದು. ಆ ನಂತರದಲ್ಲಿ ಈ ಬಾವಿಯನ್ನು ಮುಚ್ಚಿ, ಕಾಲಾಂತರದಲ್ಲಿ ಅಲ್ಲಿಯೇ ಹೊಸ ಬಾವಿ ತೋಡಿದರೆನ್ನಲಾಗುವುದು. ಬಾವಿಗೆ ಹಾರಿ ಪ್ರಾಣತ್ಯಾಗ ಮಾಡಿದ ಬ್ರಾಹ್ಮಣನು ಬ್ರಹ್ಮರಾಕ್ಷಸನಾಗಿ ದೇಗುಲದ ಹೊರಾಂಗಣದ ಗುಡಿಯಲ್ಲಿ ನೆಲೆನಿಂತಿರುವರು ಎಂದು ಅವರ ನಂಬಿಕೆ.

**ಜಾತ್ರೆ**

ಈ ದೇವಾಲಯದ ಸಮೀಪದಲ್ಲಿ ಶ್ರೀ ಚಾಮುಂಡಿ ದೇವಿಯು ದೇಗುಲದ ರಕ್ಷಕಿಯಾಗಿ ನೆಲೆನಿಂತಿರುವಳು. ಮೂರು ವರ್ಷಕ್ಕೊಂದು ಬಾರಿ ಇಲ್ಲಿ ಚಾಮುಂಡಿ ಕೋಲವು ನಡೆಯುವುದು.

ಉತ್ಸವದಂದು ದೇವರು ದೇಗುಲದ ಸಮೀಪದಲ್ಲೆ ಇರುವ ಈ ಹೊಳೆಗೆ ಅವಭೃತ ಸ್ನಾನಕ್ಕೆ ಹೋಗುವರು. ಶಿವರಾತ್ರಿಯ ಸಮಯದಲ್ಲಿ ಈ ದೇವರ ಉತ್ಸವವು ಹನ್ನೊಂದು ದಿನಗಳ ಕಾಲ ವಿಜೃಂಭಣೆಯಿಂದ ನಡೆಯುವುದು. ಉತ್ಸವದ ಸಮಯದಲ್ಲಿ ಅಪರಾಹ್ನ ಅನ್ನದಾನದ ವ್ಯವಸ್ಥೆಯೂ ಇರುವುದು. ಇದರ ಬಗ್ಗೆ ಅರ್ಚಕರಾದ  ರಾಘವೇಂದ್ರ ರವರು ಮಾಹಿತಿ ನೀಡಿರುತ್ತಾರೆ.

**ಇರ್ಪು ಶ್ರೀ ರಾಮೇಶ್ವರ ಜಾತ್ರೆ**

ಅತೀ ಪುರಾತನವಾದ ಈ ದೇವಸ್ಥಾನವು ವಿರಾಜಪೇಟೆ ತಾಲೂಕಿನ ಶ್ರೀಮಂಗಲದ ಸಮೀಪದಲ್ಲಿರುವ ಇರ್ಪುವಿನಲ್ಲಿರುವುದು. ಈ ದೇವಸ್ಥಾನದಲ್ಲಿರುವ ಶಿವಲಿಂಗವನ್ನು ತ್ರೇತಾಯುಗದಲ್ಲಿ ಶ್ರೀರಾಮನು  ಪ್ರತಿಷ್ಠಾಪಿಸಿದನೆನ್ನಲಾಗುವುದು.

ಕಾಫಿ ತೋಟದ ಮಧ್ಯದಲ್ಲಿರುವ ರಸ್ತೆಯಲ್ಲಿ ಹೋಗುವಾಗ ಈ ದೇಗುಲವು ಕಾಣಸಿಗುವುದು. ಈ ದೇಗುಲವನ್ನು ಸಮೀಪಿಸುತ್ತಿದ್ದಂತೆ ಮುಖ್ಯದ್ವಾರದ ಎದುರಿನಲ್ಲಿರುವ ಬಿಲ್ವಪತ್ರೆ ಮರ ಎದುರಾಗುವುದು. ಒಳಾಂಗಣ ಪ್ರವೇಶಿಸಿದಾಗ ಗರ್ಭಗುಡಿಯಲ್ಲಿರುವ ಶ್ರೀ ರಾಮೇಶ್ವರ ದೇವರ ದರ್ಶನವಾಗುವುದು. ಗರ್ಭಗುಡಿಯ ಇಕ್ಕೆಲಗಳಲ್ಲಿ ಶ್ರೀ ಗಣಪತಿ, ಶ್ರೀ ಸುಬ್ರಹ್ಮಣ್ಯ, ಶ್ರೀ ಆಂಜನೇಯ ಹಾಗೂ ದೇವಿ ಸೀತಾಮಾತೆಯ ಗುಡಿಗಳಿರುವುದು. ದೇಗುಲದ ಪಶ್ಚಿಮ ದಿಕ್ಕಿನಲ್ಲಿ ಸಮೀಪದಲ್ಲೇ ಇರುವ ಇರ್ಪು ಜಲಪಾತಕ್ಕೆ ಹೋಗುವ ದಾರಿಯಲ್ಲಿ ನಾಗದೇವರ ಸ್ಥಾನ ಹಾಗು ಅಶ್ವಥ ಕಟ್ಟೆ ಇರುವುದು.

ತ್ರೇತಾಯುಗದಲ್ಲಿ ಶ್ರೀರಾಮನು, ಸೀತಾಪಹರಣ ಮಾಡಿದ್ದ ರಾವಣನ ಸಂಹಾರಗೈದು, ರಾವಣನ ಸೋದರನಾದ ವಿಭೀಷಣನಿಗೆ ಪಟ್ಟಾಭಿಷೇಕ ಮಾಡಿ, ತದ ನಂತರ ಅಯೋಧ್ಯೆಗೆ ಪರಿವಾರ ಸಮೇತನಾಗಿ ಸೀತೆಯನ್ನೊಡಗೂಡಿ ಹಿಂದಿರುಗುವಾಗ ಇರುಳಿನ ಸಮಯವಾಗುತ್ತಿರಲು, ಬ್ರಹ್ಮಗಿರಿ ಬೆಟ್ಟ ಶ್ರೇಣಿಯಲ್ಲಿರುವ ಇರ್ಪು ಎಂಬ ಪ್ರದೇಶದಲ್ಲಿ ರಾತ್ರಿ ತಂಗಲು ತೀರ್ಮಾನಿಸಿ ಎಲ್ಲರೂ ಅಲ್ಲಿಯೇ ನಿದ್ರಿಸಿದರು.

ಮರುದಿನ ಮುಂಜಾನೆ ಎದ್ದ ಶ್ರೀರಾಮನು ಶಿವಪೂಜೆ ಮಾಡಲು ಲಿಂಗ ತರಲೆಂದು ಆಂಜನೇಯನನ್ನು ಕಾಶಿಗೆ ಕಳುಹಿಸಿದನು. ದೇವರ ಪೂಜೆಯ ತರುವಾಯ ಜಲಾಹಾರ ಸೇವಿಸುವುದು ಶ್ರೀ ರಾಮನ ನಿಯಮ. ರಾಮನು ಆಹಾರಸೇವಿಸದಿರಲು ಇನ್ನುಳಿದವರು ಆಹಾರ ಸೇವಿಸರು. ಎಲ್ಲರೂ ಆಂಜನೇಯನ ಬರುವಿಕೆಗಾಗಿ ಕಾದು ಕುಳಿತಿದ್ದರು.

ರಾವಣನು ಓರ್ವ ಮಹಾನ್ ಶಿವಭಕ್ತನಾಗಿದ್ದನು. ಅವನನ್ನು ಕೊಂದ ಪಾಪ ಪರಿಹಾರಕ್ಕಾಗಿ ಶ್ರೀ ರಾಮನು ಶಿವಲಿಂಗವನ್ನು ಪ್ರತಿಷ್ಠಾಪಿಸಿ ಪೂಜಿಸಲು ನಿರ್ಧರಿಸಿದನು. ಲಿಂಗ ತರಲು ಹೋದ ಆಂಜನೇಯನು ಬರಲು ತಡವಾಗಿ ಪೂಜಾ ಸಮಯವು ಮೀರುತ್ತಿರಲು ಲಿಂಗಕ್ಕಾಗಿ ಪರಿತಪಿಸುತ್ತಾ ಶ್ರೀ ರಾಮನು ಮರಳಿನಿಂದ ಲಿಂಗ ತಯಾರಿಸುವುದರಲ್ಲಿ ಮಗ್ನನಾದನು. ಶ್ರೀ ರಾಮನು ಪೂರ್ಣಹೊಂಡಿರುವ ಆ ಲಿಂಗವನ್ನೆ ಪ್ರತಿಷ್ಠಾಪಿಸಿ ಪೂಜೆಗಿರುವ ನೀರಿಗಾಗಿ ಹುಡುಕಾಡಿ ಸಿಗದಿರಲು ಲಕ್ಷ್ಮಣನೆಡೆಗೆ ನೋಡಿದನು. ಲಕ್ಷ್ಮಣನು ಶ್ರೀ ರಾಮನ ಇಂಗಿತವನ್ನರಿತು ತನ್ನ ಬಿಲ್ಲಿನಿಂದ ಬಾಣ ಹೂಡಿ ಬಿಟ್ಟಾಗ ಬಾಣವು ಬೆಟ್ಟದ ಕಲ್ಲಿನ ಸೆರೆಗೆ ಚುಚ್ಚಿ, ನೀರಿನ ಸೆಲೆಯೊಂದು ಚಿಲ್ಲೆಂದು ಚಿಮ್ಮಿ ಜಲಧಾರೆಯಾಗಿ ಉಕ್ಕಿ ಹರಿಯಿತು. ಅದು ಮುಂದಕ್ಕೆ ಹರಿದು ಲಕ್ಷ್ಮಣ ತೀರ್ಥ ಹೊಳೆಯೆಂದು ಹೆಸರುವಾಸಿಯಾಯಿತು.

ಬೆಟ್ಟದಿಂದ ಚಿಮ್ಮಿದ ಜಲಧಾರೆಯು ಇರ್ಪು ಜಲಪಾತವೆಂದು ಪ್ರಸಿದ್ಧವಾಯಿತು. ಈ ಜಲದಿಂದ ಶ್ರೀ ರಾಮನು ಲಿಂಗವನ್ನು ಪೂಜಿಸಿದನು. ಆಂಜನೇಯನು ಲಿಂಗ ತರುವಷ್ಟರಲ್ಲಿ ಪೂಜೆ ಮುಗಿದಿತ್ತು. ಆನಂತರ ಶ್ರೀ ರಾಮನು ಆಂಜನೇಯ ತಂದ ಲಿಂಗವನ್ನು ಸಮೀಪದ ಊರಾದ ಹೇರ್ಮಾಡುವಿನಲ್ಲಿ ಪ್ರತಿಷ್ಠಾಪಿಸಿದನು.

ಶಿವರಾತ್ರಿಯಂದು ಏಳು ದಿನಗಳ ಕಾಲ ಇಲ್ಲಿ ಉತ್ಸವವು ಬಹಳ ಅದ್ದೂರಿಯಾಗಿ ನಡೆಯುವುದು. ಶಿವರಾತ್ರಿಯಂದು ಭಕ್ತಾದಿಗಳು ಈ ಲಕ್ಷ್ಮಣತೀರ್ಥದಲ್ಲಿ ಮಿಂದು ಪುನೀತರಾಗಿ ದೇವರ ದರ್ಶನ ಭಾಗ್ಯ ಪಡೆದು ಧನ್ಯರಾಗುವರು. ಉತ್ಸವದ ಸಮಯದಲ್ಲಿ ಉಚಿತ ಅನ್ನಪ್ರಸಾದದ ವ್ಯವಸ್ಥೆಯು ಇರುವುದು. ಶಿವರಾತ್ರಿಯಂದು ದೇವಾಲಯದ ಮುಂದಿರುವ ವಿಶಾಲವಾದ ಗದ್ದೆ ಬಯಲಿನಲ್ಲಿ ಅಂಗಡಿ ಮುಂಗಟ್ಟುಗಳಿಂದ ಕೂಡಿದ ದೊಡ್ಡ ಜಾತ್ರೆಯು ನಡೆಯುವುದು. ಭಕ್ತರು ಅಧಿಕ ಸಂಖ್ಯೆಯಲ್ಲಿ ಆಗಮಿಸಿ ಪ್ರಸಾದ ಸ್ವೀಕರಿಸಿ ದೇವರ ಆಶೀರ್ವಾದ ಪಡೆದು ಹಿಂದಿರುಗುವರು. ಉತ್ಸವದ ಕೊನೆಯ ದಿನದಂದು ದೇವರು ಅವಭೃತ ಸ್ನಾನಕ್ಕಾಗಿ ಸಮೀಪದಲ್ಲಿರುವ ಈ ಲಕ್ಷ್ಮಣತೀರ್ಥ ಹೊಳೆಗೆ ಹೋಗುವರು.

ಈ ದೇವಾಲಯದಲ್ಲಿ ಪ್ರತಿವರ್ಷವೂ ಅಧಿಕ ಸಂಖ್ಯೆಯಲ್ಲಿ ಮದುವೆ ಹಾಗು ನಾಮಕರಣಗಳು ನಡೆಯುವವು. ದೇಗುಲದ ಅಭಿವೃದ್ಧಿ ಕಾರ್ಯವು ಭರದಿಂದ ಸಾಗುತ್ತಿರುವುದು. ಸರಕಾರದ ಹಾಗು ದಾನಿಗಳ ಮತ್ತು ಭಕ್ತರ ಹರಕೆ ಕಾಣಿಕೆಗಳಿಂದ ದೇವಾಲಯವು ಸುಂದರ ಹಾಗು ಆಕರ್ಷಣೀಯವಾಗಿ ರೂಪುಗೊಳ್ಳುತ್ತಿರುವುದು. ದೇವಾಲಯದ ಅಭಿವೃದ್ಧಿ ಕಾರ್ಯವು ಮುಗಿದಂತೆ ವರ್ಷದ ಪ್ರತಿದಿನವೂ

ದೇವಸ್ಥಾನಕ್ಕೆ ಭೇಟಿ ನೀಡುವ ಭಕ್ತರಿಗೆ ಅಪರಾಹ್ನ ಅನ್ನದಾನದ ವ್ಯವಸ್ಥೆಯನ್ನು ಕಲ್ಪಿಸುವ ಉದ್ದೇಶವಿದೆಯೆಂದು ಹೇಳುವರು.

ದೇವಾಲಯವನ್ನು ಸಮೀಪಿಸುತ್ತಿರುವಂತೆ ದೂರದ ಬೆಟ್ಟದೊಳಗಿರುವ ಕಾನನದೊಳಗಿಂದ ಧಾರೆಯಾಗಿಹರಿದು ಬರುವ ಇರ್ಪು ಜಲಪಾತದ ನೋಟವು ಬಿಳಿ ದಾರದಂತೆ ಕಂಗೊಳಿಸುವುದು. ದೇವಸ್ಥಾನದ ಬಲಪಾರ್ಶ್ವದಲ್ಲಿರುವ ಬೆಟ್ಟದ ಕಾಲುದಾರಿಯಲ್ಲಿರುವ ಕಾಂಕ್ರೀಟ್ ರಸ್ತೆಯಲ್ಲಿ ನಡೆದು ತೂಗು ಸೇತುವೆಯಲ್ಲಿ ಸಾಗಿ ನಂತರ ಹಲವಾರು ಮೆಟ್ಟಿಲುಗಳನ್ನೇರಿ ತುಸು ದೂರ ಸಾಗಿದಾಗ ಇರ್ಪು ಜಲಪಾತದ ವಿಹಂಗಮ ನೋಟ ಕಾಣಸಿಗುವುದು. ಮಳೆಗಾಲದಲ್ಲಿ ಮೈತುಂಬಿ ಭೋರ್ಗರೆಯುತ್ತಾ ದುಮ್ಮಿಕ್ಕುವ ಈ ಜಲಪಾತವು ಕಣ್ಣಿಗೆ ಹಬ್ಬವನ್ನುಂಟು ಮಾಡುವುದು. ಇದು ಬಹಳ ಆಕರ್ಷಣೀಯವಾದ, ಪ್ರೇಕ್ಷಣೀಯ ಸ್ಥಳವಾಗಿದೆ. ಪ್ರವಾಸಿಗರು ಅಧಿಕ ಸಂಖ್ಯೆಯಲ್ಲಿ ಭೇಟಿ ನೀಡುವ ತಾಣ ಇದಾಗಿದೆ. ಸುತ್ತಲೂ ಆವರಿಸಿರುವ ದಟ್ಟವಾದ ಅರಣ್ಯ ಪ್ರದೇಶವು ಹಲವಾರು ಜೀವಜಂತುಗಳಿಗೆ ಬದುಕಲು ನೆಲೆ ನೀಡಿರುವುದು.

ದೇವರ ಕೃಪೆಯಿಂದಾಗಿ ದೇವಾಲಯದ ಸುತ್ತಮುತ್ತಲಿನ ಪ್ರದೇಶವೆಲ್ಲವೂ ಹಚ್ಚ ಹಸುರಾದ ಹಸಿರು ಸಂಪತ್ತಿನಿಂದ ತುಂಬಿರುವುದು.

ಈ ವಿವರಣೆ ನೀಡಿದ ಅರ್ಚಕರು, ಮಂದ್ರಿರ ವಿಷ್ಣು , ಅವರು ನೀಡಿರುತ್ತಾರೆ

## ಶ್ರೀ ಪೆರುಮಾಳೇಶ್ವರ ಜಾತ್ರೆ

**ದಕ್ಷಿಣ** ಕೊಡಗಿನ ವಿರಾಜಪೇಟೆ ತಾಲೂಕಿನಲ್ಲಿರುವ ಶ್ರೀಮಂಗಲ ನಾಡಿನ ಟಿ. ಶೆಟ್ಟಿಗೇರಿ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಒಳಪಡುವ ತಾವಳಗೇರಿ ಗ್ರಾಮದಲ್ಲಿ ಈ ದೇವನೆಲೆ ಇರುವುದು. ಪೆರ್‌ಮಾಳ್‌ಪಟ್ಟಿ ಎಂದು ಪ್ರಖ್ಯಾತಗೊಂಡಿರುವ ಸ್ಥಳ ಇದು. ಗೋಣಿಕೊಪ್ಪದಿಂದ ಟಿ. ಶೆಟ್ಟಿಗೇರಿಗೆ ಬರುವ ಮುಖ್ಯ ರಸ್ತೆಯಲ್ಲಿ ಒಂಟಿಯಂಗಡಿಯಿಂದ ಹರಿಹರಕ್ಕೆ ಹೋಗುವ ಮಾರ್ಗದಲ್ಲಿ ೫೦ಮೀಟರ್ ದೂರದಲ್ಲಿ ಈ ಪವಿತ್ರ ಪುಣ್ಯ ಸ್ಥನವಿರುವುದು.

ಪುರಾತನ ಕಾಲದಲ್ಲಿ ಚಿನ್ನದ ಶಂಖದ ಒಳಗಿಂದ ಏಳು ದೇವತೆಗಳು ಈ ಭೂಮಿಯಲ್ಲಿ ನೆಲೆನಿಲ್ಲಲು ಸೂಕ್ತ ಸ್ಥಳವನ್ನು ಅರಸುತ್ತಾ ತಮಗಿಷ್ಟವಾದ ಸ್ಥಳಗಳಲ್ಲಿ ನೆಲೆನಿಂತರು. ಅವರು ನಿಂತ ಜಾಗದಲ್ಲೆಲ್ಲ ದೇವಸ್ಥಾನಗಳು ನಿರ್ಮಾಣಗೊಂಡು ಪುಣ್ಯಕ್ಷೇತ್ರವೆನಿಸಿಕೊಂಡವು. ಈ ಏಳು ದೇವತೆಗಳಲ್ಲೊಬ್ಬರಾದ ತಿರ್‌ನೆಲೆ ಪೆಮ್ಮಯ್ಯ ದೇವರು ರಾತ್ರಿ ತಂಗಿದ್ದು, ಮುಂಜಾನೆ ಎದ್ದು ಮುನ್ನಡೆದ ಸ್ಥಳವು ಈ ಪೆರ್‌ಮಾಳ್ ಪಟ್ಟಿಯೆನ್ನುವರು.

ಈ ಸ್ಥಳಕ್ಕೆ ದೇವರು ಆಗಮಿಸುವ ಸಮಯಕ್ಕೆ ಕತ್ತಲಾವರಿಸುತ್ತಿದ್ದರಿಂದ ಅಂದಿನ ಇರುಳನ್ನು ಅಲ್ಲಿಯೆ ಕಳೆಯುವ ನಿರ್ಧಾರವನ್ನು ಮಾಡಿದರು. ಕತ್ತಲು ಕಳೆದು ಬೆಳಕಾಗುತ್ತಿದ್ದಂತೆ ದೇವರು

ಸುತ್ತಮುತ್ತಲು ನೀರಿಗಾಗಿ ಹುಡುಕಾಡಿದರು. ಎಲ್ಲಿಯೂ ನೀರಿನ ಸೆಲೆ ಗೋಚರಿಸದ ಕಾರಣ ಇಲ್ಲಿ ನೆಲೆನಿಲ್ಲಲು ಇಷ್ಟವಾಗದೆ ಮುಂದಕ್ಕೆ ಪ್ರಯಾಣಿಸಲು ನಿರ್ಧರಿಸಿದರು. ಆ ಸಮಯದಲ್ಲಿ ತಾವಳಗೇರಿ ಮೂಂದ್‌ನಾಡಿನ ತಕ್ಕರಾದಂತ (ಮುಖ್ಯಸ್ಥರು) ಕೈಬುಲಿರ ಕುಟುಂಬದವರು ಮತ್ತು ಈ ಊರಿನ ಸಮಸ್ತ ಜನರು ಜೋಗಿಯ ವೇಷದಲ್ಲಿದ್ದ ದೇವರನ್ನು ತಡೆದು ನೀರಿನ ವ್ಯವಸ್ಥೆಯನ್ನು ಮಾಡಿಕೊಡುವುದಾಗಿ ಬೇಡಿಕೊಂಡರು. ಅವರ ಬೇಡಿಕೆ, ಭಕ್ತಿಯನ್ನು ನೋಡಿದ ದೇವರಿಗೆ ಸಂತೋಷವಾಯಿತು. ಆದರೂ ನಿಲ್ಲಲು ಮನಸ್ಸಾಗದೆ ಮುಂದೆ ನಡೆಯಲು ಹೆಜ್ಜೆ ಹಾಕಿದಾಗ, ದೇವರನ್ನು ತಡೆಯಲು ವಿಫಲರಾದ ಭಕ್ತರು ನಮಗೊಂದು ವರ ನೀಡಿ ಆಶೀರ್ವದಿಸಿರೆಂದು ತಲೆಬಾಗಿನಿಂತರು.

ಜನರ ಭಕ್ತಿಪೂರ್ವಕ ಬೇಡಿಕೆಯನ್ನು ನಿರಾಕರಿಸಲಾಗದ ದೇವರು ಆ ಸ್ಥಳಕ್ಕೊಂದು ಶಕ್ತಿ ನೀಡಿ ಆಶೀರ್ವದಿಸಿದರು. ಆ ಜಾಗಕ್ಕೆ ಪೆರಮಾಳ್ ಪಟ್ಟಿಯೆಂದು ಹೆಸರಿಸಿ, ಕೊಡಗಿನ ಸಮಸ್ತ ಜನರ ವ್ಯಾಜ್ಯ ಕಕ್ಷೆಗಳು ಈ ಜಾಗದಲ್ಲಿ ತೀರ್ಮಾನ ಕಾಣುವಂತೆ ವರ ನೀಡಿದರು. ಮನಸ್ತಾಪ ಇರುವವರ ಮನಸ್ಸಿನಿಂದ ಕ್ರೋಧ, ವೈಮನಸ್ಯ, ಸಿಟ್ಟು, ದ್ವೇಷ, ಮದ, ಮತ್ಸರಗಳೆಲ್ಲವೂ ಮರೆಯಾಗಿ ಆ ಜಾಗದಲ್ಲಿ ಸ್ನೇಹ, ಪ್ರೀತಿ, ಸೌಹಾರ್ದತೆ, ತುಂಬುವಂತಹ ಶಕ್ತಿ ನೀಡಿದರು ಎಂದು ಜನರ ನಂಬಿಕೆ.

ಕೊಡಗಿನ ಹಬ್ಬವಾದ ಕೈಲ್‌ಪೊಳ್ದ್, ಹುತ್ತರಿಗೆ ಈ ನಾಡಿನ ಜನರು ಇಲ್ಲಿಗೆ ಬಂದು ಒಟ್ಟಾಗಿ ಸೇರಿ ಇಲ್ಲಿಗೆ ಬರುವ ಭಂಡಾರ ಹಣವನ್ನು ಮುಂದೆ ದೇವರು ನೆಲೆನಿಲ್ಲುವ ಜಾಗದಲ್ಲಿ ನಡೆಯುವ ಉತ್ಸವದ ಸಮಯಕ್ಕೆ ತಂದು ಒಪ್ಪಿಸಬೇಕಾಗಿ ಹೇಳಿದರು. ಹೀಗೆ ಭಕ್ತರಿಗೆ ವರ ನೀಡಿದ ದೇವರು ಮುಂದಕ್ಕೆ ನಡೆದು ಬ್ರಹ್ಮಗಿರಿ ಬೆಟ್ಟ ಶ್ರೇಣಿಯ ಪೂರ್ವಭಾಗದಲ್ಲಿರುವ, ಈಗ ಕೇರಳಕ್ಕೆ ಸೇರಿರುವ ತಿರ್‌ನೆಲಿಗೆ ಹೋಗಿ ತಿರ್‌ನೆಲಿ ಪೆಮ್ಮಯ್ಯನಾಗಿ ನೆಲೆಸಿದರು. ಆ ಮೇಲಿಂದ ಈ ನಾಡಿನ ಜನರು ವ್ಯಾಜ್ಯ ತೀರ್ಮಾನಿಸಿಕೊಂಡರು. ಇಲ್ಲಿಗೆ ಬರುವ ವ್ಯಾಜ್ಯಗಳೆಲ್ಲವೂ ಇಲ್ಲಿಯೆ ನ್ಯಾಯ ಸಮ್ಮತ ರೀತಿಯಲ್ಲಿ ತೀರ್ಮಾನವಾಗುತ್ತಿದ್ದವು.

ಕಾಲ ಕಳೆದಂತೆ ಪೆರ್‌ಮಾಳ್‌ಪಟ್ಟಿ ತುಂಬಾ ಮಹತ್ವ ಪಡೆದುಕೊಂಡಿತು. ೧೯೮೦ರಲ್ಲಿ ತಾವಳಗೇರಿ ಮೂಂದ್‌ನಾಡ್ ಕೊಡವ ಸಮಾಜ ಟಿ.ಶೆಟ್ಟಿಗೇರಿ ಇದರ ಆಡಳಿತ ಮಂಡಳಿಯವರು ಈ ಪೆರ್‌ಮಾಳ್‌ಪಟ್ಟಿಯ ಹಿನ್ನೆಲೆಯನ್ನು ಮತ್ತು ಶಕ್ತಿಯನ್ನು ಆಧಾರವಾಗಿಟ್ಟುಕೊಂಡು ಶ್ರೀ ಪೆರ್‌ಮಾಳೇಶ್ವರ ಎಂಬ ಹೆಸರಿನಿಂದ ಕೊಡವ ಸಮಾಜದಲ್ಲಿ ನ್ಯಾಯ ಪೀಠ ಸ್ಥಾಪನೆಮಾಡಿದರು. ಕೊಡಗಿನ ಜನರ ವ್ಯಾಜ್ಯ ತೀರ್ಮಾನವು ಈ ಪೀಠದಲ್ಲಿ ಆಗುತ್ತಿತ್ತು. ೧೯೮೦ರಿಂದ ೧೯೮೮ರವರೆಗೆ ಅಂದಾಜು ೬೦೦ಕ್ಕೂ ಹೆಚ್ಚಿನ ವ್ಯಾಜ್ಯಗಳು ಇಲ್ಲಿ ತೀರ್ಮಾನಗೊಂಡವು.

ಹೈಕೋರ್ಟ್‌ನಲ್ಲಿ ತೀರ್ಮಾನಗೊಳ್ಳದೆ ಉಳಿದ ವ್ಯಾಜ್ಯಗಳು ಸಹ ಇಲ್ಲಿ ತೀರ್ಮಾನಕಂಡಿತಂತೆ ಎಷ್ಟೋ ಜಗಳಗಳು ರಾಜಿಗೊಂಡವು. ಆದರೆ ಏನೋ ಕಾರಣದಿಂದಾಗಿ ಇಲ್ಲಿನ ನ್ಯಾಯಪೀಠದ ಕಾರ್ಯವು ನಿಂತು ಹೋಗಿದೆ.

ಯಾರಾದರು ಈ ದೇವನೆಲೆಯಿರುವ ಜಾಗವನ್ನು ಹಾದು ಹೋಗುವುದಾದರೆ ದೇವರಿಗೊಂದು ಅಡ್ಡಬಿದ್ದು ಹೋಗುತ್ತಿದ್ದರಂತೆ. ಹಿಂದಿನ ಕಾಲದಲ್ಲಿ ಅಕ್ಕಿ ಮಾಡಲು ಭತ್ತವನ್ನು ಎತ್ತಿನಗಾಡಿಯಲ್ಲಿ ತೆಗೆದುಕೊಂಡು ಹೋಗುತ್ತಿದ್ದ ಸಮಯದಲ್ಲಿ, ಅಕ್ಕಿ ಮಾಡಿಸಿಕೊಂಡು ವಾಪಾಸು ಬರುವಾಗ ರಾತ್ರಿಯಾಗುತ್ತಿತ್ತಂತೆ. ಎತ್ತುಗಳು ಗಾಡಿ ಎಳೆಯುತ್ತಾ ಸಾಗುತ್ತಿದ್ದಂತೆ ಗಾಡಿಯ ಮಾಲಿಕನು ಗಾಡಿಯಲ್ಲೆ ನಿದ್ರಿಸುತ್ತಿದ್ದನಂತೆ. ಈ ದೆವನೆಲೆಗೆ ಬರುತ್ತಿದ್ದಂತೆ ಎತ್ತುಗಳು ನಿಂತು ದೇವರಿಗೆ ನಮಸ್ಕರಿಸಲೆಂದು ಶಬ್ದಮಾಡಿ ಮಾಲೀಕನನ್ನು ಎಬ್ಬಿಸುತ್ತಿದ್ದವು ಎಂದು ಜನರು ಹೇಳುತ್ತಾರೆ.

ಹಿಂದಿನ ಕಾಲದಲ್ಲಿ ಈ ಜಾಗದಲ್ಲಿ ಹಲವಾರು ಮದುವೆ ನಿಶ್ಚಯಗಳು ಆಗುತ್ತಿದ್ದವಂತೆ. ಕೈಲ್‌ಪೊಳ್ದ್, ಹುತ್ತರಿ ಹಬ್ಬದ ಸಮಯದಲ್ಲಿ ಇಲ್ಲಿ ಅಧಿಕ ಸಂಖ್ಯೆಯಲ್ಲಿ ಜನರು ಸೇರಿ ಹಬ್ಬ ಆಚರಿಸುತ್ತಿದ್ದರಂತೆ. ಈಗಲೂ ಸಹ ಹುತ್ತರಿ ಹಬ್ಬದಲ್ಲಿ ಇಲ್ಲಿ ಕೋಲ್‌ಮಂದ್ ಹಬ್ಬವು ಬಹಳ ಸಂಭ್ರಮದಿಂದ ನಡೆಯುವದು. ಅಧಿಕ ಸಂಖ್ಯೆಯಲ್ಲಿ ಜನರು ಸೇರಿ ಕೋಲು ಹೊಡೆಯುವರು. ಹೆಂಗಳೆಯರು ಉಮ್ಮತ್ತಾಟ್ ನೃತ್ಯ ಮಾಡುವರು. ಹಗ್ಗ ಜಗ್ಗಾಟ ಹಾಗು ಇನ್ನಿತರ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗವವು. ಈ ಸಮಯದಲ್ಲಿ ಸಾಧನೆ ಮಾಡಿದ ಸಾಧಕರನ್ನು ಸನ್ಮಾನ ಮಾಡುವರು. ಕೈಬುಲಿರ ಕುಟುಂಬದಿಂದ ಮತ್ತು ಕೊರಕೋಟು ದೇವಸ್ಥಾನದಿಂದ ಕುದುರೆ ಬರುವ ಪದ್ಧತಿಯೂ ಇರುವುದು.

**ಶ್ರೀ ಪೆರುಮಾಳ್ ಶಾರ್ತಾವು ಜಾತ್ರೆ**

ಕೊಡಗಿನ ಚೇಲಾವರ ಜಲಪಾತವು ಸಾಧಾರಣವಾಗಿ ಎಲ್ಲರಿಗೂ ತಿಳಿದಿರುವ ಸುಂದರ ಜಲಪಾತವಾಗಿದೆ. ಮಳೆಗಾಲದಲ್ಲಿ ಮೈದುಂಬಿ ಹರಿಯುವ ಈ ಜಲಪಾತದ ಸೊಬಗನ್ನು ಕಣ್ತುಂಬಿಕೊಳ್ಳಲು ಜನರು ತಂಡೋಪತಂಡವಾಗಿ ಆಗಮಿಸುವರು. ಇಂತಹ ಒಂದು ಆಕರ್ಷಣೀಯವಾದ ಪ್ರಸಿದ್ಧ ಚೇಲಾವರ ಜಲಪಾತದ ಸಮೀಪದಲ್ಲೊಂದು ಪವಿತ್ರ ಪುಣ್ಯ ದೇವನೆಲೆಯಿದೆ. ಅದೇ ಶ್ರೀ ಪೆರುಮಾಳ್ ಶಾರ್ತಾವು ದೇವಸ್ಥಾನ.

ಈ ದೇವಸ್ಥಾನವು ಚೇಲಾವರ ಊರಿನ ಪೊನ್ನಾಲಕೇರಿಯಲ್ಲಿರುವುದು. ಅಂದಾಜು ಎಂಟುನೂರು ವರ್ಷಗಳ ಇತಿಹಾಸವಿರುವ ಈ ದೇವನೆಲೆಯು ತೆರೆದ ದೇವಾಲಯವಾಗಿದೆ. ದೇವರಿಗೆ ಗುಡಿ ಕಟ್ಟುವ ಆಸೆಯಿಂದ ಭಕ್ತ ಜನರು ಶಾಸ್ತ್ರ ಕೇಳಿದಾಗ ದೇವರಿಗೆ ಗುಡಿ ನಿರ್ಮಾಣ ಮಾಡದೆ ಹಾಗೆ ಬಿಟ್ಟಿರುವರು. ಈ ದೇವರಿಗೆ ಮಂಜು, ಮಳೆ, ಗಾಳಿ, ಬಿಸಿಲು ಎಲ್ಲವೂ ಪ್ರಿಯವಾಗಿರುವುದು. ಮಂಜು, ಬಿಸಿಲು ಬೀಳುವುದೇ ಇಷ್ಟವಾಗಿರುವ ಈ ದೇವನೆಲೆಯು ಪ್ರಕೃತಿಯ ಮಡಿಲಿನಲ್ಲಿ ಎಲ್ಲರಿಗೂ ಕಾಣುವಂತೆ ತೆರೆದೇ ಇರುವುದು.

ಈ ದೇವನೆಲೆಗೊಂದು ಪುರಾಣ ಕಥೆ ಇದೆ. ಬಹಳ ವರ್ಷಗಳ ಹಿಂದೆ ಬೈತೂರಪ್ಪ ದೇವರು ತನ್ನ ಮಗ ಪೆರುಮಾಳ್ ಶಾರ್ತಾವುನೊಂದಿಗೆ ಕೇರಳದಿಂದ ಆಗಮಿಸಿದರಂತೆ. ಈ ಚೇಲಾವರ ಪ್ರದೇಶಕ್ಕೆ ಬಂದು ತಲುಪಿದಾಗ ಅದರ ಅಂದ ಚೆಂದವನ್ನು ಕಣ್ತುಂಬಿಕೊಂಡು ಅಲ್ಲಿಯೆ ತುಸು ಹೊತ್ತು ವಿರಮಿಸಿದರಂತೆ. ಚೇಲಾವರ ಹೊಳೆಕರೆಯಲ್ಲಿ ಕುಳಿತು ಆಯಾಸ ಪರಿಹಾರ ಮಾಡಿಕೊಂಡರು. ಹೊಟ್ಟೆ ಹಸಿಯುತ್ತಿದ್ದರಿಂದ ಮಗ ಪೆರುಮಾಳ್ ಶಾರ್ತಾವು ಹೊಳೆ ನೀರನ್ನು ಉಪಯೋಗಿಸಿ ಪಾಯಸ ತಯಾರಿಸಿದರು. ಊಟ ಮಾಡಲು ಬಾಳೆಯೆಲೆ ತರಲು ಸಮೀಪದಲ್ಲಿದ್ದ ಬಾಳೆತೋಟಕ್ಕೆ ಶಾರ್ತಾವು ದೇವರು ಹೋದರು. ಮಗನು ಬಾಳೆಯೆಲೆ ತರಲು ಹೋದ ಸಮಯದಲ್ಲಿ ಅಪ್ಪ ಬೈತೂರಪ್ಪ ದೇವರು, ಅಲ್ಲಿಯೇ ಸಮೀಪದಲ್ಲಿ ಸಿಕ್ಕಿದ ಸುರಾಪಾನವನ್ನು ಸೇವಿಸಿದರು. ಎಲೆ ಹಿಡಿದು ಬಂದ ಶಾರ್ತಾವು ದೇವರಿಗೆ ಅಪ್ಪ ಸುರಾಪಾನ ಮಾಡಿದ ವಿಷಯ ತಿಳಿಯಿತು.

ಶಾರ್ತಾವು ದೇವರು ಅವರಿಗಿರುವ ಎಲೆಯನ್ನು ಸ್ವಲ್ಪ ಮೇಲೆ ಇಟ್ಟು, ಅಪ್ಪನಿಗೆ ತನಗಿಂತ ಸ್ವಲ್ಪ ಕೆಳಗಿನ ಸ್ಥಾನದಲ್ಲಿ ಅಪ್ಪ ಬೈತೂರಪ್ಪನ ನೆಲೆ, ಮಗ ಪೆರುಮಾಳ್ ಶಾರ್ತಾವು ದೇವರಿಗಿಂತ ನಾಲ್ಕು ಅಡಿ ಕೆಳಗಿತ್ತು. ಕಾಲಾಂತರದಲ್ಲಿ ಶುದ್ಧ ಕಾರ್ಯ ಮಾಡುತ್ತಾ ಬಂದಂತೆ ಅಪ್ಪನ ಸ್ಥಾನವು ಮಗನ ಸ್ಥಾನದ ಸಮೀಪಕ್ಕೆ ಬಂದು ಈಗ ಒಂದು ಅಡಿಯ ಅಂತರದಲ್ಲಿರುವುದು.

ಈ ಸ್ಥಾನವು ದಕ್ಷಿಣಕ್ಕೆ ಮುಖ ಮಾಡಿರುವುದು. ಈ ದೇವನೆಲೆಯಿಂದ ಅಂದಾಜು ಹತ್ತಡಿ ದೂರದಲ್ಲಿರುವ ಅರಳಿ ಮರದ ನೆರಳು ಈ ದೇವನೆಲೆಗೆ ಬೀಳುವುದು. ಮೊದಲು ಶಿಲಾರೂಪದ ಶಿಲೆಯಿದ್ದ ಜಾಗದಲ್ಲಿ ದೊಡ್ಡ ಮಾವಿನ ಮರವಿತ್ತು. ಕಾಲಾಂತರದಲ್ಲಿ ಅದು ಬಿದ್ದು ಹೋಯಿತು. ಆ ಮೇಲಿಂದ ಶಿಲಾರೂಪದ ಶಿಲೆಯನ್ನು ವಿಸರ್ಜಿಸಿ ಹೊಸ ಶಿಲಾ ಮೂರ್ತಿಯನ್ನು ಪ್ರತಿಷ್ಠಾಪಿಸಲಾಯಿತು.

ಈ ದೇವನೆಲೆಯ ನೈರುತ್ಯ ದಿಕ್ಕಿನಲ್ಲಿರುವ ಮಾವಿನ ಮರದ ಬುಡದಲ್ಲಿ ನಾಗದೇವರ ಸ್ಥಾನವಿದೆ. ಪಶ್ಚಿಮದಲ್ಲಿ ಶ್ರೀ ಗಣಪತಿಯ ನೆಲೆಯಿದೆ. ಮೂಲ ಸ್ಥಾನಕ್ಕೆ ಗುಡಿ ನಿರ್ಮಾಣ ಮಾಡದ ಕಾರಣ ಇಲ್ಲಿ ಬೇರೆ ಯಾವ ಸ್ಥಾನಕ್ಕೂ ಗುಡಿ ನಿರ್ಮಿಸಲಾಗಿಲ್ಲ. ಈ ಸ್ಥಾನದಿಂದ ಹತ್ತಡಿ ದೂರದಲ್ಲಿ ಬೈತೂರಪ್ಪನ ಮಗಳಾದ ಪಳ್ಳಿಪೋದಿ ದೇವಿಯ ಸ್ಥಾನವಿದೆ. ಇನ್ನೂರು ಅಡಿ ದೂರದಲ್ಲಿ ಇನ್ನೋರ್ವ ಮಗಳು ಪುದಿಯೋದಿ ದೇವಿಯ ಸ್ಥಾನವಿದೆ.

ಏಪ್ರಿಲ್ ತಿಂಗಳಲ್ಲಿ ಈ ದೇವರ ಉತ್ಸವವು ಎರಡು ದಿನಗಳ ಕಾಲ ನಡೆಯುವುದು. ಮೊದಲನೆ ದಿನ ದೊಡ್ಡ ಹಬ್ಬ. ಆ ದಿನ ಪಡ್‌ಇರಮ್ಮಂಡ ಮನೆಯಿಂದ ಭಂಡಾರ ಇಳಿಯುವುದು. ಅಂದರೆ ದೇವರ ಭಂಡಾರವನ್ನು ದೇವರ ಸ್ಥಾನಕ್ಕೆ ತಂದು ಪೂಜಿಸುವರು. ಎರಡನೆ ದಿನ ಕಣಿಪೂಜೆ, ಆ ದಿನ ಭಂಡಾರ ಹತ್ತಿಸುವುದು. ಅಂದರೆ ಉತ್ಸವ ಮುಗಿದಂತೆ ಭಂಡಾರವನ್ನು ಪಡ್‌ಇರಮ್ಮಂಡ ಮನೆಯಲ್ಲಿ ಇಡುವುದು. ಎರಡೂ ದಿನವೂ ಅನ್ನ ಪ್ರಸಾದ ವಿತರಣೆ ಆಗುವುದು.

ಮೊದಲು ಈ ದೇವಸ್ಥಾನಕ್ಕೆ ಹನ್ನೆರಡು ಕುಟುಂಬದಿಂದ ಎತ್ತ್ ಪೋರಾಟ ಬರುತ್ತಿತ್ತಂತೆ. ಈಗ ಐದು ಅಥವಾ ಆರು ಕುಟುಂಬದಿಂದ ಬರುವುದು. ಆಶೀರ್ವಾದ ಪಡೆದುಕೊಳ್ಳುವರು. ಈ ದೇವಸ್ಥಾನಕ್ಕೆ ಪಡ್ಇರಮ್ಮಂಡ, ತೆಕ್ಕಡಮ್ಮಂಡ ಮತ್ತು ಬಡ್ಕಡಮ್ಮಂಡ ಕುಟುಂಬದವರು ದೇವತಕ್ಕರಾಗಿರುತ್ತಾರೆ. ಪಟ್ಟಚೆರವಂಡ ಕುಟುಂಬದವರು ನಾಡ್ ತಕ್ಕರಾಗಿರುವರು. ಬಾಚಮಂಡ ಕುಟುಂಬದವರು ಊರು ತಕ್ಕರಾಗಿರುವರು.

ಇಲ್ಲಿ ದೇವರಿಗೆ ಪ್ರತಿದಿನ ಒಂದು ಹೊತ್ತಿನ ಪೂಜೆ ಮಾತ್ರ ಮಾಡುವರು. ಕೊಡವರ ಕಕ್ಕಡ ತಿಂಗಳಲ್ಲಿ ಮಾತ್ರ ಮೂರು ಹೊತ್ತು ಪೂಜೆ ಮಾಡುವರು. ಕೊಡವ ತಿಂಗಳ ಪ್ರಕಾರ ಎಲ್ಲಾ ತಿಂಗಳ ಮೊದಲ ಶನಿವಾರ ಅಂದೆ ಮುಪ್ಪೊಟ್ ಅಥವಾ ಕೊನೆಯ ಶನಿವಾರ ಅಂದರೆ ಕುಟುಂಬದವರು ನಡೆಸುವರು. ಅನ್ನಪ್ರಸಾದದ ವ್ಯವಸ್ಥೆಯನ್ನು ಮಾಡುವರು.

ಈ ದೇವಸ್ಥಾನಕ್ಕೆ ಅಂದಾಜು ಏಳರಿಂದ ಎಂಟು ಏಕರೆಯಷ್ಟು ದೇವರ ಬನವಿರುವುದು. ಮೊದಲು ಇನ್ನೂ ಜಾಸ್ತಿ ಇತ್ತೆನ್ನುವರು. ಈ ಬನದಲ್ಲಿ ಔಷಧೀಯ ಸಸ್ಯಗಳು ಹೇರಳವಾಗಿ ದೊರಕುವುದೆನ್ನುವರು.

ಈ ಸ್ಥಾನದ ಪಶ್ಚಿಮದಿಂದ ಪೂರ್ವಕ್ಕೆ ಚೇಲಾವರ ಹೊಳೆ ಹರಿಯುವುದು. ಮೊದಲು ಈ ಜಲಧಾರೆಯನ್ನು ಆಮೆಪಾರ ಎಂದು ಕರೆಯುತ್ತಿದ್ದರಂತೆ. ಆ ಮೇಲಿಂದ ಅದು ಯಾಂದೆ ಪಾರೆಯಾಗಿ ಈಗ ಚೇಲಾವರ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿದೆ. ದೇವರ ಪೂಜೆಗೆ ಬಾವಿ ನೀರಿದ್ದರೂ ಸಹ ಈ ಹೊಳೆಯ ನೀರನ್ನೇ ಉಪಯೋಗಿಸುವರು.

ಈ ಪುಣ್ಯಸ್ಥಾನದಲ್ಲಿ ಅಪ್ಪ ಬೈತೂರಪ್ಪ, ಮಗ ಪೆರುಮಾಳ್ ಶಾರ್ತಾವು, ಮಗಳಾದ ಪುದಿಯೋದಿ, ಮತ್ತು ಪಲ್ಲಿಪೋದಿ ಈ ಎಲ್ಲಾ ದೇವರನ್ನು ಒಂದೇ ಜಾಗದಲ್ಲಿ ದರ್ಶನ ಮಾಡಿ ಆಶೀರ್ವಾದ ಪಡೆದುಕೊಳ್ಳ ಬಹುದು. ವಿವರಣೆ ನೀಡಿದವರು ಪಡ್ಇರಮ್ಮಂಡ ನಂದಕುಮಾರ್

**ಶ್ರೀ ಮಲೆ ಮಹದೇಶ್ವರ ಜಾತ್ರೆ**

ಕೊಡಗಿನ ವಿರಾಜಪೇಟೆ ತಾಲೂಕಿನ ಮಗ್ಗುಲ ಗ್ರಾಮದ ಮಲೆತಿರಿಕೆ ಬೆಟ್ಟದಲ್ಲಿ ಈ ಮಲೆಮಹದೇಶ್ವರ ದೇವಾಲಯವಿರುವುದು. ಅಂದಾಜು ಎಂಟುನೂರು ವರ್ಷಗಳ ಇತಿಹಾಸವಿರುವ ಈ ದೇವಾಲಯವು ಬಹಳ ಆಕರ್ಷಣೀಯವಾಗಿರುವುದು.

ಈ ದೇವಸ್ಥಾನದ ಗರ್ಭಗುಡಿಯಲ್ಲಿ ಈಶ್ವರನ ಲಿಂಗವಿರುವುದು. ಗುಡಿಯ ಬಲಬದಿಯಲ್ಲಿ ಗಣಪತಿಯ ಗುಡಿಯಿರುವುದು. ಹೊರಾಂಗಣದಲ್ಲಿ ದೇವಸ್ಥಾನದ ಹಿಂಬದಿಯಲ್ಲಿ ಅಯ್ಯಪ್ಪ ದೇವರ ಸ್ಥಾನ ಮತ್ತು ನಾಗದೇವರ ಸ್ಥಾನವಿರುವುದು. ಹೊರಾಂಗಣದಲ್ಲಿ ಬ್ರಹ್ಮರಾಕ್ಷಸನ ನೆಲೆಯೂ ಇರುವುದು. ದೇವಸ್ಥಾನದಿಂದ ಸ್ವಲ್ಪ ದೂರದಲ್ಲಿ ಬಸವನ ಕಟ್ಟೆಯಿರುವುದು. ಉತ್ಸವದಂದು ದೇವರ ಅವಭೃತ

ಸ್ನಾನಕ್ಕೆ ಹೋಗುವಾಗ ಈ ಕಟ್ಟೆಯಲ್ಲಿ ದೇವರನ್ನಿಟ್ಟು ಪೂಜಿಸುವರು. ದೇವಸ್ಥಾನದ ಮುಂದೆ ಅನತಿ ದೂರದಲ್ಲಿ ಕುಳಿಯುವ ಸ್ಥಾನವಿರುವುದು. ದೇವರ ಪೂಜೆಗೆ ದೇವಸ್ಥಾನದಲ್ಲೆ ಇರುವ ಬಾವಿಯ ನೀರನ್ನು ಉಪಯೋಗಿಸುವರು.

ಹಲವಾರು ವರ್ಷಗಳ ಹಿಂದೆ ಕುಂದಿರ ಕೋಡಿ ಮೋಲಿ ಎಂಬುವವರು ಓರ್ವ ಬಾಲಕನನ್ನು ಕರೆದುಕೊಂಡು ಪಾಬಳ್ಳಿ (ಪಡ್‌ಬಳ್ಳಿ) ಹುಡುಕಿಕೊಂಡು ಸಮೀಪದಲ್ಲಿದ್ದ ಕಾಡಿನಲ್ಲಿ ಸುತ್ತುತ್ತಿದ್ದರು. ಬೇಲಿ ಕಟ್ಟಲು ಹಗ್ಗದಂತೆ ಈ ಬಳ್ಳಿಯನ್ನು ಉಪಯೋಗಿಸುವರು. ಹೀಗೆ ಬಳ್ಳಿಯನ್ನರಸುತ್ತಾ ಹೋಗುತ್ತಿರುವಾಗ ಬಾಲಕನಿಗೆ ದೂರದಲ್ಲಿ ಬಳ್ಳಿ ಕಾಣಿಸಿಕೊಂಡಿತು. ಬಾಲಕ ಅದನ್ನು ಕೋಡಿಮೋಲಿಗೆ ತೋರಿಸಿ ಕೊಡುವನು. ಕೋಡಿಮೋಲಿಯು ಅದನ್ನು ಕುಯಿದು ತರಲು ಬಾಲಕನನ್ನು ಕಳುಹಿಸುವರು. ಬಾಲಕನು ಬಳ್ಳಿಯನ್ನು ಕುಯ್ಯಲೆಂದು ಕೈಹಾಕಿದಾಗ "ನನ್ನನ್ನು ಮುಟ್ಟಬೇಡವೆಂದು" ಬಳ್ಳಿ ಹೇಳಿದಂತಾಯಿತು. ಬಾಲಕನು ಕೋಡಿಮೋಲಿಯ ಮುಖವನ್ನು ನೋಡಿದನು. ಕೋಡಿಮೋಲಿಗೂ ಬಳ್ಳಿ ಮಾತಾನಾಡಿದಂತೆನಿಸಿತು. 'ನನ್ನನ್ನು ಮುಟ್ಟಿದರೆ ನೀರಿನ ಬದಲು ರಕ್ತ ಬರುವುದೆಂದು' ಹೇಳಿದ ಹಾಗಾಯಿತು.

ಈ ವಿಸ್ಮಯ ನಡೆದ ಮರುಕ್ಷಣದಲ್ಲಿ ಕೋಡಿಮೋಲಿಯ ಮೈಮೇಲೆ ದೇವರ ಆವಾಹನೆಯಾಯಿತು. ಕೋಡಿಮೋಲಿಯ ಮೈಯನ್ನಾವರಿಸಿದ ದೇವರು ಜೋರಾಗಿ ಕೂಗಿ ಶಬ್ದ ಮಾಡಿತು. ಈ ಶಬ್ದವನ್ನು ಕೇಳಿಸಿಕೊಂಡ ಕುಪ್ಪಚ್ಚಿರ ವಯಸ್ಸಾದ ವ್ಯಕ್ತಿಯೋರ್ವರು ಅಲ್ಲಿಗೆ ಆಗಮಿಸಿದರು. ಕೋಡಿಮೋಲಿಯ ದೇಹಕ್ಕೆ ಸೇರಿಕೊಂಡಿರುವ ದೇವರನ್ನು ಕಂಡು ಅವರಿಗೆ ಆಶ್ಚರ್ಯವಾಯಿತು. ಕುಪ್ಪಚ್ಚಿರ ವ್ಯಕ್ತಿಯನ್ನು ನೋಡಿದ ದೇವರು ನೀನು ನನ್ನೊಂದಿಗಿರಬೇಕೆಂದು ಆಜ್ಞೆ ಮಾಡಿದರು. ಕುಪ್ಪಚ್ಚಿರ ವ್ಯಕ್ತಿಯು ಭಯ ಭಕ್ತಿಯಿಂದ ದೇವರ ಆಜ್ಞೆಯನ್ನು ಒಪ್ಪಿಸಿಕೊಂಡು ಕೈ ಜೋಡಿಸಿದರು. ಅಲ್ಲಿಂದ ಚೆಂಬೆಬೆಳ್ಳೂರಿನ ಅಜ್ಜಿನಿಕಂಡ ಕುಟುಂಬದ ಓರ್ವ ಸದಸ್ಯರು ಮತ್ತು ಕೊಳುವಂಡ ಕುಟುಂಬದ ಓರ್ವ ಸದಸ್ಯರು ಆ ದಿಕ್ಕಿಗೆ ಬರುತ್ತಾರೆ. ಅವರಿಗೆ ದೇವರು ಆ ಸ್ಥಳದಲ್ಲೊಂದು ದೇವಾಲಯವನ್ನು ನಿರ್ಮಿಸಲು ತಿಳಿಸುವರು.

ಕುಂದಿರ ಮತ್ತು ಕುಪ್ಪಚ್ಚಿರ ಕುಟುಂಬದವರು ಭಂಡಾರ ತಕ್ಕರಾದರು. ಕೊಳುವಂಡ, ಅಜ್ಜಿಕಂಡ ಕುಟುಂಬದವರು ದೇವತಕ್ಕರಾದರು. ಚಾರಿಮಂಡ ಕುಟುಂಬದವರು ಉಗ್ರಾಣ ಉಸ್ತುವಾರಿ ಕಾರ್ಯ ವಹಿಸಿಕೊಂಡರು. ಅಲ್ಲಿಂದ ಇಲ್ಲಿವರೆಗೆ ಕೊಳುವಂಡ ಮತ್ತು ಅಜ್ಜಿನಿಕಂಡ ಕುಟುಂಬದ ತಕ್ಕರಲ್ಲಿ ಯಾರಾದರೊಬ್ಬರು ದೇವಸ್ಥಾನದ ಆಡಳಿತ ಮಂಡಳಿಯ ಅಧ್ಯಕ್ಷರಾಗಿ ಆಯ್ಕೆಗೊಂಡು ಜವಾಬ್ದಾರಿವಹಿಸಿಕೊಳ್ಳುವರು. ಪ್ರತಿವರ್ಷವೂ ಆಡಳಿತ ಮಂಡಳಿಯ ಮಹಾಸಭೆಯು ನಡೆಯುವುದು. ದೇವಸ್ಥಾನಕ್ಕೆ ಸಂಬಂಧಿಸಿದ ಹಲವಾರು ವಿಷಯಗಳ ಬಗ್ಗೆ ಇಲ್ಲಿ ತೀರ್ಮಾನ ಕೈಗೊಳ್ಳುವುದು.

ಈ ದೇವಸ್ಥಾನಕ್ಕೆ ಮಗ್ಗುಲ, ಐಮಂಗಲ, ಚೆಂಬೆಬೆಳ್ಳೂರು ಮತ್ತು ಕುಕ್ಲೂರು ಗ್ರಾಮ ಸೇರುವುದು. ಈ ಗ್ರಾಮಸ್ಥರೆಲ್ಲರೂ ಸೇರಿ ವರ್ಷಂಪ್ರತಿ ನಡೆಯುವ ದೇವರ ಹಬ್ಬಕ್ಕೆ ಬೇಕಾಗುವ ಖರ್ಚು ವೆಚ್ಚವನ್ನು

ಚಂದಾ ರೂಪದಲ್ಲಿ ಅಂದರೆ ಅಕ್ಕಿ ಮತ್ತು ಹಣದ ರೂಪದಲ್ಲಿ ಒಪ್ಪಿಸಿ ಹಬ್ಬವನ್ನು ಆಚರಿಸುವರು. ಈ ದೇವಸ್ಥಾನದಲ್ಲಿ ಮಹಾಶಿವರಾತ್ರಿಯನ್ನು ವಿಶೇಷವಾಗಿ ಆಚರಿಸುವರು. ಆ ದಿನ ಅನ್ನ ಪ್ರಸಾದವು ಇರುವುದು.

**ಪುಣ್ಯಕ್ಷೇತ್ರ ಪರಿಚಯ**

ಪ್ರತಿವರ್ಷವೂ ಮಾರ್ಚ್ ಹದಿನೈದಕ್ಕೆ ಕೊಡಿಮರ ನಿಲ್ಲಿಸಿ ದೇವರ ಉತ್ಸವಕ್ಕೆ ಚಾಲನೆ ಕೊಡುವರು. ಅವತ್ತು ಕುಂದಿರ ಮನೆಯಿಂದ ಭಂಡಾರ ಬರುವುದು. ದೇವರ ಹಬ್ಬವು ಬಹಳ ವಿಜೃಂಭಣೆಯಿಂದ ನಡೆಯುವುದು. ಹದಿನಾರರಂದು ಮಹಾಪೂಜಾ ಸೇವೆ, ರಾತ್ರಿ ಕಾಪು ಮತ್ತು ವಿಶೇಷ ಪೂಜಾ ಸೇವೆ ಇರುವುದು. ಹದಿನೇಳರಂದು ಬೆಳಗ್ಗೆ ಇರಬಳಕು, ಅಪರಾಹ್ನ ನೆರ್ಪು, ಎತ್ತ್ಪೋರಾಟ, ತೆಂಗಿನಕಾಯಿಗೆ ಗುಂಡು ಹೊಡೆಯುವುದು, ಮೂರು ಗಂಟೆಗೆ ಪೇಟೆಯಲ್ಲಿ ಉತ್ಸವ ಮೂರ್ತಿಯ ಮೆರವಣಿಗೆ. ಹತ್ತೊಂಭತ್ತಕ್ಕೆ ದೇವರ ಅವಭೃತ ಸ್ನಾನ. ಆ ದಿನ ದೇವರ ನೃತ್ಯ. ಇಪ್ಪತ್ತಕ್ಕೆ ಶುದ್ಧಕಲಶ, ಮಹಾಪೂಜೆ.

ಉತ್ಸವದ ಸಮಯದಲ್ಲಿ ಯಾವಾಗಲು ಅನ್ನಪ್ರಸಾದವಿರುವುದು. ಸಕಲ ಸೌಲಭ್ಯಗಳನ್ನು ಹೊಂದಿರುವ ವ್ಯವಸ್ಥಿತ ಬೋಜನಾ ಮಂದಿರದ ನಿರ್ಮಾಣವಾಗಿರುವುದು.. ಈ ವಿವರಣೆಯನ್ನು ಕುಂದಿರ ಮಣಿ ಸುಬ್ಬಯ್ಯನವರಿಂದ ಪಡೆದು ಸಂಗ್ರಹಿಸಿ ಚೋಕಂಡ ರಮೇಶ್ ಅವರು ನೀಡಿರುವರು.

**ಕುದ್ರೆ ಹಬ್ಬದ ಜಾತ್ರೆ**

ಕೊಡಗಿನ ನೆಲದಲ್ಲಿ ಹಲವಷ್ಟು ಹೊಸತನದ ಉತ್ಸವಗಳು ತಮ್ಮ ನೆಲೆ ಕಂಡುಕೊಂಡಿವೆ. ಗಿರಿ ಕಂದರಗಳ ಚೆಂದದ ಜಿಲ್ಲೆಯಲ್ಲಿ ಇಂತಹ ಹಲವಾರು ಹಬ್ಬಗಳಲ್ಲಿ ಪ್ರಚಾರ ಆ ಗ್ರಾಮದ ಗಡಿಯಿಂದ ಹೊರಬರಲಾರದು. ಹೀಗಾಗಿ ಕೊಡಗಿನ ಹಲವಾರು ಉತ್ಸವಗಳು ಊರಿನ ಹೊರಗಿನವರ ಪಾಲಿಗೆ ಅಪರಿಚಿತ ಇನ್ನು ನಿಗೂಢ. ಪ್ರತಿವರುಷ ಪೊನ್ನಂಪೇಟೆ ಸಮೀಪದ ಕುಂದ ಗ್ರಾಮದಲ್ಲಿ ಕೊಡಗಿನ ಜನಪದ ಉತ್ಸವವೊಂದು ನಡೆಯುತ್ತಾ ಬಂದಿದೆ.

ದಕ್ಷಿಣ ಕೊಡಗಿನ ಗೋಣಿಕೊಪ್ಪಲಿನಿಂದ ಸುಮಾರು ಎಂಟು ಕಿ.ಮೀ. ದೂರದಲ್ಲಿರುವ ಕುಂದ ಎಂಬ ಪುಟ್ಟ ಗ್ರಾಮ ಸಮುದ್ರ ಮಟ್ಟದಿಂದ ಸುಮಾರು ೩,೨೦೦ ಅಡಿ ಎತ್ತರದಲ್ಲಿದೆ. ಇಲ್ಲಿನ ಬೆಟ್ಟದಲ್ಲಿ ವರ್ಷಂಪ್ರತಿ ಅಕ್ಟೋಬರ್ ೧೮ರಂದು ನಡೆಯುವ ಬೋಡುಹಬ್ಬ ಅಥವಾ ಕುದ್ರೆ ಹಬ್ಬ ಕೊಡಗಿನ ಜಾನಪದ ಉತ್ಸವಗಳ ಸಾಲಿನಲ್ಲಿ ಪ್ರಮುಖವೆನಿಸಿದೆಯಲ್ಲದೆ, ಕೊಡಗಿನಲ್ಲಿ ಉತ್ಸವಗಳು ಪ್ರಾರಂಭಗೊಳ್ಳಲು ನಾಂದಿ ಹಾಡುವ ಹಬ್ಬವೆನಿಸಿದೆ.

ಕುಂದ ಬೆಟ್ಟದ ದೈವ ಅಯ್ಯಪ್ಪ, ಸುಮಾರು ೨೦೦ ವರ್ಷಗಳಿಗೂ ಹಿಂದೆಯೇ ಕುಂದದ ಬೆಟ್ಟದ ಮೇಲೆ ಕೊಡಗಿನ ರಾಜರು ಅಯ್ಯಪ್ಪ ದೇವನಿಗೊಂದು ನೆಲೆಯಾಗಿ ದೇವಾಲಯವೊಂದನ್ನು ನಿರ್ಮಿಸಿದ್ದರಂತೆ. ಈ ದೇಗುಲವನ್ನು ಒಂದೇ ದಿನದಲ್ಲಿ ನಿರ್ಮಿಸಲಾಯಿತೆಂದು ತಿಳಿಸುವ ಪುರಾಣ

ಕತೆಯೊಂದರ ಪ್ರಕಾರ ರಾತ್ರಿ ಕಳೆದು ಬೆಳಕು ಹರಿಯುವುದರಲ್ಲಿ ದೇವಾಲಯ ಕಟ್ಟಿ ಮುಗಿಯಬೇಕು ಎಂದು ಹೊರಟರೂ ದೇವಾಲಯದ ಬಾಗಿಲನ್ನು ಸ್ಥಾಪಿಸುವ ವೇಳೆಗೆ ಸೂರ್ಯೋದಯ ಆಯಿತಂತೆ ಹೀಗಾಗಿ ಇಂದಿಗೂ ಕುಂದ ಬೆಟ್ಟದ ಅಯ್ಯಪ್ಪ ದೇಗುಲಕ್ಕೆ ಬಾಗಿಲಿಲ್ಲ.

ಕುಂದ ಬೆಟ್ಟದಲ್ಲಿ ನಡೆಯುವ ಬೋಡು ಹಬ್ಬದಲ್ಲಿ ಜಾತಿಮತ ಭೇದವನ್ನು ಮರೆತು ಜನ ಸಮೂಹ ವಿಧವಿಧದ ವೇಷ ಕಟ್ಟಿಕೊಂಡು ದೇವರಿಗೆ ಹರಕೆ ಒಪ್ಪಿಸುವ ಸಂಪ್ರದಾಯವಿದೆ. ಅಂತೆಯೇ ವಿಭಿನ್ನ ವೇಷ ತೊಟ್ಟು ದೇವರಲ್ಲಿ ಬೋಡುವುದೂ ಇದೆ. ಆದ್ದರಿಂದಲೇ ಇದು ಬೋಡು ಹಬ್ಬ ಆಗಿದೆ. ಅಂತೆಯೇ ಹಬ್ಬದ ದಿನ ಬಿದಿರಿನಿಂದ ಮಾಡಲಾದ ಕುದುರೆಯನ್ನು ಮೈಗೆ ಕಟ್ಟಿಕೊಂಡು ಕ್ಷತ್ರಿಯ ಜನಾಂಗದವರು ನರ್ತಿಸುತ್ತಿರುತ್ತಾರೆ. ಬಿದಿರಿನಿಂದ ಮಾಡಿದ ಕುದುರೆಯಾಕೃತಿಗೆ ಕೆಂಪು ವರ್ಣದ ವಸ್ತ್ರ ಹೊದಿಸಿ ಅದಕ್ಕೊಂದು ಬಟ್ಟೆಯ ಕಿವಿ ಮಾಡಿ ಕುಣಿಯುವುದು ರೂಢಿಯಲ್ಲಿದೆ. ಹೀಗಾಗಿ ಈ ಉತ್ಸವಕ್ಕೆ ಕುದ್ರೆ ಹಬ್ಬ ಎಂಬ ಹೆಸರು ಬಂದಿರಬಹುದು. ಕಳೆದ ಎರಡು ಶತಮಾನಗಳಿಂದಲೂ ಪ್ರಚಲಿತದಲ್ಲಿದೆ ಎಂದು ನಂಬಲಾಗಿರುವ ಈ ಜನಪದ ಉತ್ಸವ ಒಂದು ಪ್ರಮುಖ ಕಾರಣದಿಂದ ಪ್ರಸಿದ್ದ.

ಪ್ರತೀ ವರ್ಷ ತಲಕಾವೇರಿಯಲ್ಲಿ ಕಾವೇರಿ ತೀರ್ಥೋದ್ಭವ ಜರುಗಿದಾಗ ಅಲ್ಲಿಂದ ಪವಿತ್ರ ಕಾವೇರಿ ತೀರ್ಥವನ್ನು ಕುಂದ ಬೆಟ್ಟಕ್ಕೆ ತಂದು ಭಕ್ತರಿಗೆ ವಿತರಿಸಲಾಗುವುದು. ಯಾರು ಮೊದಲಿಗೆ ತೀರ್ಥ ತರುವರೋ ಅವರಿಗೆ ಊರಿನ ಪ್ರಮುಖರು ಬಹುಮಾನವನ್ನು ನೀಡುವ ಸಂಪ್ರದಾಯವಿದೆ. ಹಿಂದಿನ ಕಾಲದಲ್ಲಿ ತಲಕಾವೇರಿಗೆ ಭೇಟಿ ನೀಡಿದ್ದ ಪಾಂಡವರು ಕಾವೇರಿ ತೀರ್ಥವನ್ನು ಕುಂದದ ಶಿವನಿಗೇ ಮೊದಲು ಅರ್ಪಿಸಿದರೆಂಬ ಪ್ರತೀತಿಯೂ ಇದೆ.

ಕುಂದ ಬೆಟ್ಟದಲ್ಲಿ ಬೇಡು ಹಬ್ಬ ಆರಂಭಗೊಂಡ ಮೇಲೆಯೇ ಕೊಡಗಿನ ಇತರೆಲ್ಲ ಜನಪದ ಉತ್ಸವಗಳು ಪ್ರಾರಂಭವಾಗುತ್ತದೆ. ಅಂತೆಯೇ ಜೂನ್ ಮಾಸದಲ್ಲಿ ಕುಟ್ಟಂದಿ ಸಮೀಪದ ಪಾರೆ ಗ್ರಾಮದಲ್ಲಿ ಜರುಗುವ ಹಬ್ಬದಲ್ಲಿ ಬಿದಿರಿನ ಕುದುರೆಗಳನ್ನು ಸಾಂಪ್ರದಾಯಿಕವಾಗಿ ಕಡಿದು ಹಾಕುವುದರೊಂದಿಗೆ ಕೊಡಗಿನ ಜನಪದೀಯ ಹಬ್ಬಗಳು ಮುಕ್ತಾಯಗೊಳ್ಳುತ್ತವೆ. ಇದರಿಂದಲೇ ಕುಂದಲ್ ಬೊಟ್ಟ್‌ಲ್ ನೀಂದ ಕುದ್ರೆ ಪಾರೆ ಗ್ರಾಮತ್‌ಲ್ ಅಳಂದ್ ಕುದ್ರೆ (ಕುಂದ ಬೆಟ್ಟದಲ್ಲಿ ನಿಂತ ಕುದ್ರೆ ಪಾರೆ ಗ್ರಾಮದಲ್ಲಿ ಅಳಿದ ಕುದ್ರೆ) ಎಂಬ ಕೊಡವ ನುಡಿಗಟ್ಟು ಚಾಲ್ತಿಗೆ ಬಂದಿದೆ. ಇದರ ಬಗ್ಗೆ ಸಿ.ಎಸ್.ರಮೇಶ್‌ರವರು ವಿವರಣೆ ನೀಡಿರುತ್ತಾರೆ.

**ಕಾಕೋಟು ಪರಂಬು ಜಾತ್ರೆ**

ಸಾಮಾಜಿಕ ಜೀವನದ ಒಂದು ಅಂಶವಾದ ಜಾತ್ರೆಗಳು ಕೊಡಗಿನ ಬಹುತೇಕ ಭಾಗಗಳಲ್ಲಿ ಕಂಡುಬರುತ್ತದೆ. ಹಳ್ಳಿಗಳಲ್ಲಿ ನಡೆಯುವ ಗ್ರಾಮದೇವತೆಗಳ ಜಾತ್ರೆಗಳು ಅಧಿಕ ಸಂಖ್ಯೆಯಲ್ಲಿದ್ದು ಆಯಾಯ ಊರುಗಳಿಗೆ ಸೀಮಿತವಾಗಿರುತ್ತವೆ. ಆದರೆ ವಿವಿಧ ದೇವ ದೇವತೆಗಳ ಹೆಸರಿನಲ್ಲಿ

ಕೆಲವೊಂದು ಭಾಗಗಳಲ್ಲಿ ಜರುಗುವ ಜಾತ್ರೆಗಳಲ್ಲಿ ಜಿಲ್ಲಾ ಮಟ್ಟದ ಜಾತ್ರೆಯಾಗಿ ಪ್ರಸಿದ್ಧಿ ಹೊಂದಿದ ಜಾತ್ರೆಗಳೂ ಇವೆ. ಅವುಗಳಲ್ಲೊಂದು ಕಾಕೋಟುಪರಂಬು ಜಾತ್ರೆ. ಕೊಡಗಿನಲ್ಲಿ ಕಂಡುಬರುವ ಬಹುತೇಕ ಎಲ್ಲಾ ಜಾತ್ರೆಗಳು ಜರುಗುವುದು ಮಾರ್ಚ್ ಏಪ್ರಿಲ್ ತಿಂಗಳುಗಳಲ್ಲಿ. ಆದರೆ ಕಾಕೋಟು ಪರಂಬು ಎಂಬಲ್ಲಿನ ಜಾತ್ರೆ ಮೂರು ತಿಂಗಳ ಮೊದಲು ಜರುಗುವುದು. ಅದರಂತೆ ಪ್ರತಿ ವರ್ಷದ ಡಿಸೆಂಬರ್‌ನಲ್ಲಿ ಕಾಕೋಟು ಪರಂಬುವಿನಲ್ಲಿ ವಿಶಿಷ್ಟ ಜಾತ್ರೆ ಜರುಗಲಿದೆ. ಕಾಕೋಟುಪರಂಬು ಮಡಿಕೇರಿ ವೀರಾಜಪೇಟೆ ನಡುವೆ ಸಿಗುವ ಊರು. ಮಡಿಕೇರಿಯಿಂದ ಇಪ್ಪತ್ತೆರಡು ಕಿ.ಮೀ ಗಳ ಅಂತರ ಮಡಿಕೇರಿಯಿಂದ ಮೂರ್ನಾಡು ಮುಖಾಂತರ ವಿರಾಜಪೇಟೆಯತ್ತ ಸಾಗುವಾಗ ಒಂದೆಡೆ ವಿಶಾಲ ಮೈದಾನವೊಂದು ಕಾಣಸಿಗುತ್ತದೆ. ಅಲ್ಲೇ ಸನಿಹದಲ್ಲಿದೆ ಕಾಕೋಟು ಪರಂಬು ಕಾಲಭೈರವೇಶ್ವರ ದೇವಸ್ಥಾನ. ವೀಕ್ಷಣೆಗೆ ತೀರಾ ವೈಶಿಷ್ಟ್ಯ ಪೂರ್ಣವಾದುದು ಎಂದೆನಿಸದಿದ್ದರೂ ಸಾಕಷ್ಟುಪುರಾಣ ಐತಿಹ್ಯಗಳನ್ನು ಹೊಂದಿದೆ. ಇಲ್ಲಿ ನಡೆಯುವ ಜಾತ್ರೆ ಸಹಸ್ರಾರು ಮಂದಿಯನ್ನು ಆಕರ್ಷಿಸಿರುವುದಲ್ಲದೆ ರಾಜ್ಯದ ವಿವಿಧ ಭಾಗಗಳ ಆಸಕ್ತರು ಇಲ್ಲಿನ ಜಾತ್ರೆಯ ವೀಕ್ಷಣೆಗೆ ಬರುತ್ತಾರೆ. ಪ್ರಸಕ್ತ ದೇವಾಲಯಕ್ಕೆ ಸಾಕಷ್ಟು ದೀರ್ಘ ಇತಿಹಾಸವಿದೆ. ಒಂದು ಮಾಹಿತಿಯನುಸಾರ ಸುಮಾರು ಮುನ್ನೂರು ವರ್ಷಗಳಿಂದ ಇಲ್ಲಿ ಪೂಜೆ ನಡೆಯುತ್ತಿರಬಹುದು ಎನ್ನುತ್ತಾರೆ ಇಲ್ಲಿನ ಅರ್ಚಕರು. ಇಲ್ಲಿ ಪ್ರಮುಖವಾಗಿ ಕಂಡುಬರುವುದು ಕಾಲಭೈರವೇಶ್ವರನ ಗುಡಿ. ಸನಿಹದಲ್ಲೇ ಮುಂದಕ್ಕ ಎಂಬ ದೇವಿಯ ನೆಲೆಯಿದೆ. ಅನತಿ ದೂರ ಸಾಗಿದರೆ ಬಹಳ ಹಳೆಯದೆನಿಸುವ ವಿಶಾಲವಾದ ಕೆರೆಯನ್ನು ಕಾಣಬಹುದು. ದೇವಾಲಯದ ಒಂದು ಪಾರ್ಶ್ವದಲ್ಲಿ ಕಂಡುಬರುವ ವಿಶಾಲವಾದ ತಾಣ ಶ್ರೀ ಕಾಲಭೈರವೇಶ್ವರ ಉದ್ಯಾನವನವೆಂದೇ ಗುರುತಿಸಲಾಗಿದೆ. ಕಾಕೋಟು ಪರಂಬುವಿನ ಶ್ರೀ ಕಾಳಭೈರವೇಶ್ವರ ಗುಡಿಯಲ್ಲಿ ಪೂಜೆ ನಿತ್ಯವಿತ್ತು ಎನ್ನಲಾಗಿದೆ. ಆದರೆ ಈಗ ವಾರಕ್ಕೆ ಎರಡು ದಿನ ಮಾತ್ರ ಪೂಜೆ ಇದಕ್ಕೆ ಊರವರು ಸಕಾರಣವನ್ನು ಕೊಡುತ್ತಾರೆ. ಶ್ರೀ ಕಾಲಭೈರವ ಉಗ್ರ ದೇವರಾದುದರಿಂದ ವಾರದಲ್ಲಿ ಎರಡು ದಿನ ಮಾತ್ರ ಪೂಜೆ. (ಆದಿತ್ಯವಾರ ಮತ್ತು ಮಂಗಳವಾರ) ಜಾತ್ರೆಯ ಸಂದರ್ಭದಲ್ಲಿ ಅಂದರೆ ವೃಶ್ಚಿಕದಿಂದ ಧನು ಸಂಕ್ರಮಣದವರೆಗೆ ಇಲ್ಲಿ ನಿತ್ಯಪೂಜೆ ನಡೆಯುತ್ತದೆ. ಪ್ರತಿ ವರ್ಷ ವೃಶ್ಚಿಕ ಸಂಕ್ರಮಣಕ್ಕಿಂತ ೧೪ದಿನ ಮುಂಚಿತವಾಗಿ ಹೀಲಿ ತೆಗೆಯುವ ಕಾರ್ಯಕ್ರಮ ನಡೆಯುತ್ತದೆ. ಜಾತ್ರೆ ಮೂರು ದಿನಗಳ ಕಾಲ ಜರುಗುತ್ತದೆ. ಮೊದಲ ದಿನ ರಾತ್ರಿ ಊರ ಮಂದಿ ವಾದ್ಯ ವಾಲಗ ಸಹಿತ ಪದ್ಧತಿ ಪ್ರಕಾರ ದೇವರ ಭಂಡಾರ ತಂದಿಟ್ಟು ದೇವರ ಶೃಂಗಾರ ಮಾಡುತ್ತಾರೆ. ಆ ನಂತರ ಮಂದಕ್ಕನ ಕುರಿತು ಸ್ತುತಿಸುವ ಪರಿಪಾಠವಿದೆ. ಬೆಳಕು ಹರಿಯುವ ಮೊದಲೇ ಎರಡನೆಯ ದಿನದ ಚಟುವಟಿಕೆಗಳು ಆರಂಭಗೊಳ್ಳುತ್ತವೆ. ಹೆಮ್ಮಾಡು, ಪಾಂಡಿಮಾಡು, ಮೂಗೂರು, ತೋಣೂರು ಹೀಗೆ ನಾಲ್ಕು ಕೇರಿಯ ಮಂದಿ ನಸುಕು ಹರಿಯುವ ಮೊದಲೇ ನಿಶ್ಚಿತ ತಾಣದಲ್ಲಿ ಬಂದು ಸೇರುತ್ತಾರೆ. ವಾದ್ಯಗೋಷ್ಠಿಯೊಂದಿಗೆ ಬೊಳಕಾಟ್ ಮತ್ತಿತರ ಸಾಂಪ್ರದಾಯಿಕ ಕಾರ್ಯಕ್ರಮಗಳು ವಿಧಿವತ್ತಾಗಿ

ಜರುಗುತ್ತವೆ. ಸರಿ ಸುಮಾರು ಐದು ಗಂಟೆಯ ವೇಳೆಗೆ ದೇವರು ಹೊರಗೆ ಬರುತ್ತಾರೆ. ಸೂರ್ಯೋದಯಕ್ಕಿಂತ ಮೊದಲೇ ಉತ್ಸವ ಪೂರೈಸಿ ಊರವರು ಹಿಂದಿರುಗುತ್ತಾರೆ. ಎರಡನೆಯ ದಿನದ ಜಾತ್ರೆ, ಆರಂಭವಾಗುವದು ನಡು ಮಧ್ಯಾಹ್ನ. ಆ ವೇಳೆಗೆ ನಾಲ್ಕು ಕೇರಿಗಳಿಂದ ಕುದುರೆ ಕೊಹಿಮೆ, ಚಾರಿ ಮುಂತಾದವು ಆಗಮಿಸುತ್ತಾರೆ. ಅವರು ಕಾಕೋಟುಪರಂಬುವಿನ ವಿಶಾಲ ಮೈದಾನದಲ್ಲಿರುವ ಅಶ್ವತ್ಥ ಮರದ ಕಟ್ಟೆಗೆ ಬರುತ್ತಾರೆ. ಅಲ್ಲಿ ನಿರ್ಮಿಸಲಾದ ಕುಟ್ಟಚಾತ ಮತ್ತು ಮಂದಣ್ಣ ಮೂರ್ತಿ ತೆರಗಳನ್ನು ವೀಕ್ಷಿಸಲು ಸಹಸ್ರಾರು ಮಂದಿ ಸೇರುತ್ತಾರೆ. ಮುಖ್ಯ ರಸ್ತೆಯ ಮೇಲ್ಭಾಗದಲ್ಲಿ ತೆರೆಕಟ್ಟ ಅಲ್ಲಿಂದ ಅಶ್ವತ್ಥ ಮರದಲ್ಲಿಗೆ ಬರುವರು. ಅಲ್ಲಿ ಆ ಮರಕ್ಕೆ ಹತ್ತು ಹನ್ನೆರಡು ಸುತ್ತು ಬರುವುದನ್ನು ವೀಕ್ಷಿಸಬಹುದು. ಇದು ತುಂಬಾ ಆಕರ್ಷಣೀಯವಾಗಿರುತ್ತದೆ.

ಮೂರನೆಯ ದಿನದ ಕಾರ್ಯಕ್ರಮ ಆರಂಭವಾಗುವುದು ಮಧ್ಯಾಹ್ನದ ನಂತರ ಸೇರಿದ ಜನಸಮೂಹ ಕುಣಿತ ಪದಗಳಲ್ಲಿ ತೊಡಗುತ್ತಾರೆ. ದೇವರು ಜಳಕಕ್ಕೆ ಹೋಗುವ ಮುಂಚೆ ಈಡುಗಾಯಿ ಹಾಕಿ ಎಳೆದಾಡುವಂತಹ ಮನರಂಜನಾ ಕಾರ್ಯಕ್ರಮಗಳು ಜರುಗುತ್ತವೆ.

ವಿವಿಧ ಸಾಂಪ್ರದಾಯಿಕ ಕಾರ್ಯಕ್ರಮಗಳೊಂದಿಗೆ ಆರಂಭಗೊಳ್ಳುವ ಇಲ್ಲಿನ ಜಾತ್ರೆ ಹದಿನೆಂಟು ಸುತ್ತು ಹೀಲಿ ತೆಗೆಯುವದರೊಂದಿಗೆ ಕೊನೆಗೊಳ್ಳುತ್ತದೆ. ಎಲ್ಲಾ ಚಟುವಟಿಕೆಗಳ ನಂತರ ಮಹಾಪೂಜೆ ನಡೆಯುತ್ತದೆ. ಇದರ ಬಗ್ಗೆ ಸಿ.ಎಸ್.ರಮೇಶ್‌ರವರು ವಿವರಣೆ ನೀಡಿರುತ್ತಾರೆ.

**ಕುಟ್ಟತ್ತಮ್ಮ ಜಾತ್ರೆ**

ಪ್ರತಿ ಗ್ರಾಮಗಳಿಗೆ ಆ ಗ್ರಾಮದ ಏಳಿಗೆಗೆ ಕಷ್ಟ ನಿವಾರಣೆಗೆಂದು ಗ್ರಾಮದೇವತೆ ಇದ್ದೆ ಇರುತ್ತದೆ. ಹಾಗೆಯೇ ಕೊಡಗಿನ ವಿರಾಜಪೇಟೆ ತಾಲೂಕಿನ ಕುಟ್ಟ ಎಂಬ ಕರ್ನಾಟಕದ ಗಡಿಭಾಗದಲ್ಲೂ ಗ್ರಾಮದೇವತೆ ಇದ್ದು ಆ ಗ್ರಾಮ ದೇವತೆಯ ಕುಟ್ಟತ್ತಮ್ಮವಾಗಿದೆ. ಈ ದೇವಾಲಯವು ಕುಟ್ಟದಿಂದ ಸುಮಾರು ೨ ಕಿ.ಮೀ ಕಾಫಿ ತೋಟದ ಒಳಗಿನಿಂದ ಸಾಗಿದರೆ ದಟ್ಟವಾದ ಮರಗಿಡಗಳ ಮಧ್ಯದಲ್ಲೆ ಇದೆ.

ಈ ಕುಟ್ಟತ್ತಮ ದೇವಿಯ ಪ್ರಮುಖ ಆರಾಧಕರೆಂದರೆ ಕೊಡಗಿನ ನಾನಾ ಭಾಗಗಳಲ್ಲಿರುವ ಬುಡಕಟ್ಟು ಜನಾಂಗದವರಾದ ಸೋಲಿಗ, ಬೆಟ್ಟ ಕುರುಬ, ಜೇನು ಕುರುಬ ಈ ರೀತಿಯ ಬುಡಕಟ್ಟು ಜನರ ಆರಾಧ್ಯ ದೈವವಾಗಿದೆ. ಕೊಡಗಿನಲ್ಲಿ ನಡೆಯುವ ಬುಡಕಟ್ಟು ಜನಾಂಗದ ಜಾತ್ರೆಗಳಲ್ಲಿ ಬಹಳ ಪ್ರಸಿದ್ಧಿ ಹಾಗೂ ಪ್ರಮುಖವಾದ ಜಾತ್ರೆಯಾಗಿದೆ. ಪ್ರತಿವರ್ಷ ಮೇ ೨ ಮತ್ತು ೩ನೇ ತಾರೀಖ್‌ನಂದು ಈ ಜಾತ್ರೆ ಜರುಗುತ್ತದೆ.

ಈ ದೇವಾಲಯದ ತಕ್ಕ ಮುಖ್ಯಸ್ಥರು ಕೊಡವರಾಗಿದ್ದು ಇವರ ಉಸ್ತುವಾರಿಕೆಯಲ್ಲಿ ಈ ಜಾತ್ರೆ ಜರುಗುತ್ತದೆ. ಈ ಜಾತ್ರೆಗೆ ಕರ್ನಾಟಕದ ನಾನಾ ಭಾಗಗಳಲ್ಲಿ ವಾಸವಾಗಿರುವ ಸೋಲಿಗ ಹಾಗೂ ಕುರುಬ ಜನಾಂಗದವರು ತಪ್ಪದೆ ಕುಟುಂಬ ಸಮೇತರಾಗಿ ಹಾಜರಾಗುತ್ತಾರೆ.

ಅಲ್ಲಿನ ದೇವಾಲಯದ ಸಮಿತಿಯ ಅನುದಾನದಿಂದ ದಾನಿಗಳ ಅನುದಾನದಿಂದ ಚಿಕ್ಕ ಗುಡಿಯನ್ನು ಹೊಂದಿದ್ದು ಈ ದೇವಾಲಯ ಜೀರ್ಣೋದ್ಧಾರಗೊಳ್ಳುತ್ತ ಒಂದು ಉತ್ತಮ ಸುಂದರವಾದ ದೇವಾಲಯವಾಗಿ ಪರಿವರ್ತನೆಗೊಂಡಿದೆ.

ಮೊದಲನೆಯ ದಿನ ಈ ದೇವಾಲಯದ ಸುತ್ತಮುತ್ತಲಿನ ಜಾಗದಲ್ಲಿ ಮೈಸೂರು, ಹಾಸನ, ಈ ಭಾಗಗಳಿಂದ ಹೂವು,ಹಣ್ಣು ಇತ್ಯಾದಿ ಅಂಗಡಿ ಮುಂಗಟ್ಟಿನವರೆಲ್ಲ ಬಂದು ಸ್ಥಳವಕಾಶ ಮಾಡಿಕೊಂಡು ವ್ಯಾಪಾರ ಪ್ರಾರಂಭಿಸುತ್ತಾರೆ. ಈ ದಿನ ಉತ್ಸವ ದೇವಿಯ ಮೂರ್ತಿಯನ್ನು ತಕ್ಕ ಮುಖ್ಯಸ್ಥರ ಮನೆಯಿಂದ ಧಾರ್ಮಿಕ ವಿಧಿವಿರ್ಧಆನಗಳ ಮೂಲಕ ಹೊರತೆಗೆದು ಹೊಳೆಯಲ್ಲಿ ಅದನ್ನೆಲ್ಲ ಶುದ್ದಗೊಳಿಸಿ ರಾತ್ರಿಯ ವೇಳೆಗೆ ವಾಹನದ ಮೇಲೆ ಮೆರವಣಿಗೆ ತಂದು ದೇವಾಲಯದಲ್ಲಿ ಪ್ರತಿಷ್ಠಾಪಿಸುತ್ತಾರೆ. ಮೆರವಣಿಗೆ ನೋಡಲು ಜನರ ನೂಕು ನುಗ್ಗಲು ಉಂಟಾಗುವಷ್ಟು ಜನ ಸೇರಿರುತ್ತಾರೆ.

ಈ ದಿನ ರಾತ್ರಿ ಪೂರಾ ಧಾರ್ಮಿಕ ಚಟುವಟಿಕೆ ದೇವಾಲಯದ ಪೂಜೆ ಜರುಗುತ್ತಲೆ ಇರುತ್ತದೆ. ರಾತ್ರಿ ಇಡೀ ಒಂದಾದ ಮೇಲೆ ಒಂದು ದೈವಕೋಲ ಬಂದು ನೃತ್ಯ ಮಾಡುತ್ತದೆ. ಇದನ್ನು ನೋಡಲು ಕೆಲವರು ನಿದ್ರೆ ಮಾಡದೆ ರಾತ್ರಿ ಇಡೀ ಇದನ್ನೆಲ್ಲಾ ವೀಕ್ಷಿಸುತ್ತಾರೆ. ಇನ್ನೊಂದೆಡೆ ರಾತ್ರಿ ಈ ಬುಡಕಟ್ಟು ಜನಾಂಗದವರು ತಮ್ಮದೆ ಆದ ಹಾಡನ್ನು ಹಾಡುತ್ತ ನೃತ್ಯ ಮಾಡುತ್ತಿರುತ್ತಾರೆ. ಇನ್ನೊಂದೆಡೆ ಹೋಟೆಲ್ ತಿಂಡಿ, ಅಂಗಡಿ, ಹಣ್ಣಿನ ಅಂಗಡಿ, ಇನ್ನಿತರೆ ಅಂಗಡಿಗಳು ರಾತ್ರಿ ಪೂರಾ ತೆರೆದಿದ್ದು, ಇದರ ಅವಶ್ಯಕತೆ ಇರುವವರು ಇವುಗಳ ಉಪಯೋಗವನ್ನು ಪಡೆಯುತ್ತಿರುತ್ತಾರೆ. ಇತ್ತ ಕಡೆ ಒಂದಾದ ಮೇಲೆ ಒಂದೊಂದು ದೈವಕೋಲಗಳು ಬಂದು ಇಡೀ ಬೆಳಗಿನ ಜಾವದವರೆಗೂ ಈ ರೀತಿ ಆಚರಣೆ ನಡೆಯುತ್ತಿರುತ್ತದೆ. ಇಡೀ ರಾತ್ರಿ ಈ ಬುಡಕಟ್ಟು ಜನಾಂಗದವರು ಮಾತ್ರ ಇಲ್ಲಿ ಇರುತ್ತಾರೆ. ಹಾಗೆಯೇ ಹರಕೆ ಮಾಡಿಕೊಂಡವರು ಇರುತ್ತಾರೆ. ಅಲ್ಲೇ ಇರುವ ಇತರೆ ಸ್ಥಳೀಯ ಜನಾಂಗದವರು ಅವರುಗಳ ಮನೆಯಲ್ಲಿ ರಾತ್ರಿ ತಂಗಿದ್ದು, ಎರಡನೆಯ ದಿನದ ಬೆಳಗಿನ ಪೂಜೆಗೆ ಹಾಗೂ ಅಲ್ಲಿ ನಡೆಯುವ ದೈವಕೋಲವನನು ವೀಕ್ಷಿಸಲು ಜನಸಾಗರವೇ ನೆರೆಯುತ್ತದೆ. ಬುಡಕಟ್ಟು ಜನಾಂಗದವರ ಜಾತ್ರೆಯಾದವರು ಸಹ ಬಹಳ ಧಾರ್ಮಿಕ ಪ್ರಧಾನವಾಗಿ ಶ್ರದ್ಧೆ ಭಕ್ತಿಯಿಂದ ಜಾತ್ರೆಯು ನಡೆಯುತ್ತದೆ.

ಈ ದೇವರಿಗೆ ಹೆಚ್ಚಾಗಿ ಬರುವ ಹರಕೆ ಎಂದರೆ ತ್ರಿಶೂಲವನ್ನು ಅರ್ಪಿಸುವುದಾಗಿದೆ. ಹರಕೆ ಎಂದರೆ ತ್ರಿಶೂಲವನ್ನು ಅರ್ಪಿಸುವುದಾಗಿದೆ. ತ್ರಿಶೂಲ ಅರ್ಪಿಸುವುದಾಗಿ ಹರಕೆ ಮಾಡಿಕೊಂಡ ಜನರು ತ್ರಿಶೂಲವನ್ನು ದೇವಾಲಯಕ್ಕೆ ಅರ್ಪಿಸಿ ಅದಕ್ಕಾಗಿಯೆ ನಿರ್ಮಿಸಿರುವ ಕೊಠಡಿಗೆ ಅದನ್ನು ಇಟ್ಟು ಹೋಗುತ್ತಾರೆ. ಹೀಗೆ ಎರಡು ದಿನಗಳ ಕಾಲ ಕುಟ್ಟತ್ತಮ್ಮನ ಜಾತ್ರೆಯು ನಡೆಯುತ್ತದೆ.

## ಕೋತೂರು ಮಾರಿಯಮ್ಮ ಜಾತ್ರೆ

ವಿರಾಜಪೇಟೆ ತಾಲೂಕಿನ ಕಂಗೂರು ಸಮೀಪದಲ್ಲಿ ಬರುವ ಕೋತೂರು ಎಂಬ ಗ್ರಾಮದಲ್ಲಿ ಪ್ರತಿವರ್ಷ ಮಾರ್ಚ್ ಮಾಹೆಯಲ್ಲಿ ಜಾತ್ರೆಯು ನಡೆಯುತ್ತದೆ. ಇದೇ ಗ್ರಾಮದಲ್ಲಿ ಪ್ರತಿ ಮೂರು ವರ್ಷಕ್ಕೊಮ್ಮೆ ಕಾಟಿ ಹಬ್ಬ ಮಾಡುತ್ತಾರೆ. ವಕ್ತೃಗಳು ಹೇಳುವ ಪ್ರಕಾರ ಈ ದೇವತೆ ಶಕ್ತಿ ದೇವತೆಯಾಗಿರುವುದರಿಂದ ಬಲಿ ಕೊಡುವುದು ಸಾಮಾನ್ಯ. ಅದರಂತೆ ಹಿಂದೆ ಈ ದೇವರಿಗೆ ಕಾಟಿ ಕಾಡುಕೋಣ ಎಂಬ ಕಾಡು ಪ್ರಾಣಿಯನ್ನು ಬಲಿಕೊಡುತ್ತಿದ್ದರಂತೆ. ಆದ್ದರಿಂದ ಈ ದೇವರಿಗೆ ಈಗಲೂ ಕಾಟಿ ಮಾರಿಯಮ್ಮ ಎಂತಲೆ ಹೆಸರು ಇದೆ. ಆದರೆ ಈಗ ಕಾನೂನು ಜಾರಿಯಾಗಿರುವುದರಿಂದ ಶಿಕ್ಷೆಯಾಗುವ ಭಯದಿಂದ ಈ ಪ್ರಾಣಿ ಬಲಿ ಸಂಪೂರ್ಣವಾಗಿ ನಿಷೇಧವಾಗಿದೆ. ಆದರೆ ಮೂರು ವರ್ಷಕ್ಕೊಮ್ಮೆ ಸಾಂಪ್ರದಾಯಿಕವಾಗಿ ಕಾಟಿ ಹಬ್ಬ ಆಚರಿಸುತ್ತಾರೆ. ಈ ಹಬ್ಬ ಬೆಳಿಗ್ಗೆಯಿಂದ ದೇವರ ಶುದ್ಧ ಮಾಡಿ ಧಾರ್ಮಿಕ ವಿಧಿ ವಿಧಾನಗಳ ಮೂಲಕ ಪೂಜೆ ಮಾಡಲಾಗುತ್ತದೆ. ಈ ಬೆಳಗಿನ ಅವಧಿಗೆ ಮಕ್ಕಳು ಮಹಿಳೆಯರು ಪುರುಷರೆಲ್ಲ ಭಾಗವಹಿಸುತ್ತಾರೆ. ಇದೆ ದಿನ ರಾತ್ರಿ ಹರಕೆ ಒಪ್ಪಿಸುವ ಕಾರ್ಯಕ್ರಮ ನಡೆಯುತ್ತದೆ. ಈ ರಾತ್ರಿ ನಡೆಯು ಹರಕೆ ಹಬ್ಬಕ್ಕೆ ಮಕ್ಕಳು ಮತ್ತು ಮಹಿಳೆಯರಿಗೆ ಸಂಪೂರ್ಣ ನಿಷೇದವಿರುತ್ತದೆ.

ಈ ದಿನ ರಾತ್ರಿ ಕತ್ತಲಾಗುತ್ತಿದ್ದಂತೆ ಪುರುಷರು ಬಿಟ್ಟು ಬೇರಾರೂ ಇರುವಹಾಗಿಲ್ಲ. ದೇವಾಲಯದ ಆವರಣದಲ್ಲಿ ಎಲ್ಲರೂ ಸೇರಿರುತ್ತಾರೆ. ಮಧ್ಯದಲ್ಲಿ ಯಾರೂ ಹೋಗದ ರೀತಿಯಲ್ಲಿ ಬರದೆ ಇರದ ರೀತಿಯಲ್ಲಿ ಗೇಟ್ ಬೀಗ ಹಾಕಿರುತ್ತಾರೆ. ಈ ದಿನ ರಾತ್ರಿ ಬೃಹದಾಕಾರದ ಕಟ್ಟಿಗೆಗಳನ್ನು ದೇವಾಲಯದ ಎದುರಿಗೆ ಹಾಕಿ ಬೆಂಕಿ ಹಾಕಲಾಗುತ್ತದೆ. ಈ ಬೆಂಕಿಯ ಸುತ್ತ ಭತ್ತದ ಹುಲ್ಲಿನಿಂದ ಮೈಗೆಲ್ಲ ಬೆದರು ಬೊಂಬೆ ರೀತಿ ಸುತ್ತಿಕೊಂಡು ಕೆಲವರು ಭೂತಗಳ ಕುಣಿತದ ರೀತಿಯಲ್ಲಿ ಆ ಬೆಂಕಿಯ ಸುತ್ತ ಕುಣಿಯುತ್ತಿರುತ್ತಾರೆ. ಇಲ್ಲಿ ಪ್ರಮುಖವಾಗಿ ಇರುವ ಹರಕೆ ಎಂದರೆ ಅರೆಬೆತ್ತಲೆ ಉರುಳುಸೇವೆ, ಹರಕೆ ಇರುವವವರು ಅರೆಬೆತ್ತಲಾಗಿ ಮೈಗೆ ಹುಲ್ಲನ್ನು ಸುತ್ತಿಕೊಂಡು ಆ ಬೆಂಕಿಯ ಸುತ್ತ ದೇವಾಲಯದ ಸುತ್ತ ಸುತ್ತುತ್ತಾರೆ. ದೇವಾಲಯದ ಸುತ್ತ ಆವರಣದ ಸುತ್ತ ವಿದ್ಯುತ್ ಸಂಪೂರ್ಣವಾಗಿ ತೆಗೆದಿದ್ದು ಆ ಬೆಂಕಿಯ ಬೆಳಕಿನಲ್ಲೇ ಅವರವರುಗಳ ಹರಕೆಯನ್ನು ತೀರಿಸಿಕೊಳ್ಳುತ್ತಾರೆ. ಹೀಗೆ ಇಡೀ ರಾತ್ರಿ ಈ ರೀತಿಯ ಹರಕೆ ನಡೆಯುತ್ತಿದ್ದಂತೆ ದೇವರಿಗೆ ಬಲಿ ನೀಡಬೇಕೆಂದು ಆ ದೇವರನ್ನು ಪೂಜಿಸುವ ಪೂಜಾರಿಗೆ ಬೆತ್ತಲಾಗಿ ಬಾಳೆದೆಲೆಯ ಮೇಲೆ ಆ ದೇವರ ಗರ್ಭಗುಡಿಯೊಳಗೆ ಮಲಗಿಸಿ ಚಿಕ್ಕದಾದ ತ್ರಿಶೂಲದಿಂದ ಅವನ ಸೊಂಟಕ್ಕೆ ಸ್ವಲ್ಪ ಪ್ರಮಾಣದಲ್ಲಿ ಚುಚ್ಚಿ ರಕ್ತವನ್ನು ಬಾಳೆದೆಲೆ ಮೇಲೆ ಸುರಿಯುವಂತೆ ಮಾಡಿ ದೇವರಿಗೆ ಸಮರ್ಪಿಸಿದ್ದೇವೆ ಎಂಬ ನಂಬಿಕೆಯೊಂದಿಗೆ ಗರ್ಭಗುಡಿ ಬಾಗಿಲು ಮುಚ್ಚಿ ಎಲ್ಲರೂ ಬೆಳಗಿನ ಜಾವ ಅವರವರ ಮನೆಗೆ ತೆರಳುತ್ತಾರಂತೆ. ಇದು ಮೂರು ವರ್ಷಕ್ಕೊಮ್ಮೆ ನಡೆಯುವ ಹಬ್ಬವಾಗಿದೆ. ಈ ವಿಚಾರವಾಗಿ ಯಾರೂ ಸಹ ಎಲ್ಲೂ ಪ್ರಚಾರ ಮಾಡುವುದಿಲ್ಲ. ಏಕೆಂದರೆ ಕಾನೂನಿನ ಪ್ರಕಾರ ಈ ಹಬ್ಬ ನಿಷೇಧವಾಗಿ ನಮ್ಮ ಹಬ್ಬಕ್ಕೆ ತೊಂದರೆಯಾಗಬಾರದೆಂದು.

ಇದಾದ ಸುಮರು ಏಳು ದಿನಕ್ಕೆ ಮಾರಿಯಮ್ಮನ ಜಾತ್ರೆ ಜರುಗುತ್ತದೆ. ಇದು ಬೆಳಗಿನ ಅವಧಿಯಲ್ಲಿ ನಡೆಯುತ್ತದೆ. ಈ ದಿನ ಬೆಳಿಗ್ಗೆ ಸಾವಿರಾರು ಜನರು ದೇವರ ದರ್ಶನ ಪಡೆದು ಪುನೀತರಾಗಲು ಹಣ್ಣು ಕಾಯಿ ಹೂವಿನೊಂದಿಗೆ ಜಾತ್ರೆಗೆ ಬರುತ್ತಾರೆ. ಈ ಜಾತ್ರೆಯಲ್ಲಿ ದೇವರ ಸುತ್ತ ಕಳಸ ಹೊರುವುದು ಪ್ರಮುಖ ಹರಕೆಯಾಗಿದ್ದು ಪ್ರತಿಯೊಬ್ಬ ಸ್ತ್ರೀ ಪುರುಷರು ಈ ಹರಕೆಯನ್ನು ತೀರಿಸುತ್ತಾರೆ. ಆದರೆ ಹರಕೆ ಒಪ್ಪಿಸುವರು ವೇಷ ಬದಲಾವಣೆ ಮಾಡಿಕೊಂಡು ಕಳಸವನ್ನು ಹೊತ್ತುಕೊಂಡು ಹರಕೆ ತೀರಿಸುತ್ತಾರೆ. ಅಂದರೆ ಸ್ತ್ರೀಯು ಪುರುಷರ ಉಡುಪನ್ನು ಧರಿಸಿ, ಪುರುಷರು ಸ್ತ್ರೀಯ ಉಡುಪನ್ನು ಧರಿಸಿ ನಿಗದಿಪಡಿಸಿ ಸ್ಥಳದಲ್ಲಿ ಕಳಸವನ್ನು ಹೊತ್ತುಕೊಂಡು ಸಾಲು ಸಾಲಾಗಿ ಹೋಗಿ ದೇವರ ಸುತ್ತ ಪ್ರದಕ್ಷಿಣೆ ಹಾಕಿಕೊಂಡು ಬಂದು ದೇವರ ದರ್ಶನ ಪಡೆದು ಅದನ್ನು ಒಂದೆಡೆ ಇಡುತ್ತಾರೆ. ಇದಾದ ನಂತರ ಈ ದೇವಾಲಯಕ್ಕೆ ಸಂಬಂಧಿಸಿದ ಹಿರಿಯರು ಮುಖ್ಯಸ್ಥ ಹಬ್ಬಕ್ಕೆ ಕೊಂಡ ಹಾಕಿದ್ದ ಬೂದಿಯ ಸುತ್ತ ಹಾಡನ್ನು ಹೇಳಿಕೊಂಡು ನೃತ್ಯ ಮಾಡುತ್ತಾರೆ. ಈ ಜಾತ್ರೆಯಲ್ಲಿ ನಡೆಯುವ ಎಲ್ಲಾ ಧಾರ್ಮಿಕ ಆಚರಣೆಗಳನ್ನು ನೋಡಲು ನೂರಾರು ಜನರ ನೂಕುನುಗ್ಗಾಟ ಉಂಟಾಗುತ್ತದೆ. ಆದರೆ ಯಾವುದೇ ಆಚರಣೆಗಳನ್ನು ದೇವಾಲಯದ ದೃಶ್ಯವನ್ನು ಪೋಟೋ ತೆಗೆಯದಂತೆ ಅಲ್ಲಿನ ಮುಖ್ಯಸ್ಥರು ನಿಗಾವಹಿಸುತ್ತಿರುತ್ತಾರೆ. ಈ ಜಾತ್ರೆಯ ವಿಚಾರವಾಗಿ ಏನೇ ಮಾಹಿತಿ ಕೇಳಿದರು ಯಾರು ಸಹ ಮುಕ್ತವಾಗಿ ಹೇಳುತ್ತಿರಲಿಲ್ಲ. ಆದರೆ ಅದೇ ಗ್ರಾಮದವರಾದ ಸುರೇಶ್ ಎಂಬುವವರು ಹಾಗೂ ಅಲ್ಲಿನ ಹಬ್ಬಕ್ಕೆ ಹರಕೆ ತೀರಿಸಲು ಹೋಗಿದ್ದವರ ಸೋದರ ಸಂಬಂಧಿ ವರದರಾಜು ಎಂಬುವದರಿಂದ ಈ ಜಾತ್ರೆಯ ಮಾಹಿತಿ ಪಡೆದೆ ಹಾಗೆಯೇ ನಾನು ನೇರವಾಗಿ ಜಾತ್ರೆಯ ದಿನ ಭೇಟಿಕೊಟ್ಟು ವೀಕ್ಷಣೆ ಮಾಡಿದೆ.

**ಶ್ರೀ ಭದ್ರಕಾಳಿ ಮತ್ತು ಶ್ರಿ ಮಹಾವಿಷ್ಣು ಜಾತ್ರೋತ್ಸವ**

ವಿರಾಜಪೇಟೆ ತಾಲೂಕಿನ ಕಡಂಗ ಗ್ರಾಮ ಪಂಚಾಯ್ತಿಯಲ್ಲಿನ ಮೂರೂರು ಗ್ರಾಮದಲ್ಲಿನ ಕಲ್‌ಮಡಗೇರಿ ಎಂಬಲ್ಲಿ ಭದ್ರಕಾಳಿ ಹಾಗೂ ಮಹಾವಿಷ್ಣುವಿನ ಜಾತ್ರಾ ಮಹೋತ್ಸವವನ್ನು ಎರಡು ದಿನಗಳ ಕಾಲ ನಡೆಯುತ್ತದೆ.

ವಕ್ತೃ ಹೇಳುವ ಪ್ರಕಾರ ಈ ಭದ್ರಕಾಳಿಯು ನೆಲೆ ನಿಂತಿರುವುದು ಸುಮಾರು ೬೦೦ ವರ್ಷಗಳ ಇತಿಹಾಸವನ್ನು ಹೊಂದಿದ್ದು ತಲತಲಾಂತರದಿಂದ ಈ ದೇವಿಯ ಪೂಜೆಯನ್ನು ಬಾಚೇಟೇರ ಮನೆತನದವರು ನಡೆಸಿಕೊಂಡು ಬರುತ್ತಿದ್ದಾರೆ. ಸುಮಾರು ೬೦೦ ವರ್ಷಗಳ ಹಿಂದೆ ಈ ಗ್ರಾಮದಲ್ಲಿ ಭೀಕರ ಸಿಡುಬು ರೋಗದಿಂದ ಎಲ್ಲ ಸತ್ತು ಹೋಗುತ್ತಿದ್ದರಂತೆ. ಇದೆಲ್ಲ ನಿಂತು ಹೋಗಬೇಕಾದರೆ ಇದನ್ನೆಲ್ಲ ನಿವಾರಣೆ ಮಾಡುವಂತಹ ಒಂದು ದೇವತೆ ನೆಲೆ ನಿಲ್ಲಬೇಕೆಂದು ಈ ಮನೆತನದ ಹಿರಿಯರೆಲ್ಲ ಸೇರಿ ಬೈತೂರು ಎಂಬಲ್ಲಿಗೆ ಹೋದರಂತೆ ಅಲ್ಲಿ ದೇವರ ಮುಂದೆ ಪ್ರಾರ್ಥಿಸಿ ನಮ್ಮ ಗ್ರಾಮಕ್ಕೆ ಒಂದು ಹೆಣ್ಣು ದೇವರನ್ನು ಕಳುಹಿಸಿಕೊಡಿ ಎಂದು ಬೈತೂರಪ್ಪನಲ್ಲಿ ಪ್ರಾರ್ಥನೆ ಮಾಡಿಕೊಂಡರಂತೆ

ಅದರಂತೆ ದೇವರಿಂದ ಅನುಗ್ರಹವಾಗಿ ಹೆಣ್ಣು ದೇವತೆಯನ್ನು ನಿಮ್ಮ ಹಿಂದೆ ಕಳುಹಿಸುತ್ತೇನೆ. ಆದರೆ ನೀವು ನಿಮ್ಮ ಗ್ರಾಮ ತಲುಪುವವರೆಗೂ ಯಾವುದೇ ಕಾರಣಕ್ಕೂ ಹಿಂತಿರುಗಿ ನೋಡಬಾರದು ಎಂದು ಹೇಳಿದರಂತೆ ಅದರಂತೆ ಅವು ಒಪ್ಪಿಕೊಂಡು ಅಲ್ಲಿಂದ ಕಲ್‌ಮಡಗೇರಿಯವರೆಗೂ ನಡೆದುಕೊಂಡೆ ಬಂದರಂತೆ ಆ ಹೆಣ್ಣು ದೇವತೆಯು ಇವರ ಹಿಂದೆ ಗಾಳಿ ಬೆಂಕಿಯೂ ರೂಪದಲ್ಲಿ ಹಿಂಬಾಲಿಸಿ ಈ ಗ್ರಾಮದಲ್ಲಿ ಬಂದು ನೆಲೆನಿಂತಳಂತೆ. ಈ ದೇವಿಯು ಉಗ್ರರೂಪ ತಾಳಿದಳಂತೆ ಇವಳ ಈ ಉಗ್ರರೂಪ ಕಡಿಮೆ ಮಾಡಲು ಪಕ್ಕದಲ್ಲೆ ಮಹಾವಿಷ್ಣು ಮೂರ್ತಿಯನ್ನು ಪ್ರತಿಷ್ಠಾಪಿಸಿದರಂತೆ. ಆದ್ದರಿಂದ ಈ ಗ್ರಾಮದಲ್ಲಿ ದೇವಾಲಯದ ಆವರಣದಲ್ಲಿ ಭದ್ರಕಾಳಿ ಹಾಗೂ ಮಹಾವಿಷ್ಣುವಿನ ದೇವಾಲಯವಿದೆ.

ಈ ದೇವರುಗಳನ್ನು ಸಂತೃಸಲು ಹಾಗೂ ಗ್ರಾಮದ ಕ್ಷೇಮಾಭಿವೃದ್ಧಿಗಾಗಿ ಇಲ್ಲಿನ ಬಾಚೇಟೀರ ಮನೆತನದವರು ಹಾಗೂ ಸುತ್ತಮುತ್ತಲಿನ ಗ್ರಾಮಸ್ಥರೆಲ್ಲ ಸೇರಿ ಪ್ರತಿವರ್ಷ ಜಾತ್ರೋತ್ಸವವನ್ನು ನಡೆಸುತ್ತಾರೆ. ಈ ಜಾತ್ರೆಯಲ್ಲಿ ಮೇದರ ಜನಾಂಗದವರು ಪಾಲ್ಗೊಂಡು ಆ ಜನಾಂಗದವರಿಗೆ ಚಾಮುಂಡಿ ಅವಾಹನೆಯಾಗಿ ಇದೆ. ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರಂತೆ.

ಈ ಜಾತ್ರೆಯು ಮೂರು ದಿನಗಳ ಕಾಲ ಹಲವಾರು ಧಾರ್ಮಿಕ ವಿಧಿ ವಿಧಾನಗಳ ಮೂಲಕ ನಡೆಸುತ್ತಾರೆ. ಹಾಗೆಯೇ ದೈವಕೋಲಗಳನ್ನು ನಡೆಸುತ್ತಾರೆ. ಈ ಎಲ್ಲಾ ಮಾಹಿತಿಯನ್ನು ಪೂಜಾರಿ ಕಾರ್ಯಪ್ಪ, ಲೋಕೇಶ್ ಸದಾಶಿವ ಇವರುಗಳು ನೀಡಿರುತ್ತಾರೆ.

**ಬೈರಂಬಾಡ ಷಷ್ಠಿ ಜಾತ್ರೆ**

ಬೈರಂಬಾಡ ಎಂಬ ಗ್ರಾಮವು ವಿರಾಜಪೇಟೆ ತಾಲೂಕಿನ ಒಂಟೆಯಂಗಡಿ ಸಮೀಪದಲ್ಲಿ ಬರುವ ಗ್ರಾಮವಾಗಿದ್ದು ಇಲ್ಲಿ ಸುಬ್ರಹ್ಮಣ್ಯ ದೇವಾಲಯವಿದೆ. ಈ ದೇವಾಲಯವು ಕಾಫಿ ತೋಟದ ಮಧ್ಯದಲ್ಲಿದ್ದು ತುಂಬಾ ಆಕರ್ಷಿತವಾದ ದೇವಾಲಯವಾಗಿದೆ. ಇಲ್ಲಿ ಪ್ರತಿವರ್ಷ ಷಷ್ಠಿಯಂದು ಬಹಳ ಜನಸಾಗರದೊಂದಿಗೆ ಜಾತ್ರೆಯು ನಡೆಯುತ್ತದೆ.

ಈ ಜಾತ್ರೆಯಲ್ಲಿ ವ್ಯಾಪಾರ ವ್ಯವಹಾರ ನಡೆಸುವ ಸಲುವಾಗಿ ಹಲವಾರು ಅಂಗಡಿ ಮುಂಗಟ್ಟುಗಳು ಜಮಾಯಿಸಿರುತ್ತವೆ. ಹೆಚ್ಚಾಗಿ ಹೂವು, ಹಣ್ಣು, ಆಟಿಕೆ, ಕಡ್ಲೆಪುರಿ, ಬಳೆ ಅಂಗಡಿ ಇನ್ನೂ ಹಲವಾರು ಅಂಗಡಿ ಮುಂಗಟ್ಟುಗಳು ಇದ್ದು ವ್ಯಾಪಾರದ ಭರಾಟೆ ಜೋರಾಗಿರುತ್ತದೆ.

ಸಾಮಾನ್ಯವಾಗಿ ಸುಬ್ರಹ್ಮಣ್ಯ ಷಷ್ಠಿಯಂದು ಜನರು ತಮ್ಮಲ್ಲಿರುವ ವಂಗದೋಷ, ಇನ್ನಿತರೆ ದೋಷ ಅಲ್ಲದೆ ಕಷ್ಟಕಾರ್ಪಣ್ಯಗಳು ತೀರಲೆಂದು ದೇವರಲ್ಲಿ ಪ್ರಾರ್ಥಿಸಲೆಂದೆ ಬರುತ್ತಾರೆ. ಗರ್ಭಗುಡಿಯಲ್ಲಿರುವ ಮೂರ್ತಿಯ ದರ್ಶನ ಪಡೆಯಲು ಜನಸಾಗರ ನೆರವೇರಿರುತ್ತದೆ. ಇಲ್ಲಿ ವಾಹನ ಸಂಚಾರ ಕಡಿಮೆ ಇದ್ದರೂ ಸಹ ಈ ದಿನ ಮಾತ್ರ ಅಮ್ಮತ್ತಿ, ಕುಶಾಲನಗರ ವಿರಾಜಪೇಟೆ. ಮಡಿಕೇರಿ ಈ ಭಾಗಗಳಿಂದ ವಾಹನಗಳು ಬರುವ ವ್ಯವಸ್ಥೆ ಮಾಡಿರಲಾಗಿರುತ್ತದೆ. ಜೊತೆಗೆ ದ್ವಿಚಕ್ರವಾಹನ, ಆಟೋಕಾರ್ ಇವುಗಳ ಮೂಲಕವು ಜನ ಇಲ್ಲಿ ಬರುತ್ತಾರೆ.

ಈ ಜಾತ್ರೆಯಲ್ಲಿ ಪ್ರಮುಖವಾಗಿ ಅಂಗವಿಕಲರು, ಆರ್ಥಿಕವಾಗಿ ಹಿಂದುಳಿದ ಕಡು ಬಡವರು, ರೋಗಿಷ್ಠರೆಲ್ಲ, ಭಿಕ್ಷಾಟನೆಗಾಗಿ ಸಾಲು ಸಾಲಾಗಿ ಕುಳಿತಿರುವುದು ವಿಶೇಷ. ಇವರೆಲ್ಲ ಅಕ್ಕಪಕ್ಕದ ಜಿಲ್ಲೆಯ

ಗಡಿಭಾಗಗಳಿಂದಲೂ ಭಿಕ್ಷಾಟನೆಗಾಗಿಯೆ ಬಟ್ಟೆ ಬರೆಯನೆಲ್ಲ ತುಂಬಿಕೊಂಡು ಬಂದು ಕುಳಿತಿರುತ್ತಾರೆ. ಚಿಕ್ಕಮಕ್ಕಳು, ವಯೋವೃದ್ಧರು ಸ್ತ್ರೀಯರು, ಪುರುಷರು ಇವರೆಲ್ಲರೂ ಸಹ ಭಿಕ್ಷಾಟನೆಗೆ ಕುಳಿತಿರುತ್ತಾರೆ. ಕೆಲವರೂ ಚೆನ್ನಾಗಿದ್ದರೂ ಸಹ ಅವರ ತಂದೆ, ತಾತಾ ಭಿಕ್ಷಾಟನೆ ಮಾಡುತ್ತಿದ್ದುದರಿಂದ ಅದನ್ನು ಅನುಸರಿಸಿ ಅವರು ಬಂದು ಭಿಕ್ಷಾಟನೆಗೆ ಕುಳಿತಿರುತ್ತಾರೆ.

ಭಿಕ್ಷಾಟನೆಗೆ ಕುಳಿತ ಇವರಿಗೆಲ್ಲ ದೇವರ ದರ್ಶನಕ್ಕೆ ಬರುವ ಎಲ್ಲಾ ಭಕ್ತರು ಮನೆಯಿಂದ ಹಾಗೂ ಹಣವನ್ನು ಅವರಿಗೆ ದಾನ ಮಾಡುತ್ತ ನಂತರ ದೇವರ ದರ್ಶನಕ್ಕೆ ಹೋಗುತ್ತಾರೆ. ಇವರು ಸುಮಾರು ಅರ್ಧ ಕಿ.ಮೀ ದೂರದವರೆಗೂ ೨೦೦ ಜನರು ಭಿಕ್ಷಾಟನೆಗೆ ಕುಳಿತಿರುತ್ತಾರೆ. ಏನೇ ಆಗಲಿ ಅಲ್ಲಿ ಬರುವ ಭಕ್ತರು ಇವರಿಗೆಲ್ಲ ಅಕ್ಕಿ ಹಣ ನೀಡುವುದು ದೇವರ ಹುಂಡಿಗೆ ಹಾಕುವ ಹಣಕ್ಕಿಂತ ಮುಖ್ಯ ಅಂತ ನನಗೆ ಅನಿಸಿತು. ಏಕೆಂದರೆ ಇವರು ಖಂಡಿತವಾಗಿ ನಿರ್ಗತಿಕರು, ಬಡವರಾಗಿದ್ದರಿಂದಲೇ ಈ ರೀತಿ ಭಿಕ್ಷಾಟನೆಗೆ ಕುಳಿತಿದ್ದಾರೆ. ಈ ಜಾತ್ರೆಯ ಮೂಲಕವಾದರೂ ಅವರಿಗೆ ಸ್ವಲ್ಪ ದಿನದ ಬಾಳ್ವೆ ನಡೆಯುತ್ತದೆಯಲ್ಲ ಎಂಬುದುದು ಸಮಾಧಾನದ ವಿಷಯ.

ಈ ಜಾತ್ರೆಯಲ್ಲಿ ಮುಡಿಯನ್ನು ನೀಡುತ್ತಾರೆ. ಹಾಗೆಯೇ ಇಲ್ಲಿ ಬಂದಿರುವಂತಹ ಭಕ್ತ ಸಮೂಹದವರಿಗೆ ದೇವಾಲಯದ ಸಮಿತಿವತಿಯಿಂದ ದಾಸೋಹ ವ್ಯವಸ್ಥೆ ಮಾಡಿರುತ್ತಾರೆ. ಈ ಮಾಹಿತಿಯನ್ನು ಸರಸು ಎಂಬುವವರು ನೀಡಿರುತ್ತಾರೆ.

**ಬಿಟ್ಟಂಗಾಲ ಭಗವತಿ ಮತ್ತು ಮಹಾವಿಷ್ಣು ಜಾತ್ರೆ**

ಈ ಬಿಟ್ಟಂಗಾಲ ಗ್ರಾಮವು ಗೋಣಿಕೊಪ್ಪ ಹಾಗೂ ವಿರಾಜಪೇಟೆ ಮುಖ್ಯರಸ್ತೆಯಲ್ಲಿನ ಗೋಣಿಕೊಪ್ಪದ ಸಮೀಪದಲ್ಲಿ ಕಂಡು ಬರುತ್ತದೆ. ಈ ಗ್ರಾಮದಲ್ಲಿ ಪ್ರತಿವರ್ಷ ಏಪ್ರಿಲ್ ಮಾಹೆಯಲ್ಲಿ ಮೂರು ದಿನಗಳ ಕಾಲ ಜಾತ್ರೆ ನಡೆಯುತ್ತದೆ.

ತಕ್ಕ ಮುಖ್ಯಸ್ಥರ ಮನೆಯಿಂದ ಭಂಡಾರವನ್ನು ತಂದು ಅದನ್ನು ಶುದ್ದೀಕರಿಸಿ ದೇವಾಲಯದಲ್ಲಿ ಇಟ್ಟ ಬಹಳ ಭಕ್ತಿಭಾವದಿಂದ ಧಾರ್ಮಿಕ ಆಚರಣೆ ನಡೆಸುತ್ತಾರೆ. ಈ ಆಚರಣೆಯಲ್ಲಿ ಪ್ರತಿಯೊಂದು ಕುಟುಂಬದ ಎಲ್ಲಾ ಸದಸ್ಯರು ಕಡ್ಡಾಯವಾಗಿ ಪಾಲ್ಗೊಳ್ಳುತ್ತಾರೆ.

ದೇವಾಲಯವನ್ನು ಗ್ರಾಮಸ್ಥರೆಲ್ಲಲ ಸೇರಿ ತಳಿರುತೋರಣಗಳಿಂದ ಶೃಂಗಾರ ಮಾಡಿ ಜಾತ್ರೆಯ ಪ್ರಾರಂಭದ ಸಂಕೇತವಾಗಿ ಧ್ವಜಕಂಭ ನಿಲ್ಲಿಸುವ ಮೂಲಕ ಜಾತ್ರೆಗೆ ಚಾಲನೆ ನೀಡುತ್ತಾರೆ. ಈ ದಿನ ರಾತ್ರಿ ಬೇಡು ಹಬ್ಬ ಆಚರಿಸುತ್ತಾರೆ.

ದೇವರನ್ನು ಉಯ್ಯಾಲೆಯಲ್ಲಿ ಕೂರಿಸಿ ಶಯ್ಯನ ಮಾಡುವ ವಸಂತ ಪೂಜೆಯನ್ನು ಮಾಡುತ್ತಾರೆ. ನಂತರ ಮಂಗಳಾರತಿ ಮಾಡಿ ನಂತರ ಉಯ್ಯಾಲೆಯಲ್ಲಿ ಕೂರಿಸಿದ ಮೂರ್ತಿಯನ್ನು ಗರ್ಭಗುಡಿಯಲ್ಲಿ ಇಟ್ಟು ಮಹಾಪೂಜೆ ಮಾಡುತ್ತಾರೆ. ಈ ದಿನ ಪ್ರಾಣಿ ಬಲಿ ನೀಡುವುದಿಲ್ಲ. ಈ ಜಾತ್ರೆ ಮುಗಿದ ಮೇಲೆ ಇಲ್ಲಿನ ಎಲ್ಲಾ ಗ್ರಾಮಸ್ಥರು ಪಿರಿಯಾಪಟ್ಟಣದ ದೇವರಿಗೆ ಹಂದಿ ಬಲಿಯನ್ನು ನೀಡುತ್ತಾರೆ. ಇದಾದ ನಂತರ ಎಲ್ಲರೂ ಸೇರಿ ಮಾರಿ ಹಬ್ಬವನ್ನು ಆಚರಿಸುತ್ತಾರೆ. ಈ ವಿಚಾರವನ್ನು ವಕ್ತೃಗಳಾದ ರಾಮಚ್ಚ, ವಿಷ್ಣು ಮುಕ್ಕಾಟೀರ ತಿಳಿಸಿರುತ್ತಾರೆ.

## ಸೋಮವಾರಪೇಟೆ ತಾಲ್ಲೂಕಿನ ಜಾತ್ರೆಗಳು

| | | | |
|---|---|---|---|
| * | ಕಣಿವೆ ಶ್ರೀ ರಾಮಲಿಂಗೇಶ್ವರ ಜಾತ್ರೆ | – | ಕಣಿವೆ |
| * | ಶ್ರೀ ನಂಜುಂಡೇಶ್ವರ ಜಾತ್ರೆ | – | ನಂಜರಾಯ ಪಟ್ಟಣ |
| * | ನಗರಳ್ಳಿಯ ಸುಬ್ಬಮ್ಮದೇವಿ ಜಾತ್ರೆ | – | ನಗರಳ್ಳಿ |
| * | ಚೆಟ್ಟಳ್ಳಿಯ ಚೇರಳ ಶ್ರೀ ಭಗವತಿ ಜಾತ್ರೆ | – | ಚೆಟ್ಟಳ್ಳಿ |
| * | ಮಳೆ ಮಲ್ಲೇಶ್ವರ ಜಾತ್ರೆ | – | ಮಾಲಂಬಿ |
| * | ಗವಿಸಿದ್ದೇಶ್ವರ ಜಾತ್ರೆ | – | ಅಗಳಿ |
| * | ಶ್ರೀ ಗುರು ಸಿದ್ದವೀರಸ್ವಾಮಿ ಜಾತ್ರೆ | – | ಮನೆಹಳ್ಳಿ |

## ೪.೩ ಸೋಮವಾರಪೇಟೆ ತಾಲ್ಲೂಕಿನ ಜಾತ್ರೆಗಳು

### ಕಣಿವೆ ಶ್ರೀ ರಾಮಲಿಂಗೇಶ್ವರ ಜಾತ್ರೆ

**ಕೊಡಗಿನ** ಸೋಮವಾರಪೇಟೆ ತಾಲ್ಲೂಕಿನಲ್ಲಿರುವ ಕುಶಾಲನಗರ ಹೋಬಳಿಯ ಕಣಿವೆ ಎಂಬ ಪ್ರದೇಶದಲ್ಲಿನ ಸುಂದರ ಪ್ರಕೃತಿಯಲ್ಲಿ ಈ ಶ್ರೀ ರಾಮಲಿಂಗೇಶ್ವರ ದೇವಸ್ಥಾನವಿದೆ. ಕುಶಾಲನಗರದಿಂದ ಹಾಸನಕ್ಕೆ ಹೋಗುವ ಮಾರ್ಗದಲ್ಲಿ ಈ ದೇವನೆಲೆಯಿರುವುದು.

ಇರ್ಪುವಿನಲ್ಲಿ ರಾಮೇಶ್ವರ, ಹೇರ್ವಾಡುವಿನಲ್ಲಿ ಈಶ್ವರನಿರುವಂತೆ, ಇಲ್ಲಿ ರಾಮಲಿಂಗೇಶ್ವರ ಪ್ರತಿಷ್ಠಾಪನೆ ಆಗಿರುವುದು. ವನವಾಸದ ಸಮಯದಲ್ಲಿ ಶ್ರೀ ರಾಮನು ಇಲ್ಲಿಗೆ ಆಗಮಿಸಿದ ಸಂದರ್ಭದಲ್ಲಿ ಎಲ್ಲಾ ಲಿಂಗವನ್ನು ಪ್ರತಿಷ್ಠಾಪಿಸಿದನೆನ್ನುವರು.

ಶ್ರೀ ರಾಮಲಿಂಗೇಶ್ವರ ದೇವಸ್ಥಾನದ ಹೊರಾವರಣದ ಸ್ವಲ್ಪ ದೂರದಲ್ಲಿರುವ ಅಶ್ವಥಮರದ ಕಟ್ಟೆಯಲ್ಲಿ ಸರ್ಪಸಂಸ್ಕಾರದ ಸ್ಥಾನ ಅಂದರೆ ಸರ್ಪರಾಜನ ನೆಲೆಯಿರುವುದು. ಅಲ್ಲಿಂದ ಸ್ವಲ್ಪದೂರದಲ್ಲಿ ಹರಿಹರೇಶ್ವರ ದೇವಸ್ಥಾನವಿರುವುದು. ಅಲ್ಲಿ ಶಿವ ಮತ್ತು ವಿಷ್ಣುವಿನ ಶಕ್ತಿ ಒಂದಾಗಿರುವ ಹರಿಹರೇಶ್ವರನ ಶಿಲಾ ಮೂರ್ತಿಯಿರುವುದು. ಅಲ್ಲಿಯ ಸುತ್ತಮುತ್ತಲಿನ ವಾಸಿಗರು ಅವರ ಮನೆಯಲ್ಲಿ ಹಸು ಕರು ಹಾಕಿದ ಸಂದರ್ಭದಲ್ಲಿ ಹರಕೆ ಹಂಚುವರು. ಇಲ್ಲಿ ಹೆಚ್ಚಾಗಿ ಹರಿಹರೇಶ್ವರನಿಗೆ ಗಿಣ್ಣಿನ ನೈವೇದ್ಯವನ್ನು ಅರ್ಪಿಸಲಾಗುತ್ತಿರುತ್ತದೆ.

ಶ್ರೀ ರಾಮಲಿಂಗೇಶ್ವರ ದೇವಸ್ಥಾನದ ಸಮೀಪದಲ್ಲಿ ಗುಹೇಶ್ವರನ ದೇವಸ್ಥಾನವಿರುವುದು. ಅಲ್ಲಿರುವ ಗುಹೆಯೊಳಗೆ ಈಶ್ವರನಲಿಂಗವಿರುವುದು. ಊರಿನ ಮಧ್ಯದಲ್ಲಿ ಬಸವೇಶ್ವರನ ದೇಗುಲವಿರುವುದು.

ಇಲ್ಲಿ ಮುಖ್ಯವಾದ ದೇವಸ್ಥಾನ ಶ್ರೀ ರಾಮಲಿಂಗೇಶ್ವರ ಗುಡಿ. ದೇವಸ್ಥಾನದ ಹೊರಾವರಣದ ದೊಡ್ಡ ಮೈದಾನವನ್ನು ದಾಟಿ ಮುಂದಕ್ಕೆ ನಡೆದಾಗ ಒಳಾಂಗಣದ ಪ್ರವೇಶದ್ವಾರ. ಅಲ್ಲಿ ನವಗ್ರಹ ಪ್ರತಿಷ್ಠಾಪಿಸಲಾಗಿರುವುದು. ಮುಂದೆ ಗರ್ಭಗುಡಿಯಲ್ಲಿ ವಿರಾಜಮಾನವಾಗಿರುವ ಶ್ರೀ ರಾಮಲಿಂಗೇಶ್ವರನ ದರ್ಶನ. ಇಲ್ಲಿ ರಾಮಲಿಂಗೇಶ್ವರನ ಲಿಂಗದ ಜೊತೆಯಲ್ಲಿ ಶ್ರೀ ರಾಮ, ಸೀತೆ, ಲಕ್ಷ್ಮಣ ಮತ್ತು ಆಂಜನೇಯನ ಉತ್ಸವ ಮೂರ್ತಿಯು ಇರುವುದು.

ಶ್ರೀ ರಾಮನು ಸೀತೆಯನ್ನು ಹುಡುಕುತ್ತಾ ಲಕ್ಷ್ಮಣ ಮತ್ತು ಆಂಜನೇಯನೊಂದಿಗೆ ಈ ಸ್ಥಳಕ್ಕೆ ಆಗಮಿಸಿದನು. ಆ ಸಮಯದಲ್ಲಿ ಈ ಪ್ರದೇಶದಲ್ಲಿ ವ್ಯಾಪ್ತವಾದ ಋಷಿಗಳ ಆಶ್ರಮದಲ್ಲಿ ತಂಗಿ ವಿರಮಿಸಿದನು. ಆ ಸಂದರ್ಭದಲ್ಲಿ ಮುನಿಗಳು ಶ್ರೀ ರಾಮನಿಗೆ ಅಲ್ಲೊಂದು ಶಿವಲಿಂಗ ತರಲು ಆಂಜನೇಯನನ್ನು ಕಳುಹಿಸಿದನು. ಆಂಜನೇಯ ಲಿಂಗ ತರುವುದು ತುಸು ತಡವಾಯಿತು.

ಸಂಧ್ಯಾವಂದನೆಯ ಸಮಯವಾಗಲು ಶ್ರೀರಾಮನು ಹೊಳೆಕರೆಯ ಮರಳು ಮಣ್ಣಿನಿಂದ ಲಿಂಗ ಸ್ವರೂಪ ತಯಾರಿಸಿ ಅದನ್ನು ಪೂಜಿಸಿ ಪ್ರಾಣ ಪ್ರತಿಷ್ಠೆ ಮಾಡಿದನು. ಆ ಲಿಂಗವು ಶ್ರೀ ರಾಮ

ಲಿಂಗೇಶ್ವರವೆಂದು ಪ್ರಸಿದ್ಧಿ ಪಡೆಯಿತು. ಸ್ವಲ್ಪ ತಡವಾಗಿ ಬಂದ ಆಂಜನೇಯನ ಶಿವಲಿಂಗವನ್ನು ಸಮೀಪದಲ್ಲಿ ತುಸು ಎತ್ತರದಲ್ಲಿದ್ದ ಲಕ್ಷ್ಮಣೇಶ್ವರ ಬೆಟ್ಟದಲ್ಲಿ ಪ್ರತಿಷ್ಠಾಪಿಸಿ ಪೂಜಿಸಿದನು. ಈ ಲಿಂಗವನ್ನು ಲಕ್ಷ್ಮಣೇಶ್ವರನೆಂದು ಪೂಜಿಸಲಾಯಿತು.

ಈ ದೇಗುಲದಲ್ಲಿ ಮಹಾಶಿವರಾತ್ರಿಯಂದು ಶಿವನ ಆರಾಧನೆ ಮಾಡುವರು. ಈ ಸಮಯದಲ್ಲಿ ಐದು ಹೊತ್ತಿನ ಪೂಜೆ ಮಾಡಲಾಗುತ್ತಿತ್ತು. ಶ್ರೀರಾಮ ನವಮಿಗೆ ಇಲ್ಲಿ ದೊಡ್ಡ ಉತ್ಸವ ನಡೆಯುವದು. ಉತ್ಸವದಲ್ಲಿ ಪೂಜೆ, ಹೋಮ, ರಥಾರೋಹಣ, ಅಭಿಷೇಕ, ಉಯ್ಯಾಲೋತ್ಸವ, ಕಲ್ಯಾಣೋತ್ಸವ, ತೆಪ್ಪೋತ್ಸವ, ಬ್ರಹ್ಮರಥೋತ್ಸವ ಹೀಗೆ ಹಲವಾರು ತರದ ಪೂಜೆಗಳು ನಡೆಯುತ್ತವೆ.

ದೇವಸ್ಥಾನದ ಮುಂದೆ ಪುರಾತನ ಕಾಳಗದಲ್ಲಿ ನಂದಿಪುಷ್ಕರಿಣಿ ಇತ್ತಂತೆ. ಕಾಲಾಂತರದಲ್ಲಿ ಅದರ ಮೇಲೆ ಕಾವೇರಿ ಹೊಳೆಯು ಹರಿದು ಈ ಕ್ಷೇತ್ರವು ಪಾವನವಾಯಿತಂತೆ ತುಂಬಾ ಅಗಲವಾಗಿ ಹರಿಯುವ ಕಾವೇರಿ ಹೊಳೆಗೆ ಇಲ್ಲಿ ಮೇಲ್ಸೇತುವೆ, ತೂಗುಸೇತುವೆ ನಿರ್ಮಿಸಲಾಗಿರುವುದು. ಈ ಸೇತುವೆಯ ಮೂಲಕ ಹೊಳೆಯ ಆಕರೆಯಲ್ಲಿರುವ ಹಳ್ಳಿಗಳನ್ನು ಸೇರಬಹುದು. ಇಲ್ಲಿ ಭಕ್ತರು ತೀರ್ಥಸ್ನಾನ ಮಾಡುವರು. ಕುಂಕುಮಾರ್ಚನೆ ಮಾಡಿ ಕಾವೇರಿ ಮಾತೆಯ ಕೃಪೆಯನ್ನು ಪಡೆದುಕೊಳ್ಳುವರು. ದೀಪ ಉರಿಸಿ ತೇಲಿಬಿಡುವರು.

ಈ ದೇಗುಲದ ಮುಂದೆ ನಿಂತು ನೋಡಿದರೆ ಕಾಣಿಸುವ ಬೆಟ್ಟಗುಡ್ಡಗಳ ಆಕರ್ಷಣೀಯ ನೋಟ ಕಣ್ಮನ ತಣಿಸುವುದು. ಭಕ್ತರು ಕಣಿವೆಯ ಸುಂದರವಾದ ಪರಿಸರ ನಡುವಿನಲ್ಲಿರುವ ಈ ದೇಗುಲದ ಸೌಂದರ್ಯವನ್ನು ಕಣ್ತುಂಬಿಕೊಂಡು ಧನ್ಯರಾಗಬಹುದು.

ಹೆಬ್ಬಾಲೆ, ಶಿರಂಗಾಲ, ತೊರೆನೂರು, ಗದ್ದೆಹೊಸವಳ್ಳಿ, ದೊಡ್ಡಕಮರಳ್ಳಿ, ಶಾನುಭೋಗನಹಳ್ಳಿ, ದಿಂಡಗಾಡು, ಒಂಟಿಕೊಪ್ಪಲು, ಕೂಡಿಗೆ ಹೀಗೆ ಹಲವಾರು ಹಳ್ಳಿಗಳಿಗೆ ಈ ದೇವಸ್ಥಾನವು ಸಂಬಂಧಿಸಿರುವುದು. ದೇವಸ್ಥಾನದ ಸಮೀಪದಲ್ಲಿರುವ ಸಭಾ ಮಂಟಪದಲ್ಲಿ ವರ್ಷಂಪ್ರತಿ ಹಲವಾರು ಮದುವೆಗಳು ನಡೆಯುತ್ತಿರುತ್ತವೆ. ವಿವರಣೆ ನೀಡಿದವರು ಅರ್ಚಕರಾದ ರಾಘವೇಂದ್ರಚಾರ್

**ಶ್ರೀ ನಂಜುಂಡೇಶ್ವರ ಜಾತ್ರೆ**

ಸೋಮವಾರಪೇಟೆ ತಾಲೂಕಿನಲ್ಲಿರುವ ಕುಶಾಲನಗರ ಹೋಬಳಿಯ ನಂಜರಾಯಪಟ್ಟಣದಲ್ಲಿದೆ ಶ್ರೀ ನಂಜುಂಡೇಶ್ವರ ದೇವಸ್ಥಾನ. ದುಬಾರೆಗೆ ಹೋಗುವ ಮಾರ್ಗದಲ್ಲಿ ಶ್ರೀ ನಂಜುಂಡೇಶ್ವರನ ದೇವಾಲಯಕ್ಕೆ ಹೋಗುವ ರಸ್ತೆಯ ಪ್ರವೇಶದ್ವಾರ ಕಾಣಸಿಗುವುದು. ಅಲ್ಲಿಂದ ಅನತಿ ದೂರದಲ್ಲೆ ಅಂದಾಜು ೩೦೦೦ ವರ್ಷಗಳ ಇತಿಹಾಸವಿರುವ ಪುರಾತನ ಕಾಲದ ದೇವಾಲಯವು ಕಾಣಸಿಗುವುದು.

ವಿಶಾಲವಾದ ಅಗಲವಾದ ದೊಡ್ಡ ಮೈದಾನದಂತಿರುವ ಬಯಲು ಪ್ರದೇಶದ ಮಧ್ಯದಲ್ಲಿ ಈ ಸುಂದರವಾದ ಶಿವಾಲಯವಿದೆ. ದೊಡ್ಡ ಮೈದಾನದ ಉದ್ದಕ್ಕೂ ನಡೆಯುವಾಗ ಹಲವಾರು ಬಿಲ್ವಪತ್ರೆ

ಮರಗಳು ಹಾಗು ಬಲಬದಿಯ ಒಂದು ಕೊನೆಯಲ್ಲಿ ಬೇವು ಮತ್ತು ಅರಳಿಮರದ ಬುಡದಲ್ಲಿ ನಾಗದೇವರ ಗುಡಿ ಇದೆ. ಅಲ್ಲಿಂದ ಮುಂದಕ್ಕೆ ನಡೆದಾಗ ದೇವಸ್ಥಾನದ ಪ್ರವೇಶ ದ್ವಾರ. ಅಲ್ಲಿಂದ ಮುಂದಕ್ಕೆ ಹೊರಾಂಗಣ ದಾಟಿ ಒಳ ನಡೆದಾಗ ದೇವರಿಗಭಿಮುಖವಾಗಿ ಕುಳಿತ ಬಸವನ ಗುಡಿ ಇದೆ. ಈಶ್ವರನ ದೃಷ್ಟಿಯು ದೂರ ಹೋಗದೆ ಅಲ್ಲೇ ನೆಲೆಸಿರಲೆಂದು ಗರ್ಭಗುಡಿಗೆ ಅಭಿಮುಖವಾಗಿ ಶಿವನ ವಾಹನ ನಂದಿಯನ್ನು ಪ್ರತಿಷ್ಠಾಪಿಸಿರುವರು. ಬಸವನ ಗುಡಿಯ ಬಲಬದಿಯಲ್ಲಿ ನಂದಿಗುಡಿ ಇದೆ. ಅಲ್ಲಿಂದ ಮುಂದಕ್ಕೆ ಗರುಡ ಕಂಬ.

ಒಳಾಂಗಣ ಪ್ರವೇಶಿಸಿದಾಗ ಗರ್ಭಗುಡಿಯಲ್ಲಿ ಹೂಗಳಿಂದ ಅಲಂಕೃತಗೊಂಡ ನಂಜುಂಡೇಶ್ವರನ ಲಿಂಗದ ದರ್ಶನ ಭಾಗ್ಯ ಲಭಿಸುವುದು.ಗರ್ಭಗುಡಿಯಲ್ಲಿ ಈಶ್ವರನ ಲಿಂಗದ ಮುಂದೆ ದೇವರಿಗಭಿಮುಖವಾಗಿ ನಂದಿಯ ಎರಡು ಮೂರ್ತಿಗಳಿವೆ. ಒಂದು ಶಿಲಾಮೂರ್ತಿ, ಇನ್ನೊಂದು ಕಂಚಿನ ಮೂರ್ತಿ. ಗರ್ಭಗುಡಿಯ ಬಲಭಾಗದಲ್ಲಿ ಗಣಪತಿ ಗುಡಿ, ಹಾಗು ಅದರ ಸಮೀಪದಲ್ಲಿ ಕನ್ನಂಬಾಡಿ ಅಮ್ಮನ ಗುಡಿ ಇದೆ. ಗರ್ಭಗುಡಿಯ ಎಡಭಾಗದಲ್ಲಿ ಶ್ರೀ ಸುಬ್ರಹ್ಮಣ್ಯನ ಗುಡಿ, ಬಸವೇಶ್ವರನ ಗುಡಿ ಮತ್ತು ದೇವಿರಮ್ಮನ ಗುಡಿ ಇದೆ. ಗರ್ಭಗುಡಿ ಎಡಭಾಗದಲ್ಲಿ ಶ್ರೀ ಸುಬ್ರಹ್ಮಣ್ಯನ ಗುಡಿ, ಬಸವೇಶ್ವರನ ಗುಡಿ ಮತ್ತು ದೇವಿರಮ್ಮನ ಗುಡಿ ಇದೆ. ಹೊರಾಂಗಣದಲ್ಲಿ ಗುಡಿಯ ಹಿಂಭಾಗದಲ್ಲಿ ಹಿಮ್ಮುಖವಾಗಿ ಪರಶುರಾಮನ ಗುಡಿ ಇದೆ. ದೇಗುಲದ ಹೊರ ಚಾವಣಿಯ ಮೇಲ್ಭಾಗದಲ್ಲಿ ಸುತ್ತಲೂ ಕುಳಿತಿರುವ ನಂದಿಯ ಹಲವಾರು ಸುಂದರ ಶಿಲಾಮೂರ್ತಿಗಳು ದೂರದಿಂದಲೇ ನಮ್ಮ ಕಣ್ಣುಗಳನ್ನು ಆಕರ್ಷಿಸುತ್ತವೆ.

ಪುರಾತನ ಕಾಲದಲ್ಲಿ ಈ ಭೂ ಪ್ರದೇಶದಲ್ಲಿ ವೀರಶೈವ ವಂಶಸ್ಥರು ಭೂಪಾಲಕರಾಗಿ ಆಡಳಿತ ನಡೆಸುತ್ತಿದ್ದರು. ವೀರಶೈವ ಸಾಮಂತರಾಜರಿಗೆ ಮಕ್ಕಳಿಲ್ಲದೆ ರೋಗಗ್ರಸ್ಥರಾಗಿದ್ದ ಸಮಯದಲ್ಲಿ ರಾಜಗುರುಗಳ ಮತ್ತು ಜಂಗಮರ ಮಾರ್ಗದರ್ಶನದಂತೆ ಶಿವದ್ಯಾನದೊಂದಿಗೆ ಶಿವನ ವ್ರತಾಚರಣೆ ಮಾಡಿದರು. ಶಿವನ ಅನುಗ್ರಹದಿಂದಾಗಿ ಅವರ ಕಾಯಿಲೆಗಳು ಗುಣವಾಗಿ ಅವರಿಗೆ ಸಂತಾನ ಭಾಗ್ಯ ಲಭಿಸಿತು. ಆಮೇಲೆ ಅವರು ಗುರುಗಳ, ಜಂಗಮರ ಆದೇಶದಂತೆ ವೀರಶೈವ ಶೈಲಿಯ ಶಿಲಾಮಯವಾದ ಶಿವಾಲಯವನ್ನು ನಿರ್ಮಿಸಿದರು. ಅಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿ, ಮಹಾರೋಗಾದಿಗಳನ್ನು ಶಮನಗೊಳಿಸಿದ ಭಗವಂತನಾದ್ದರಿಂದ ಶ್ರೀ ನಂಜುಂಡೇಶ್ವರನೆಂಬ ಹೆಸರಿನಿಂದ ಆರಾಧಿಸಿದರು. ಸಾಮಂತರಾಜರ ಆರಾಧ್ಯದೈವ ಭದ್ರಕಾಳಿಯ ಚೈತನ್ಯವನ್ನು ದಕ್ಷಿಣಾಭಿಮುಖವಾಗಿ ದೇವಾಲಯದ ಉತ್ತರ ಭಾಗದಲ್ಲಿ ಪ್ರತಿಷ್ಠಾಪಿಸಿದರು. ನಾಲ್ಕು ಕೈಗಳಿಂದ ಕೂಡಿದ ದೇವಿಯು ತ್ರಿಶೂಲ, ಡಮರು, ಕಪಾಲ ಹಿಡಿದು ಅಭಯ ಹಸ್ತಗಳಾಗಿರುವ ಭದ್ರಕಾಳಿ ಸ್ವರೂಪದ ವಿಗ್ರಹವು ವೀರರೌದ್ರ ರಸಗಳಿಂದ ಕೂಡಿದೆ.

ಮೊದಲು ಈ ದೇಗುಲದ ದ್ವಾರವು ದಕ್ಷಿಣಕ್ಕೆ ಇತ್ತೆನ್ನುವರು. ಈಗಲೂ ಆ ದ್ವಾರ ಮೆಟ್ಟಿಲುಗಳು ಹಾಗೆ ಇವೆ. ರಾಜರು ಈ ದೇವಾಲಯದ ಪೂಜಾ ವ್ಯವಸ್ಥೆಯನ್ನು ಪಶ್ಚಿಮಭಾಗದಲ್ಲಿರುವ ವೀರಶೈವ ಮಠದ (ಶಿವಾನಂದ ಮಠ) ಜಂಗಮರಿಗೆ ವಹಿಸಿಕೊಟ್ಟಿದ್ದರು. ಸಾಮಂತ ಭೂಪಾಲರು ಪ್ರವಾಸಿಗಳಾಗಿ ಹೋಗುವ ಸಂದರ್ಭದಲ್ಲಿ ಅವರ ಲೆಕ್ಕಪತ್ರ ನೋಡಿಕೊಳ್ಳುತ್ತಿದ್ದ ಪಟೇಲ ಮನೆತನದವರಿಗೆ ದೇವಸ್ಥಾನದ ಜವಬ್ದಾರಿಯನ್ನು ವಹಿಸಿಕೊಟ್ಟುಹೋದರು. ವೀರಶೈವ ವಂಶಸ್ಥರು ಆರಾಧಿಸುತ್ತಿದ್ದ ವೀರಭದ್ರ ಎಂಬ ಶಿವಸಾನಿಧ್ಯವು ಈ ಶಿವಾಲಯದ ವಾಯುವ್ಯದಲ್ಲಿರುವುದು. ಈ ಸಾನಿಧ್ಯಕ್ಕೆ ಸಾವಿರಾರು ವರ್ಷಗಳ ಇತಿಹಾಸವಿರುವುದೆನ್ನುವರು.

ಕಾಲಾಂತರದಲ್ಲಿ ಜೈನವರ್ಗದವರ ಆಕ್ರಮಣವಾಗಿ ಶೈವ- ವೈಷ್ಣವ ಯುದ್ಧ ಸಂಭವಿಸಿ ಈ ಪ್ರದೇಶವು ಜೈನ ವಂಶಸ್ಥರ ಪಾಲಾಯಿತು. ಯುದ್ಧದಲ್ಲಿ ವೀರಭದ್ರ ಕ್ಷೇತ್ರಕ್ಕೆ ಹಾನಿಯುಂಟಾಯಿತು. ಜೈನವರ್ಗದವರು ಈ ಕ್ಷೇತ್ರದ ಪಶ್ಚಿಮದಲ್ಲಿ ವೈಷ್ಣವಾಂಶ ಸಂಬಂಧವಾದ ಬಸದಿಯನ್ನು ನಿರ್ಮಿಸಿ ಆರಾಧಿಸುತ್ತಿದ್ದರು. ಆಮೇಲಿಂದ ಟಿಪ್ಪು ಸುಲ್ತಾನನ ಆಕ್ರಮಣವಾಗಲು ಜೈನವಂಶಸ್ಥರು ಈ ಪ್ರದೇಶವನ್ನು ಬಿಟ್ಟು ಹೊರನಡೆದರು. ಈ ಸಮಯದಲ್ಲಿ ಭದ್ರಕಾಳಿ ಸ್ವರೂಪದ ದೇವಿಯ ಶಿಲಾಬಿಂಬಕ್ಕೆ ಹಾನಿಯುಂಟಾಯಿತು.

ದೇವಾಲಯದ ಉತ್ತರ ಭಾಗದಲ್ಲಿ ವೀರಶೈವ ರಾಜರ ಕೋಟೆಯಿದ್ದು, ಅದರ ಸಮೀಪದಲ್ಲಿ ಹನುಮಂತನ ದೇವಾಲಯವಿತ್ತು. ಅದನ್ನು ಕೋಟೆ ಆಂಜನೇಯನೆಂದು ಕರೆಯುತ್ತಿದ್ದರು. ಆಕ್ರಮಣದ ಸಮಯದಲ್ಲಿ ಈ ದೇವಾಲಯವೂ ಹಾನಿಗೊಳಗಾಯಿತು. ಉತ್ತರ ಈಶಾನ್ಯ ದಿಕ್ಕಿನಲ್ಲಿ ಈ ಪ್ರದೇಶದ ಕಾವಲಿನ ದೇವತೆ ಪಟ್ಟಣದ ಅಮ್ಮನ ಸ್ಥಾನವಿದೆ. ಮೊದಲು ಸಮೀಪದಲ್ಲಿರುವ ಪಟ್ಟಣದಮ್ಮ ಚಾಮುಂಡಿ ಕ್ಷೇತ್ರಕ್ಕೆ ಇಲ್ಲಿಯ ಉತ್ಸವದ ಸಮಯದಲ್ಲಿ ಎತ್ತಿನಗಾಡಿಯಲ್ಲಿ ಅನ್ನವನ್ನು ತುಂಬಿಸಿಕೊಂಡು ಹೋಗಿ ಎಡೆ ಇಟ್ಟು ಎಲ್ಲಾ ಭಕ್ತರು ಸೇರಿ ಊಟ ಮಾಡಿ ಬರುತ್ತಿದ್ದರಂತೆ. ವಾಯುವ್ಯ ಉತ್ತರದಲ್ಲಿ ಮಾರಿಯಮ್ಮ ದೇವಿಯರ ಮರದ ಬಿಂಬವಿದೆ.

ಪುರಾತನ ಕಾಲದಲ್ಲಿ ಈ ದೇವಾಲಯದಲ್ಲಿ ಏಳು ದಿನಗಳ ಕಾಲ ಉತ್ಸವ ನಡೆಯುತ್ತಿತ್ತು. ವೀರಭದ್ರ ಕ್ಷೇತ್ರದಲ್ಲಿ ಕೆಂಡಸೇವೆ- ಅಗ್ನಿಸೇವೆ, ನಡೆಯುತ್ತಿತ್ತು. ಈಗ ಈ ಅಗ್ನಿಸೇವೆಯನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಡೆಸುತ್ತಿರುವರು. ಹಿಂದೆ ಉತ್ಸವದ ಸಮಯದಲ್ಲಿ ನಂಜುಂಡೇಶ್ವರನ ಸಂಕಲ್ಪದ ಬಸವನ ವಿಗ್ರಹವನ್ನು ಪಲ್ಲಕ್ಕಿಯಲ್ಲಿರಿಸಿ ಮೆರವಣಿಗೆ ಹೋಗಿ ಸಮೀಪದಲ್ಲಿರುವ ಕಾವೇರಿ ನದಿಯಲ್ಲಿ ಅವಭೃತ ಸ್ನಾನವಾಗಿ ಬರುವ ಕ್ರಮವಿತ್ತು. ಹೊಳೆಕರೆಯಲ್ಲಿ ನಂಜುಂಡೇಶ್ವರನ ಜಳಕದ ಕಟ್ಟೆಯಿತ್ತು.

ಕಾರ್ತಿಕ ಮಾಸದಲ್ಲಿ ಮತ್ತು ಚೈತ್ರ ಮಾಸದಲ್ಲಿ ಈ ದೇವಾಲಯದ ಉತ್ಸವ ಆಚರಿಸುವರು. ಚೈತ್ರಮಾಸದ ಉತ್ಸವದಲ್ಲಿ ನಂಜುಂಡೇಶ್ವರನ ಮತ್ತು ಕನ್ನಂಬಾಡಿಯಮ್ಮನ ಉತ್ಸವ ಮೂರ್ತಿಗಳನ್ನು ಬೇರೆ ಬೇರೆ ಪಲ್ಲಕಿಯಲ್ಲಿರಿಸಿ ಮೆರವಣಿಗೆ ಹೋಗಿ ಜಳಕವಾಗಿ ಬರುವರು. ಆ ಸಮಯದಲ್ಲಿ ವೀರಗಾಸೆಯ ನೃತ್ಯ, ಹಾಡು ಇರುವುದು.

ಕಾರ್ತಿಕಮಾಸದ ಉತ್ಸವದಲ್ಲಿ ಕನ್ನಂಬಾಡಿಯಮ್ಮನ ಕಲಶ ಹಾಗೂ ಮುಖವನ್ನು ಪಟೇಲರ ಮನೆಯಿಂದ ತಂದು ಕನ್ನಂಬಾಡಿಯಮ್ಮನ ವಿಗ್ರಹದ ಮುಂದಿರಿಸಿ ಉತ್ಸವದ ನಂತರ ಪುನಃ ಪಟೇಲರ ಮನೆಯಲ್ಲಿರಿಸುವರು. ಅವಭೃತ ಸ್ನಾನಕ್ಕೆ ಹೋಗುವಾಗ ಕನ್ನಂಬಾಡಮ್ಮನ ಕಲಶ ಹಾಗು ಮುಖವನ್ನು ಪಲ್ಲಕಿಯಲ್ಲಿರಿಸಿ ಮೆರವಣಿಗೆ ಹೋಗಿ ಜಳಕವಾಗಿ ಬರುವರು. ಆ ಸಮಯದಲ್ಲಿ ವೀರಗಾಸೆಯ ನೃತ್ಯ, ಹಾಡು ಇರುವುದು.

ಮೆರವಣಿಗೆ ಹೋಗುವಾಗ ಊರಬಾಗಿಲು ಹನುಮಂತನಲ್ಲಿ ಹಾಗು ಪಟ್ಟಣದ ಅಮ್ಮನಲ್ಲಿ ಪಲ್ಲಕಿ ಇರಿಸಿ ನೈವೇದ್ಯ ಮಾಡಿ ಜಳಕಕ್ಕೆ ಹೋಗುತ್ತಿದ್ದರು. ಈ ಕ್ಷೇತ್ರದಲ್ಲಿ ವರ್ಷಂಪ್ರತಿ ಚಾಂದ್ರಮಾನ ಯುಗಾದಿ, ಹುತ್ತರಿಗೆ ಕದಿರು ಕಟ್ಟುವುದು, ದೀಪಾವಳಿ, ಶಿವರಾತ್ರಿ, ಗಣೇಶ ಚತುರ್ಥಿ, ನವರಾತ್ರಿ, ಕಾರ್ತಿಕಮಾಸದ ದೀಪಾರಾಧನೆ ಆಚರಿಸಲಾಗುವುದು. ಅರ್ಚಕರು ಪ್ರತಿನಿತ್ಯ ಎರಡು ಹೊತ್ತಿನ ಪೂಜೆ ಮಾಡುವರು.

ಶಿವನಿಗೆ ಬೆಳಗ್ಗೆ ಹಾಲು ಪಾಯಸದ ನೈವೇದ್ಯ, ರಾತ್ರಿ ಕಲ್ಲು ಸಕ್ಕರೆಯ ನೈವೇದ್ಯ ಮಾಡುವರು. ಕೆಲವು ಸಮಯಗಳಲ್ಲಿ ಹಣ್ಣುಕಾಯಿ, ಅವಲಕ್ಕಿ ನೈವೇದ್ಯ ಮತ್ತು ಭಕ್ತರ ಮನೆಯಿಂದ ತಂದ ಭಕ್ಷ್ಯಗಳ ನೈವೇದ್ಯವನ್ನು ಸಹ ಮಾಡುವರು. ನಂಜುಂಡೇಶ್ವರದ ಪೂಜಿಸುವರು. ವರ್ಷಂಪ್ರತಿ ಎಂಟರಿಂದ ಹತ್ತು ಸಾವಿರದಷ್ಟು ಭಕ್ತರಿಗೆ ಅನ್ನ ನೀಡುವ ಕ್ಷೇತ್ರ ಇದಾಗಿದೆ.

ಜೈನವಂಶಸ್ಥರ ನಂತರದಲ್ಲಿ ಪಟೇಲರ ಮನೆತನದವರೆ ಕೊಡಗಿನ ಅರಸರ ಸಹಾಯದಿಂದ ದೇವಾಲಯವನ್ನು ಮತ್ತು ಭೂಮಿಯನ್ನು ಪಡೆದು ಪೂಜಾ ಕಾರ್ಯಗಳನ್ನು ನೆರವೇರಿಸಿಕೊಂಡು ಬರುತ್ತಿದ್ದರು. ದೇವಾಲಯಕ್ಕೆ ಅಂದಾಜು ಇಪ್ಪತೇಳು ಏಕರೆಯಷ್ಟು ಗದ್ದೆ ಇತ್ತೆನ್ನುವರು. ಪಟೇಲರ ಆಡಳಿತಾವಧಿಯಲ್ಲಿ ಅಪಾರವಾದ ದೇವಾಲಯಕ್ಕೆ ವರಮಾನವಿಲ್ಲದೆ ಹಲವಾರು ವರ್ಷಗಳವರೆಗೆ ಅಂದರೆ ಅಂದಾಜು ಎಪ್ಪತ್ತು ವರ್ಷಗಳ ದೀರ್ಘಾವಧಿವರೆಗೆ ದೇವಾಲಯವು ಪೂಜೆಯಿಲ್ಲದೆ ಅನಾಥ ಸ್ಥಿತಿಯಲ್ಲಿ ಪಾಳುಬಿದ್ದಿತ್ತು.

ಈ ಸಮಯದಲ್ಲಿ ರೋಗರುಜಿನಗಳು, ಸಾವು, ನೋವು ಸಂಕಟಗಳು ಹೆಚ್ಚಾಗತೊಡಗಿದವು. ಇದಕ್ಕೆಲ್ಲ ದೇವರ ಕೋಪವೇ ಕಾರಣವೆಂದು ಮನಗಂಡ ದೇವಾಲಯದ ಸುತ್ತಮುತ್ತಲಿನ ಕುಟುಂಬದವರು, ಪರಿಸರವಾಸಿಗಳು ದೇವರ ಪೂಜೆಯನ್ನು ಪುನಾಃರಂಭಗೊಳಿಸುವ ಯೋಜನೆ ಹಾಕಿಕೊಂಡರು. ಎಲ್ಲರೂ ಸೇರಿ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿ ಪೂಜಿಸಲು ಆರಂಭಿಸಿದರು. ದಾನಿಗಳ ಭಕ್ತರ ಸಹಾಯಾರ್ಥವಾಗಿ ಬರುವ ಕಾಣಿಕೆಗಳಿಂದ ದೇವಸ್ಥಾನದ ಅಭಿವೃದ್ಧಿ ಕಾರ್ಯವು ಭರದಿಂದ ಸಾಗುತ್ತಿರುವುದು. ಶ್ರೀಯುತ ಬಲ್ಲಡಿಚಂಡ ಮುರುಳಿ ಅವರು ಈ ಪುಣ್ಯಸ್ಥಳದ ಬಗ್ಗೆ ಮಾಹಿತಿ ನೀಡಿರುವರು.

## ನಗರಳ್ಳಿಯ ಸುಬ್ಬಮ್ಮದೇವಿ ಜಾತ್ರೆ

ಸೋಮವಾರಪೇಟೆಯ ನಗರಳ್ಳಿ ಗ್ರಾಮದಲ್ಲಿ ಸುತ್ತಲಿನ ೧೮ ಗ್ರಾಮದವರು ಸೇರಿ ಪ್ರತಿ ೧೨ ವರ್ಷಕ್ಕೊಮ್ಮೆ ನಡೆಸುವ ಹೆಮ್ಮಕ್ಕಳ ಸುಗ್ಗಿ (ಹೆಣ್ಣು ಮಕ್ಕಳ ಸುಗ್ಗಿ ಹಬ್ಬ) ಏಪ್ರಿಲ್ ನಲ್ಲಿ ನಡೆಯುತ್ತದೆ. ಪಶ್ಚಿಮ ಘಟ್ಟದ ಪುಷ್ಪಗಿರಿಯ ತಪ್ಪಲಿನಲ್ಲಿ ಹುದುಗಿರುವ ಅಪ್ಪ ಮಲೆನಾಡಿನ ಈ ಗ್ರಾಮಗಳಲ್ಲಿ ರಥೋತ್ಸವದಂತಹ ಆಚರಣೆಗಳು ವಿರಳ. ಬದಲಿಗೆ ಯುಗಾದಿ ಹಬ್ಬ ಕಳೆದ ಬಳಿಕ ಇಲ್ಲಿನ ಗ್ರಾಮೀಣ ಭಾಗದಲ್ಲಿ ಜಾನಪದ ಆಚರಣೆಯಾದ ಸುಬ್ಬಮ್ಮ ದೇವರ (ಲಕ್ಷ್ಮಿ ದೇವತೆ) ಸುಗ್ಗಿಯ ಹಬ್ಬವನ್ನು ವೈವಿಧ್ಯವಾಗಿ ಹಾಗೂ ಸಡಗರದಿಂದ ನಡೆಸಲಾಗುತ್ತದೆ. ಇವುಗಳಲ್ಲಿ ನಗರಳ್ಳಿ, ಕೂತಿ, ಯಡೂರು ಹಾಗೂ ಚೌಡ್ಲು ಮುಂತಾದ ಗ್ರಾಮಗಳಲ್ಲಿ ಆಚರಿಸುವ ಸುಗ್ಗಿಯ ಹಬ್ಬದ ಆಚರಣೆಗಳು ಪ್ರಮುಖವಾಗಿದೆ. ಅದರಲ್ಲಿಯೂ ನಗರಳ್ಳಿ ಗ್ರಾಮದ ಸುಗ್ಗಿಯ ಹಬ್ಬವು ಅನೇಕ ವಿಶಿಷ್ಟತೆಗಳನ್ನು ಹೊಂದಿದೆ. ಇಲ್ಲಿ ಪ್ರತಿ ೧೨ ವರ್ಷಗಳಿಗೊಮ್ಮೆ ಹೆಂಗಸರೆಲ್ಲಾ ಸೇರಿ ನರ್ತಿಸಿ ಸುಬ್ಬಮ್ಮನನ್ನು ಆರಾಧಿಸುವ ಮೂಲಕ ಹೆಮ್ಮಕ್ಕಳ ಸುಗ್ಗಿ ಆಚರಿಸುವ ಸಂಪ್ರದಾಯವನ್ನು ಅತಿ ಪುರಾತನ ಕಾಲದಿಂದಲೂ ನಡೆಸಿಕೊಂಡು ಬರಲಾಗುತ್ತದೆ. ಒಂದು ಬಾರಿ ಡಿಸೆಂಬರ್‌ನಲ್ಲಿ ಎಮ್ಮೆಯ ಸುಗ್ಗಿ ಎಂದು ಆಚರಣೆ ಮಾಡಲಾಗಿತ್ತು. ಇದರನ್ನು ಆಚರಿಸಿದರೆ ಏಪ್ರಿಲ್‌ನಲ್ಲಿ ಮಾಮೂಲಿಯಾದ ಸುಗ್ಗಿ ಹಬ್ಬ ಆಚರಿಸುವಂತಿಲ್ಲ. ಬದಲಿಗೆ ಇದನ್ನು ಹೆಮ್ಮಕ್ಕಳ ಸುಗ್ಗಿ ಎಂಬುದಾಗಿ ಆಚರಿಸುವುದು ಕ್ರಮವಾಗಿದೆ.

ಇದಾದ ನಂತರ ಮುಂದಿನ ವರ್ಷದ ಸುಗ್ಗಿಯನ್ನು ಮನೆದೇವರ ಹಬ್ಬವೆಂದು ಆಚರಿಸಿ, ಸುಗ್ಗಿ ಹಬ್ಬಕ್ಕೆ ಬಳಸುವ ಎಲ್ಲಾ ಸಾಮಗ್ರಿಗಳನ್ನು ಬದಲಾಯಿಸುವ ಪ್ರಕ್ರಿಯೆ ನಡೆಯುತ್ತದೆ. ಅಂದರೆ, ಸುಗ್ಗಿ ಹಬ್ಬದ ಸಾಮಗ್ರಿಗಳನ್ನು ಪ್ರತಿ ೧೨ ವರ್ಷಗಳಿಗೊಮ್ಮೆ ಬದಲಾಗಯಿಸಿ ಹೊಸತನ್ನು ತಯಾರಿಸಿ ಬಳಸಲಾಗುತ್ತದೆ. ಹೀಗೆ ಪ್ರತಿ ೧೨ ವರ್ಷಗಳಿಗೊಮ್ಮೆ ಎಮ್ಮೆಸುಗ್ಗಿ, ಹೆಣ್ಣು ಮಕ್ಕಳ ಸುಗ್ಗಿ ಹಾಗೂ ಮನೆದೇವರ ಹಬ್ಬದ ಆಚರಣೆಗಳನ್ನು ಆವರ್ತಿಯ ಪ್ರಕಾರ ನಡೆಸುತ್ತಾರೆ.

ಹೆಣ್ಣು ಮಕ್ಕಳ ಸುಗ್ಗಿಯ ದಿನ ಬೆಳಿಗ್ಗೆ ೬ಗಂಟೆಯಿಂದ ಸುಗ್ಗಿಯ ಕಂಬದ ಪ್ರದೇಶದಲ್ಲಿ ಕಾರ್ಯಕ್ರಮಗಳು ಆರಂಭವಾಗುತ್ತದೆ. ಇಲ್ಲಿರುವ ಎತ್ತರದ ಕಲ್ಲಿನ ಕಂಬದ ಮೇಲೆ ನಾಲ್ಕು ಕವಲುಗಳನ್ನು ಹೊಂದಿದ ಮರದ ತುಂಡನ್ನು ಹಾಕಿರುತ್ತಾರೆ. ಇದಕ್ಕೆ ಬೆತ್ತದ ಬಳ್ಳಿಗಳನ್ನು ಕೆಳಗೆ ತೂಗುಬಿಟ್ಟಿರುತ್ತಾರೆ. ಬಳ್ಳಿಯ ಕೆಳಭಾಗದ ತುದಿಗೆ ಮರದ ಮಣೆಗಳನ್ನು ಹಾಕಿರುತ್ತಾರೆ. ಈ ಮಣೆಗಳ ಮೇಲೆ ನಾಲ್ವರು ಅರ್ಚಕರು ಕೂತಿರುತ್ತಾರೆ. ಇವರನ್ನು ಗ್ರಾಮಸ್ಥರು ಕಂಬದ ಸುತ್ತ ಬೆತ್ತದ ಬಳ್ಳಿಯನ್ನು ಹಿಡಿದು ಸುತ್ತಿಸುತ್ತಾರೆ. ಇದಕ್ಕೆ ಊಲು ತೆಗೆಯುವುದು ಎನ್ನುತ್ತಾರೆ. ಇದಾದ ಬಳಿಕ ಇದರಿಂದ ಸ್ವಲ್ಪ ದೂರವಿರುವ ಕಾಡಿನಲ್ಲಿ ನಿರ್ದಿಷ್ಟವಾಗಿ ಗೊತ್ತುಮಾಡಿರುವ ಜಾಗವನ್ನು ಹೆಣ್ಣುಮಕ್ಕಳ ರಂಗವೆಂದು ಕರೆಯುತ್ತಾರೆ. ಈ ಸ್ಥಳಕ್ಕೆ ಸಾಲಂಕೃತರಾದ ಮಹಿಳೆಯರು ಕಲಶ ಹೊತ್ತು ಸಾಗುತ್ತಾರೆ. ಈ ಜಾಗವನ್ನು ೧೨ ಕಕ್ಕೆ ಮರದ ಕಂಬಗಳನ್ನು ವೃತ್ತಾಕಾರವಾಗಿ ಹೂಳಿ ಇದಕ್ಕೆ ಕಬಳಿ ಬಳ್ಳಿಯನ್ನು ೩ ಸುತ್ತು ಬರುವಂತೆ

ಕಟ್ಟುತ್ತಾರೆ. ಇದು ರಕ್ಷಿತ ಪ್ರದೇಶವಾಗಿದ್ದು ಕೇವಲ ಸ್ತ್ರೀಯರಿಗೆ ಮಾತ್ರ ಪ್ರವೇಶವಿರುತ್ತದೆ. ಕಳಶ ಹೊತ್ತ ಮಹಿಳೆಯರು ಬನದ ಸುತ್ತ ಪ್ರದಕ್ಷಿಣೆ ಬಂದು ದೇವರ ಹಾಡು ಹೇಳಿ ಕುಣಿಯುತ್ತಾರೆ. ಈ ಸುಗ್ಗಿ ಹಬ್ಬದಲ್ಲಿ ಹೆಣ್ಣು ಮಕ್ಕಳು ಮುಖ್ಯವಾಗಿರುವುದರಿಂದ ಇದನ್ನು ಹೆಮ್ಮಕ್ಕಳ ಸುಗ್ಗಿ ಎಂದು ಕರೆಯುತ್ತಾರೆ.

ಹದಿನೈದು ದಿನಗಳ ಮೊದಲೇ ಹಬ್ಬದ ವಿಧಿವಿಧಾನಗಳು ಆರಂಭಗೊಳ್ಳುತ್ತವೆ. ಗಡಿಜಾಗದಲ್ಲಿರುವ ಮತ್ತು ನೀರಿ ಬೆಟ್ಟ ಎಂಬ ಸ್ಥಳದಲ್ಲಿರುವ ದೇವರನ್ನು ಸುಗ್ಗಿ ಹಬ್ಬದ ಸ್ಥಳಕ್ಕೆ ಆಹ್ವಾನಿಸಿ ಕರೆತರುತ್ತಾರೆ. ಸುಗ್ಗಿಯ ರಂಗವನ್ನು ಶುದ್ಧಿಗೊಳಿಸುತ್ತಾರೆ. ಈ ಸಂದರ್ಭದಲ್ಲಿ ಉಪವಾಸ ಹಾಗೂ ಇತರ ಮಡಿ ಮೈಲಿಗೆ ನಿಯಮಗಳನ್ನು ಕಟ್ಟುನಿಟ್ಟಾಗಿ ಆಚರಿಸುತ್ತಾರೆ. ರಾತ್ರಿ ವೇಳೆ ಆಯಾ ಊರುಗಳಲ್ಲಿ ನಡೆಯುವ ಈ ಉತ್ಸವದಲ್ಲಿ ದೇವರ ಹಾಡು ಹೇಳುತ್ತಾ ಕೋಲಾಟವಾಡಿ ನರ್ತಿಸುತ್ತಾರೆ. ಮರುದಿನ ಸಿಹಿಯೂಟ ಮಾಡುತ್ತಾರೆ.

ಸುಗ್ಗಿಯ ಹಬ್ಬದಲ್ಲಿ ಗ್ರಾಮದ ಎಲ್ಲಾ ಜಾತಿಯ ಜನರೂ ಪಾಲ್ಗೊಳ್ಳುವರು. ಆಯಾ ಜಾತಿಯವರಿಗೆ ನಿರ್ದಿಷ್ಟವಾದ ಜವಾಬ್ದಾರಿ ವಹಿಸಿರುತ್ತಾರೆ. ಎಲ್ಲರೂ ಒಟ್ಟಾಗಿ ಕೆಲಸ ಮಾಡದಿದ್ದರೆ ಸುಗ್ಗಿಯ ಹಬ್ಬದ ಕಾರ್ಯಗಳು ಮುಂದುವರಿಯುವುದಿಲ್ಲ. ಹೀಗಾಗಿ ಸೌಹಾರ್ದತೆ ಬೆಳೆಸಲು ಈ ಹಬ್ಬ ಸಹಕಾರಿಯಾಗಿದೆ. ಇಲ್ಲಿ ಅರ್ಚಕರು ಎಂದು ನಾಲ್ವರನ್ನು ಗುರ್ತಿಸಲಾಗುತ್ತದೆ. ಇವರೆಲ್ಲರೂ ಗೌಡ ಜನಾಂಗಕ್ಕೆ ಸೇರಿದವರಾಗಿದ್ದಾರೆ. ಇದರ ಬಗ್ಗೆ ವಿವರವನ್ನು ಸರಸು ಎಂಬುವವರು ವಿವರ ನೀಡಿರುತ್ತಾರೆ.

**ಚೆಟ್ಟಳ್ಳಿಯ ಚೇರಳ ಶ್ರೀ ಭಗವತಿ ಉತ್ಸವ**

ಕೊಡಗಿನಲ್ಲಿ ಅದೆಷ್ಟೋ ದೇವಾನುದೇವತೆಗಳಿಗೆ ತಮ್ಮ-ತಮ್ಮ ನೆಲೆ ಕಟ್ಟಿನಲ್ಲಿ ವಿಶಿಷ್ಟ ಸಂಪ್ರದಾಯ, ಆಚರಣೆ, ಪದ್ಧತಿ ಪರಂಪರೆಯೊಂದಿಗೆ ಅಯಾಯ ಊರಿನವರು ವಾರ್ಷಿಕ ಉತ್ಸವವನ್ನು ಶ್ರದ್ಧಾಭಕ್ತಿಯಿಂದ ಸಂಪ್ರದಾಯಬದ್ಧವಾಗಿ ಆಚರಿಸಿಕೊಂಡು ಬರುತ್ತಿರುವುದನ್ನು ಕಾಣುತ್ತೇವೆ. ಅದರಂತೆ ಸೋಮವಾರಪೇಟೆ ತಾಲೂಕು ಚೆಟ್ಟಳ್ಳಿಯ ಚೇರಳ ಭಗವತಿ ದೇವಾಲಯದ ಉತ್ಸವದಲ್ಲಿನ ಸಂಪ್ರದಾಯವು ವಿಶಿಷ್ಟತೆಯಿಂದ ಕೂಡಿದ್ದು ಜೊತೆಗೆ ಕೊಂಬಾಟ್ ನೃತ್ಯವು ಮನಸೂರೆಗೊಳ್ಳುತ್ತದೆ. ಚೆಟ್ಟಳ್ಳಿ ಪಟ್ಟಣದಿಂದ ಸುಂಟಿಕೊಪ್ಪಕ್ಕೆ ಹೋಗುವ ದಾರಿಯಲ್ಲಿ ಮುಂದೆ ಸಾಗಿದಂತೆ ರಸ್ತೆಯ ಎಡಭಾಗದಲ್ಲಿ ದೇವರ ನಾಮಫಲಕವಿರುವ ಕಮಾನಿನೊಂದಿಗೆ ಸುಮಾರು ೧.೫೦ ಕಿಮಿ ಪಶ್ಚಿಮಾಭಿಮುಖವಾಗಿ ನಿಂತಂತ ದೇವಾಲಯವೇ ಈ ಚೇರಳ ಶ್ರೀ ಭಗವತಿ ದೇವಾಲಯ.

ಇಲ್ಲಿನ ಚೇರಳ ಶ್ರೀ ಭಗವತಿ ದೇವರಿಗೆ ಸುಮಾರು ೩೫೦ ಕ್ಕೂ ಹಳೆಯ ಇತಿಹಾಸವಿದ್ದು ಹಿಂದಿನ ಸಂಪ್ರದಾಯದಂತೆ ಈಗಲೂ ಕೂಡ ಪೂಜಾ ಸಂಪ್ರದಾಯಗಳು, ಹಬ್ಬ-ಹರಿದಿನಗಳನ್ನು ಊರಿನವರು ಶ್ರದ್ಧಾಭಕ್ತಿಯಿಂದ ಆಚರಿಸಿಕೊಂಡು ಬರುತ್ತಿದ್ದಾರೆ.

ಕೊಡಗಿನಲ್ಲಿ ನೆಲೆನಿಂತ ಪ್ರತಿಯೊಂದು ದೇವಾನುದೇವತೆಗಳಿಗೆಲ್ಲ ನೆಲೆನಿಂತ ಬಗ್ಗೆ ಅದರದೇ ಆದ ಇತಿಹಾಸವಿರುವಂತೆ ಇಲ್ಲಿನ ಚೇರಳ ಶ್ರೀ ಭಗವತಿ ದೇವರು ನೆಲೆನಿಂತ ಬಗೆಗಿನ ಇತಿಹಾಸವು ಒಂದು ವಿಶಿಷ್ಟತೆಯಿಂದ ಕೂಡಿದ್ದೆಂದು ಹಿರಿಯರು ಹೇಳುತ್ತಾರೆ.

ಚೇರಳದ ಊರಿನನಲ್ಲಿ ಬುಟ್ಟಿ ನೇಯುವ ವಾಟೆಯಿಂದ ಕೊಡೆಗಳನ್ನು ನೇಯುವ ಕೆಲಸವನ್ನು ಮಾಡುತ್ತಿದಂತಹ ಮೇದ ಜನಾಂಗದವರು ಒಮ್ಮೆ ಕಾಡಿನಿಂದ ವಾಟೆ ತರುತ್ತಿದ್ದಾಗ ಅದರಲ್ಲಿ ಚೇರಳ ಶ್ರೀ ಭಗವತಿಯು ನೆಲೆಗಾಗಿ ಬಂದಳೆಂದು ಆ ಸಮಯದಲ್ಲಿ ವಾಟೆಯಲ್ಲಿದ್ದ ಮುಳ್ಳು ಶ್ರೀ ಭಗವತಿಯ ಮೂಗನ್ನು ಕತ್ತರಿಸಿತು. ಆದರಿಂದ ಪೂರ್ವದಲ್ಲಿ ಉದಯಿಸುವ ಸೂರ್ಯ ದೇವನಿಗೆ ತನ್ನ ಮುಖವನ್ನು ತೋರಿಸಲಾಗದೆ ಚೇರಳ ಊರಿನಲ್ಲಿ ಪಶ್ಚಿಮಾಭಿಮುಖವಾಗಿ ನೆಲೆನಿಂತರಂತೆ. ಈ ವಿಚಾರವನ್ನು ಮೇದ ಜನಾಂಗದವರು ಚೇರಳದ ಊರಿನ ಅಮ್ಮಕೊಡವ ಕುಟುಂಬಸ್ಥರಾದ ಚೇರಳ ತಮ್ಮಂಡ ಕುಟುಂಬದವರನ್ನು ಹಾಗೂ ಕೊಂಗೇಟಿರ ಕುಟುಂಬಸ್ಥರಿಗೆ ತಿಳಿಸಿದರಂತೆ. ಅವರೆಲ್ಲ ದೇವರು ನೆಲೆ ನಿಂತಲ್ಲಿಗೆ ಧಾವಿಸಿ ಬಂದಾಗ ದೇವರು ಊರಿನ ಒಬ್ಬರಿಗೆ ಮೈಯಲ್ಲಿ ಬಂದು ಬಲಗೈಯಲ್ಲಿ ಚೇರಳತಮ್ಮಂಡ ಕುಟುಂಬದವರನ್ನು ಎಡಗೈಯಲ್ಲಿ ಕೊಗೆತೀರ ಕುಟುಂಬವರನ್ನು ಹಿಡಿದು ನನಗೆ ದೇವರ ನೆಲೆಯನ್ನು ಮಾಡಿ ಪೂಜೆ ಪುರಸ್ಕಾರಗಳನ್ನು ಸಂಪ್ರದಾಯವಾಗಿ ನೆಡೆಸಿಕೊಂಡು ಬಂದದ್ದೇ ಆದಲ್ಲಿ ಇಲ್ಲೆ ನೆಲೆ ನಿಂತು ಊರಿನವರಿಗೆಲ್ಲ ಒಳ್ಳೆಯದನ್ನು ಮಾಡುತ್ತಾ ನಿಮ್ಮನ್ನೆಲ್ಲ ಕಾಯುತೇನೆಂದು ತಿಳಿಸಿತಂತೆ. ಅದರಂತೆ ಸುತ್ತಲಿನ ಕುಟುಂಬಗಳು ಹಾಗೂ ಊರಿವರು ಮುಂದೆ ನಿಂತು ಕಾರ್ಯವನ್ನು ಮಾಡಲು ಸನ್ನದ್ಧರಾದ ಬಗ್ಗೆ ಹೇಳುತ್ತಾರೆ.

ಭಗವತಿ ದೇವಿಯ ಜೊತೆಗೆ ೨ ಸಹೋದರಿಯರು ಬಂದರು. ಅವರನ್ನು ಸದಾ ನೋಡುತ್ತಿರಬೇಕೆಂದು ಪಶ್ಚಿಮಾಭಿಮುಖವಾಗಿ ಹಿರಿಯ ಅಕ್ಕ ಚೇರಳ ಭಗವತಿಯು ನೆಲೆಸಿರುವಳು. ಎಂದು ಮತ್ತೊಂದು ಕಥೆಯೂ ಇದೆ. ಪುರಾತನ ದೇವಾಲಯವು ಮಣ್ಣಿನಿಂದ ದೇವಾಲಯದ ಗೋಡೆ ನಿರ್ಮಾಣ ಮಾಡಿ ಮೇಲ್ಛಾವಣಿಗೆ ಹುಲ್ಲು ಹಾಸಿನಿಂದ ಮಾಡಲಾಗಿ ನಂತರದ ಕೆಲವು ವರ್ಷಗಳಲ್ಲಿ ದೇವಾಲಯದ ಜೀರ್ಣೋದ್ಧಾರ ಕಾರ್ಯ ಮಾಡುತ್ತಾ ಬಂದು ಒಂದು ಉತ್ತಮವಾದ ದೇವಾಲಯದ ನಿರ್ಮಾಣವಾಗಿದೆ. ಈ ದೇವಾಲಯದ ಒಳಗೆ ನಾಗರಹುತ್ತ ಬೆಳೆದುನಿಂತಿದೆ. ದೇವಾಲಯದ ಮುಂದೆ ಬೊಳಕ್ ಮರವೆಂಬ ದೀಪದ ಕಂಬವನ್ನು ಇಡಲಾಗಿ ಎರಡೂ ಬದಿಗಳಲ್ಲಿ ಪವಳಿಯನ್ನು ನಿರ್ಮಿಸಲಾಗಿದೆ. ಕೊಡಗಿನಲ್ಲೇ ಅಪರೂಪವೆಂಬಂತೆ ಇಲ್ಲಿನ ಚೇರಳ ಭಗವತಿಯ ದೇವಾಲಯವು ಪಶ್ಚಿಮಾಭಿಮುಖವಾಗಿ ಕಾಣಬರುತ್ತದೆ.

ದೇವಾಲಯದ ಹಿಂದಿನ ಸಂಪ್ರದಾಯದಂತೆ ಕೊಡಗಿನ ಕುಂಬ್ಯಾರ್ ತಿಂಗಳ ಮೊದಲನೇ ವಾರ. ಅಂದರೆ ಊರಿನವರೆಲ್ಲ ಸೇರಿ ದೇವರ ಬೊಳಕ್ ಮರವನ್ನು ದುಡಿಕೊಟ್ ಹಾಡಿನೊಂದಿಗೆ ದೇವಾಲಯದ ಮುಂದೆ ನಿಲ್ಲಿಸಿ ದೇವರದೀಪವನ್ನು ಉರಿಸಿ ಬೊಳಕ್ ಮರ ಸುತ್ತ ಜಿಂಕೆಯ

ಕೊಂಬನ್ನಿಟ್ಟು ಪೂಜಿಸಿ ದೇವರ ಹಬ್ಬಕಟ್ ಬೀಳುವುದು. ಹಬ್ಬದ ಕಟ್ಟಿನ ನಿಯಮದಂತೆ ಅಯ್ಯಪ್ಪದೇವರ ಬನ (ಕಾಡಿನಲ್ಲಿ) ದೇವರಿಗೆ ಪೂಜೆ ಸಲ್ಲಿಸುವವರೆಗೆ ಗುಂಡು ಹೊಡೆಯಬಾರದು, ಬೇಟೆಯಾಡಬಾರದು, ಮರ ಕಡಿಯಬಾರದು, ಒಣಮರವನ್ನು ಕೂಡಾ ಮುರಿಯಬಾರದು, ಹೊರ ಊರಿಗೆ ಹೋಗಬಾರದು, ಹೊರ ಊರಿಗೆ ಹೋದದ್ದೇ ಆದಲ್ಲಿ ಏನನ್ನು ಕುಡಿಯ ಹಾಗೂ ತಿನ್ನಬಾರದು, ಮುಟ್ಟಾದ ಹೆಂಗಸರು ಹಬ್ಬ ಕಳೆಯುವವರೆಗೆ ಊರಿನಲ್ಲಿ ಇರಕೂಡದ್ದು ಎಂಬೆಲ್ಲ ಕಟ್ಟುನಿಟ್ಟಿನ ನಿಯಮ. ಊರಿನ ಪುರುಷರು ಹಬ್ಬದ ಕಟ್ಟು ಬಿದ್ದಲ್ಲಿಂದ ದೇವಾಲಯದಲ್ಲಿ ಬೆಳಿಗ್ಗೆ ಜಿಂಕೆಯ ಕೊಂಬನಿಡಿದು. ದೇವರ ದೀಪದ ಮುಂದೆ ಮೇದರ ಕೊಟ್ಟಿಗೆ ಸರಿಯಾಗಿ ಕೊಂಬಾಟ್ ನೃತ್ಯವನ್ನು ಮಾಡಿ ಮನೆಗೆ ತೆರಳುವರು.

ಊರಿನವರು ಅಯ್ಯಪ್ಪ ದೇವರ ಪ್ರಸಾದವನ್ನು ಸ್ವೀಕರಿಸಿ ದೇವಾಲಯಕ್ಕೆ ಬಂದು ತೆಂಗಿನಕಾಯಿಗೆ ಗುಂಡು ಹೊಡೆಯುವರು ಅಲ್ಲಿಗೆ ದೇವರ ಕಟ್ಟು ಮುಗಿಯುವುದು. ಅಂದು ಬಿಳಿಕುಪ್ಪಸ ದಟ್ಟಿಯನ್ನು ತೊಟ್ಟಂತ ಊರಿನವರೆಲ್ಲ ಒಡ್ಡೋಲಗ ದುಡಿಕೊಟ್ ಹಾಡಿನೊಂದಿಗೆ ದೇವತಕ್ಕರ ಮನೆಯಾದ ಚೇರಳತಮ್ಮಂಡ ಆನಂದರವರ ಮನೆಯಿಂದ ಭಂಡಾರವನ್ನು ದೇವಾಲಯಕ್ಕೆ ತಂದು ದೇವಾಲಯದ ವಿಧಿ ವಿಧಾನಗಳನ್ನು ಸಂಪ್ರದಾಯಬದ್ಧವಾಗಿ ಪೂಜೆ-ಪುನಸ್ಕಾರ ಮಾಡಿ ನೆಂಟರಿಷ್ಟರಿಗೆ, ಮಕ್ಕಳ ತೆಂಗಿನಕಾಯಿ ಎಳೆಯುವ ಸ್ಪರ್ಧೆ ಏರ್ಪಡಿಸಲಾಗುವುದು. ಸಂಪ್ರದಾಯದ ಬಳಿ ಕುಪ್ಪಸದಟ್ಟಿಯನ್ನು ಧರಿಸಿದ ಊರಿನವರು ದೇವರ ನಡೆಗೆ ಬಂದು ದೇವಾಲಯದಲ್ಲಿ ಇಟ್ಟಂತೆ ಕೊಂಬನ್ನು ಹಿಡಿದು ಬೊಳಕ್ ಮರದ ಮುಂದೆ ಸಾಲಾಗಿ ಬಂದು ದೇವಾಲಯದ ಬಲಭಾಗದಲ್ಲಿ ಕೆಂಪು ವಸ್ತ್ರಧಾರಿಯಾಗಿ ನಿಂತ ಮೇದರ ಕೊಟ್ಟಿಗೆ ೧೮ ತರಹದ ವಿಶೇಷಕರವಾದ ಕೊಂಬಾಟ್ ನೃತ್ಯವನ್ನು ಕುಣಿದರು. ಅಂದು ದೇವರ ಹಬ್ಬಕ್ಕೆ ಬಂದಂತ ಊರಿನವರು, ನೆಂಟರಿಷ್ಟರು, ಮದುವೆಯಾಗಿ ಹೋದ ಆ ಊರಿನ ಹೆಣ್ಣು ಮಕ್ಕಳು, ಹರಕೆ ಹೊತ್ತವರು ದೇವರಿಗೆ ಭಂಡಾರವನ್ನು ಹಾಕಿ ದೇವರ ಆಶೀರ್ವಾದವನ್ನು ಪಡೆದು ದೇವರ ಪ್ರಸಾದ ಊಟೋಪಚಾರದೊಂದಿಗೆ ತೆರಳುವರು.

ನಂತರದಲ್ಲಿ ಊರಿನವರು ದೇವರ ಭಂಡಾರವನ್ನು ಒಡ್ಡೋಲಗದೊಂದಿಗೆ ದೇವತಕ್ಕರಾದ ಚೇರಳತಮ್ಮಡ ಆನಂದರವರ ಮನೆಗೆ ತೆರಳಿ ಭಂಡಾರವನ್ನಿಡುವರು. ದೇವಾಲಯಕ್ಕೆ ಸಂಬಂಧಿಸಿದ ತೆರಿಗೆಯ ನಿಯಮವಿದ್ದು ದೇವರ ಈ ಎಲ್ಲಾ ಕಾರ್ಯಕ್ರಮಕ್ಕೆ ಕೊಡವ, ಅಮ್ಮಕೊಡವ ಗೌಡ ಜನಾಂಗದವರೆಲ್ಲ ಸೇರಿ ದೇವಕಾರ್ಯವನ್ನು ತಲತಲಾಂತರದಿಂದ ನೆಡೆಸಿಕೊಂಡು ಬರುತ್ತಿದ್ದಾರೆ. ಹಬ್ಬದ ಕಟ್ಟು ಬಿದ್ದಲ್ಲಿಂದ ದೇವಾಲಯಕ್ಕೆ ಸಂಬಂಧಿಸಿದ ಮೇದರು ಡೋಲಿನ ಕೊಟ್ಟಿನೊಂದಿಗೆ ತಕ್ಕರ ಹಾಗೂ ಊರಿನವರ ಮನೆಮನೆಗೆ ತರಳಿದಾಗ ಮನೆಯವರೆಲ್ಲ ದೇವರಿಗೆ ದೀಪವಿಟ್ಟು ಅಕ್ಕಿ,ಬೆಲ್ಲ, ತೆಂಗಿನಕಾಯಿ ನೀಡುವ ಸಂಪ್ರದಾಯವಿದೆ. ಈ ದೇವಾಲಯದಲ್ಲಿ ೫ ವರ್ಷಗಳಿಗೊಮ್ಮೆ ದೇವರ ಹಬ್ಬವಾದ ನಂತರ ಭಗವತಿ, ಅಯ್ಯಪ್ಪ, ಚಾಮುಂಡಿ ದೇವರುಗಳಿಗೆ ೫ ಮೂರ್ತಿ ಕೋಲನ್ನು ನಡೆಸುವ ಸಂಪ್ರದಾಯ ಈಗಲೂ ನಡೆದು ಬರುತ್ತಿದೆ.ಈ ವಿವರಣೆಯನ್ನು ಸರಸು ಎಂಬುವವರು ನೀಡಿರುತ್ತಾರೆ.

**ಮಳೆ ಮಲ್ಲೇಶ್ವರ ಜಾತ್ರೆ**

ಶನಿವಾರ ಸಂತೆಯಿಂದ ೧೨ ಕಿ.ಮೀ ದೂರದ ಮಾಲಂಬಿ ಬೆಟ್ಟದಲ್ಲಿರುವ ಮಳೆ ಮಲ್ಲೇಶ್ವರ ದೇವಾಲಯದಲ್ಲಿ ಪ್ರತಿವರ್ಷ ಮಹಾಶಿವರಾತ್ರಿಯಂದು ಜಾತ್ರೆ ಜರುಗುತ್ತದೆ.

ಕೊಡಗಿನ ಏಳು ಸಾವಿರ ಸೀಮೆಬೆಟ್ಟ ಸಾಲುಗಳಲ್ಲಿ ಮಾಲಂಬಿ ಬೆಟ್ಟ ಮೂರನೇ ಅತಿ ಎತ್ತರವಾದ ಬೆಟವೆನಿಸಿದೆ. ಕೊಡಗಿನ ಬೆಟ್ಟ ಸಾಲಿನಲ್ಲಿ ಬರುವ ಈ ಸ್ಥಳ ಐತಿಹಾಸಿಕ ಮಹತ್ವ ಪಡೆದಿದೆ. ಈ ಬೆಟ್ಟ ಜಾತ್ರೆಗೆ ಮಾತ್ರವಲ್ಲ ಪ್ರವಾಸೋದ್ಯಮ ದೃಷ್ಟಿಯಿಂದಲೂ ಮಹತ್ವ ಪಡೆದಿದ್ದು ಚಾರಣಿಗರಿಗೆ ಅತ್ಯಂತ ಪ್ರಿಯವಾದ ತಾಣವಾಗಿದೆ. ೫೪೫೪ ಅಡಿಎತ್ತರದ ಇದರ ತುದಿಗೆ ಹೋಗಿ ನಿಂತರೆ ಸುತ್ತಲಿನ ಕಾಫಿ ತೋಟದ ಐಸಿರಿ ಮನತಣಿಸುತ್ತದೆ. ಬೆಟ್ಟದ ತುದಿಯಲ್ಲಿ ಕಟ್ಟಿರುವ ಮಳೆ ಮಲ್ಲೇಶ್ವರ ದೇವಾಲಯ ಬೆಟ್ಟಕ್ಕೆ ಕಿರೀಟವಿಟ್ಟಂತೆ ಕಂಗೊಳಿಸುತ್ತದೆ.

೧೮೩೦ರಿಂದ ಮಾಲಂಬಿ ಬೆಟ್ಟದ ಮೇಲೆ ಮಳೆಮಲ್ಲೇಶ್ವರನಿಗೆ ಪೂಜಾ ಕಾರ್ಯಗಳನ್ನು ಕೈಗೊಳ್ಳಲಾಗುತ್ತಿದೆ. ಕೊಡಗನ್ನು ವೀರಶೈವ ದೊರೆಗಳು ಆಳಿದ ಕಾರಣ ಶಿವನ ಆರಾಧನೆಯೇ ಇಲ್ಲಿ ಅಧಿಕವಾಗಿದೆ. ಮಳೆ ಮಲ್ಲೆಶ್ವರ ಗುಡಿ ಕೂಡ ಇದರಲ್ಲಿ ಒಂದು.

ಹಿಂದೊಮ್ಮೆ ಜಿಲ್ಲೆಯಲ್ಲಿ ಭೀಕರ ಕ್ಷಾಮ ಆವರಿಸಿಕೊಂಡಾಗ ಹಾಸನ ಜಿಲ್ಲೆಯ ಅರಕಲಗೂಡಿನಿಂದ ಶಿವನು ಮಲ್ಲೇಶ್ವರಕ್ಕೆ ಬಂದು ನೆಲೆಸಿದ ಎಂಬುದು ಪುರಾಣದ ಕಥೆ. ಆಗ ಮಳೆಯಾಗಿದ್ದರಿಂದ ಈ ದೇವರಿಗೆ ಮಳೆ ಮಲ್ಲೇಶ್ವರ ಎಂಬ ಹೆಸರು ಬಂದಿತೆಂಬ ಪ್ರತೀತಿ ಇದೆ. ಹೀಗಾಗಿ ಮಹಾಶಿವ ರಾತ್ರಿಯಂದು ಇಲ್ಲಿ ಅತ್ಯಂತ ಭಕ್ತಿಪೂರ್ವಕವಾಗಿ ಜಾತ್ರೆ ಮೈಳೇಸುತ್ತದೆ. ಸಾವಿರಾರು ಭಕ್ತರು ನೆರೆಯ ಜಿಲ್ಲೆಗಳಿಂದ ಬಂದು ಜಾತ್ರೆಯಲ್ಲಿ ಧಾರ್ಮಿಕ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ. ಈ ಜಾತ್ರೆಯಲ್ಲಿ ಸಾರ್ವಜನಿಕರಿಂದ ಹಾಗೂ ಕಾಲೇಜು ವಿದ್ಯಾರ್ಥಿಗಳಿಂದ ಹಲವಾರು ಸಾಂಸ್ಕೃತಿಕ ಕಾರ್ಯವನ್ನು ಹಮ್ಮಿಕೊಳ್ಳಲಾಗುತ್ತದೆ. ಜನರಿಗೆ ಮನರಂಜನೆ ಉಂಟಾಗುತ್ತದೆ. ಹಾಗೆಂದು ಜಾತ್ರೆಯ ದಿನ ಈ ಜಾತ್ರೆಯ ಸಮಿತಿಯಿಂದ ಭಕ್ತರಿಗೆ ಅನ್ನ ಸಂತರ್ಪಣೆ ವ್ಯವಸ್ಥೆ ನೆರವೇರಿಸಿ ಎಲ್ಲರೂ ಜಾತ್ರೆಯಲ್ಲಿ ಭಕ್ತಿಪೂರ್ವಕವಾಗಿ ಪಾಲ್ಗೊಳ್ಳುತ್ತಾರೆ. ಈ ಜಾತ್ರೆಯ ಬಗ್ಗೆ ಮಾಹಿತಿಯನ್ನು ದಿ:೪-೩-೨೦೧೯ರಂದು ಪ್ರಕಟವಾದ ಶಕ್ತಿ ದಿನಪತ್ರಿಕೆಯಿಂದ ಪಡೆದುಕೊಳ್ಳಲಾಗಿದೆ.

**ಗವಿಸಿದ್ದೇಶ್ವರ ಜಾತ್ರೆ**

ಕೊಡಗಿನ ಗಡಿಭಾಗವಾದ ಬೆಸೂರು ಪಂಚಾಯ್ತಿ ವ್ಯಾಪ್ತಿಯ ಅಗಳಿ ಗ್ರಾಮದಲ್ಲಿ ಇತಿಹಾಸ ಪ್ರಸಿದ್ಧ ಗವಿ ಸಿದ್ದೇಶ್ವರ ಜಾತ್ರೆ ಪ್ರತಿವರ್ಷ ಮಹಾಶಿವರಾತ್ರಿಯಂದು ನಡೆಯುತ್ತದೆ. ಈ ಜಾತ್ರೆಗೆ ಸಾವಿರಾರು ಭಕ್ತರು ಭಾಗವಹಿಸುವುದು ಜಾತ್ರೆಗೆ ಮತ್ತಷ್ಟು ಮೆರಗು ಉಂಟಾಗುತ್ತದೆ.

'ಸುಮಾರು ೫೦೦ ವರ್ಷಗಳ ಹಿಂದೆ ವೀರರಾಜನ ಆಳ್ವಿಕೆ ಕಾಲದಲ್ಲಿ ಈ ಸ್ಥಳಕ್ಕೆ ಮುಳ್ಳೂರು ಎಂಬ ಹೆಸರಿತ್ತಂತೆ. ಗ್ರಾಮದಲ್ಲಿ ಕೇವಲ ಐವರು ಶಿವಶರಣರ ಮನೆಗಳು ಇದ್ದು, ಗೊಂಡಾರಣ್ಯದಂತಿದ್ದ ಈ ಗ್ರಾಮದಲ್ಲಿ ಗವಿಸಿದ್ದೇಶ್ವರ ಎಂಬ ಸಾಧು ಬೃಹದಾಕಾರದ ಗವಿಯೊಳಗೆ ವಾಸವಾಗಿದ್ದು, ತಪಸ್ಸು ಭಿಕ್ಷಾಟನೆ ಮಾಡುತ್ತಲೇ ಮೃತನಾದನಂತೆ.

ರಾಜವೀರರಾಜ ತನ್ನ ಆಳ್ವಿಕೆ ಕಾಲದಲ್ಲಿ ಒಂಮೆ ಅವನ ದಳಪತಿ ಈ ಗುಹೆಯೊಳಗೆ ಮಲಗಿದ್ದಾಗ ಅವನಿಗೆ ಕನಸಿನಲ್ಲಿ ಇಲ್ಲಿ ನನಗೊಂಡು ಕೊಳವನ್ನು ನಿರ್ಮಿಸು ನಿನಗೂ ಸೈನ್ಯಕ್ಕೂ ಹಾಗೂ ನಿನ್ನ ರಾಜವಂಶಕ್ಕೂ ಒಳ್ಳೆಯದಾಗುತ್ತದೆ. ಎಂಬ ವಾಣಿ ಕೇಳಿ ಬಂದಿತಂತೆ. ಈ ವಿಚಾರವನ್ನು ರಾಜ, ವೀರರಾಜನಿಗೆ ತಿಳಿಸಿದಾಗ ಆತನು ಈ ಗುಹೆಗೆ ಬಂದು ಮಲಗಿದಾಗ ಆತನಿಗೆ ಶಿವಲಿಂಗ ಕಾಣಿಸಿಕೊಂಡಿ ತಂತೆ ಕೂಡಲೇ ರಾಜನ ಆಜ್ಞೆಯಂತೆ ಸೈನ್ಯವು ಒಂದೇ ರಾತ್ರಿಯಲ್ಲಿ ಕೊಳ ನಿರ್ಮಿಸಿತು ಎಂಬುದು ಇಲ್ಲಿಯ ಜನರ ನಂಬಿಕೆ. ಈ ಕೊಳಕೆ ದಂಡಿನ ಭಾವಿ ದಳವಾಯಿಕೆರೆ ಎಂದು ನಾಮಕರಣ ಮಾಡಲಾಗಿದೆ.

ಈ ಕೊಳದಲ್ಲಿ ಪ್ರತಿ ಅಮಾಸ್ಯೆ ಕೃಷ್ಣ ಪಕ್ಷದ ಮಧ್ಯರಾತ್ರಿಯಲ್ಲಿ ಶಂಖ ಮತ್ತು ಜಾಗಟೆಯ ಸದ್ದು ಕೇಳಿ ಬರುತ್ತಿತ್ತು. ಇದು ಭಗವಂತ ತಾವಿರುವ ಗೋಚರವನ್ನು ಭಕ್ತರಿಗೆ ತೋರಿಸುತ್ತಿದ್ದನೆಂದು ಇಲ್ಲಿನ ಸ್ಥಳೀಯ ಪ್ರಬಲ ನಂಬಿಕೆ. ೧೯೮೪ ರಲ್ಲಿ ಅರಣ್ಯ ಇಲಾಖೆಯ ನರ್ಸರಿ ಬೆಳೆಸಲು ಹೊಸ ತೇಗದ ಕಾಡನ್ನು ನಿರ್ಮಿಸಲು ಕೊಳದ ನೀರನ್ನು ಸಂಪೂರ್ಣವಾಗಿ ಖಾಲಿ ಮಾಡಿದ ಮೇಲೆ ಶಂಖ, ಜಾಗಟೆ, ಶಬ್ದ ನಿಂತು ಹೋಗಿದೆ ಎಂದು ಹೇಳುತ್ತಾರೆ. ಇಲ್ಲಿನ ಬಂಡೆಗಲ್ಲಿನ ಮೇಲೆ ಮೂರ್ತಿ ಕೆತ್ತನೆ ಇದ್ದು ಇದು ಗವಿಸಿದ್ದೇಶ್ವರ ದೇವರೆಂದು ಅಲ್ಲಿ ಗ್ರಾಮಸ್ಥರು ಗ್ರಾಮ ಪಂಚಾಯಿತಿಯವರೆಲ್ಲ ಸೇರಿ ಪ್ರತಿವರ್ಷ ಶಿವರಾತ್ರಿಯಂದು ಗವಿಸಿದ್ದೇಶ್ವರ ಜಾತ್ರೆಯನ್ನು ನೆರವೇರಿಸಿ ಹಲವಾರು ಧಾರ್ಮಿಕ ಆಚರಣೆಗಳನ್ನು ನೆರವೇರಿಸಿಕೊಂಡು ಬರುತ್ತಿದ್ದಾರೆ. ಈ ವಿಚಾರವನ್ನು ಶಕ್ತಿ ದಿನಪತ್ರಿಕೆಯಲ್ಲಿ ನರೇಶ್ಚಂದ್ರ ಎಂಬುವವರು ಪ್ರಕಟಿಸಿರುತ್ತಾರೆ.

### ಶ್ರೀ ಗುರು ಸಿದ್ದವೀರಸ್ವಾಮಿ ಜಾತ್ರೆ

ಈ ಜಾತ್ರೆಯು ಸೋಮವಾರಪೇಟೆ ತಾಲೂಕಿನ ಅಂಕನಹಳ್ಳಿ ಸಮೀಪ ಇರುವ ಶ್ರೀ ಕ್ಷೇತ್ರ ಮನೆಹಳ್ಳಿ ತಪೋವನದಲ್ಲಿ ಮೂರು ದಿನಗಳ ಕಾಲ ಬಹಳ ಭಕ್ತಿ ಪೂರ್ವಕವಾಗಿ ಜರುಗುತ್ತದೆ. ಗುರುಸಿದ್ದ ವೀರಸ್ವಾಮಿ ಎಂಬುವವರು ಈ ಮಠದ ಮಠಾಧೀಶ್ವರರಾಗಿದ್ದು, ಮರಣ ನಂತರ ಇವರನ್ನು ಇಲ್ಲಿನ ಜನರು ದೇವರೆಂದು ಭಾವಿಸಿದ್ದು ಇವರ ಹೆಸರಿನಲ್ಲಿ ಕಳೆದ ಏಳುವರ್ಷಗಳಿಂದ ಜಾತ್ರೆಯನ್ನು ನಡೆಸಿಕೊಂಡು ಬರುತ್ತಿದ್ದಾರೆ.

'ಮಠದ ಆವರಣದಲ್ಲಿ ಧ್ವಜಾರೋಹಣ ಮಾಡುವ ಮೂಲಕ ಪ್ರತಿವರ್ಷ ಜಾತ್ರೆಗೆ ವಿಧ್ಯುಕ್ತ ಚಾಲನೆ ನೀಡಲಾಗುತ್ತದೆ. ಇಲ್ಲಿ ನಡೆಯುವ ಮೂರು ದಿನಗಳ ಜಾತ್ರೆಯಲ್ಲಿ ಕಂಕಣಧಾರಣ,

ಜಂಗಮಪೂಜೆ, ಮಂಡಲೋತ್ಸವ, ಅಗ್ನಿಕೊಂಡೋತ್ಸವ, ಅಡ್ಡಪಲ್ಲಕ್ಕಿ ಉತ್ಸವ, ಹಾಗೆಯೇ ರಥೋತ್ಸವ ಎಂಬ ಹಲವಾರು ಧಾರ್ಮಿಕ ಆಚರಣೆ ಭಕ್ತಿಪೂರ್ವಕವಾಗಿ ನಡೆಯಲಾಗುತ್ತದೆ. ಅಲ್ಲದೆ ಇಲ್ಲೆ ನೆಲೆನಿಂತಿರುವ ತಪೋವನೇಶ್ವರಿ ಅಮ್ಮನವರಿಗೆ ಪ್ರೀತ್ಯರ್ಥ ಮುತ್ತೈದೆ ಸೇವೆಯ ಪ್ರಯುಕ್ತ ಇಲ್ಲಿ ನೆರೆದಿರುವ ಮುತ್ತೈದೆಯರಿಗೆ ಮಡಿಲು ತುಂಬು ಕಾರ್ಯಕ್ರಮವನ್ನು ನಡೆಸಲಾಗುತ್ತದೆ.

ಗುರುಸಿದ್ದವೀರಸ್ವಾಮಿಯವರ ಮೂರ್ತಿಯನ್ನು ಅಡ್ಡಪಲ್ಲಕ್ಕಿಯಲ್ಲಿಟ್ಟು ಮೆರವಣಿಗೆ ಮಾಡಿಸಲಾಗುತ್ತದೆ. ಹಾಗೆಯೇ ರಥವನ್ನು ಎಳೆಯಲಾಗುತ್ತದೆ. ಹೀಗೆ ಇಲ್ಲಿ ಸುತ್ತಮುತ್ತಲಿನ ಹಲವಾರು ಗ್ರಾಮದ ಭಕ್ತರು ಹಾಗೂ ಮಠದ ಎಲ್ಲಾ ಸದಸ್ಯರ ಸಮ್ಮುಖದಲ್ಲಿ ಮೂರು ದಿನಗಳ ಕಾಲ ಇಲ್ಲಿ ಜಾತ್ರೆಯು ಜರುಗುತ್ತದೆ. ಈ ವಿಚಾರವನ್ನು ಸ್ಥಳೀಯರಿಂದ ಹಾಗೂ ಶಕ್ತಿ ದಿನಪತ್ರಿಕೆಯಿಂದ ಸಂಗ್ರಹಿಸಲಾಗಿದೆ.

## ೪.೪ ಭೂತಾರಾಧನೆ

ಕೊಡಗಿನಲ್ಲಿ ಕೊಡವರು ಒಕ್ಕಕ್ಕೆ ಒಂದು 'ಪೂದ'ವನ್ನು ಹೊಂದಿದ್ದು ಅದನ್ನು ಆರಾಧಿಸುತ್ತಾರೆ. 'ಪೂದ' ಎಂದರೆ ಭೂತ ಎಂಬ ಅರ್ಥವದು. ಅತಿ ಮಾನುಷ ಶಕ್ತಿಗಳು ಗತಿಸಿದ ಹಿರಿಯರು ದೈವಾಂಶ ಸಂಭೂತರನ್ನು ಭೂತ ಎಂಬ ಹೆಸರಿನಿಂದ ಕರೆದು ಪೂಜಿಸುತ್ತಾರೆ. ಗುಳಿಗ, ಪಾಷಾಣಮೂರ್ತಿ ವಿಷ್ಣುಮೂರ್ತಿ ಚೌಂಡಿ(ಚಾಮುಂಡಿ), ಪಂಜುರ್ಲಿ ಮುಂತಾದ ಭೂತಗಳನ್ನು ಆರಾಧಿಸುವರು. ಅವುಗಳು ನೀಡುವ ತೊಂದರೆಯಿಂದ ತಪ್ಪಸಿಕೊಳ್ಳಲು ಈ ಭೂತಗಳಿಗೆ ಬಲಿಯನ್ನು ನೀಡುತ್ತಾರೆ. ಈ ಭೂತಗಳನ್ನು ಮೈಮೇಲೆ ಆವಾಹನೆ ಮಾಡಿಕೊಂಡು ಬಣ್ಣರು, ಪರ್ಣರು ಭಕ್ತರ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸುತ್ತಾರೆ. ಕೇರಳದ 'ತಯ್ಯಂ' ಪ್ರಭಾವ ಕೊಡಗಿನಲ್ಲಿ ಆಗಿದ್ದು, ಕೊಡವರಲ್ಲೂ ಮಹತ್ವದಾಗಿದೆ. ಈ ಭೂತಗಳ ಕೋಲಗಳನ್ನು ಕಟ್ಟುವರೆ ಕೇರಳ ಮೂಲದ ಫಣಿತರು ಮತ್ತು ಬಣ್ಣಜನಾಂಗದವರು. ಭೂತದ ನುಡಿ ಮತ್ತು ಹಾಡುಗಳು ಮಲಯಾಳು ಭಾಷೆಯಲ್ಲಿಯೇ ಇರುತ್ತವೆ. ನರಿಪೊದ ಪಿಲಿ ಚಾಮುಂಡಿ ಭೂತದ ಕೋಲವನ್ನು ಬಣ್ಣರು ಮತ್ತು ಫರ್ಣಿರು ಇಬ್ಬರು ಕಟ್ಟುತ್ತಾರೆ ವಿಷ್ಣುಮೂರ್ತಿ, ಅಯ್ಯಪ್ಪ, ಭದ್ರಕಾಳಿ ಪ್ರದಿಯೋದಿ ತೆರೆಗಳು ಮಲಯಾಳಂ ಭಾಷೆ ಮಾತನಾಡುತ್ತವೆ. ಕೋಲವನ್ನು ಕಟ್ಟುವಲ್ಲಿ ಬಳಗೊಂಟ್ಟು ಮತ್ತು ಹೊರಂಗೊಟ್ಟು ಎಂಬ ಎರಡು ಸಂಪ್ರದಾಯಗಳಿವೆ. ಮನೆಗೆ ಒಳಗೆ ಪ್ರವೇಶ ಮಾಡುವ ಪದ್ಧತಿ ಒಳಂಗೊಟ್ಟು, ಮನೆಯ ಹೊರಗೆ ಅಥವಾ ದೇವಾಲಯದ ಹೊರಗೆ ಕೋಲ ಇರಬೇಕಾಗಿರುವುದು. ಪೊರಂಗೊಟ್ಟು ಎನ್ನುವರು. ತಕ್ಕ ಮುಖ್ಯಸ್ಥರ ಕೋರಿಕೆಯ ಮೇರೆಗೆ ಪರ್ಣಿಕರು ಗ್ರಾಮದೇವತೆಗಳ ಹಬ್ಬ ಜಾತ್ರೆ, ಉತ್ಸವಗಳಲ್ಲಿ ಸರ್ತಾವು ಅಯ್ಯಪ್ಪ, ಭಗವತಿ ಭದ್ರಕಾಳಿಯ ತೆರೆಯನ್ನು ಕಟ್ಟುತ್ತಾರೆ.

ಅಯ್ಯಪ್ಪ ಭಗವತಿತೆರೆಯನ್ನು 'ಆಟ್‌ಬಣ್ಣರ್' ಕಟ್ಟುತ್ತಾರೆ. ತೆರೆಕಟ್ಟುವುದು ಎಂದರೆ ಭೂತ ಕೋಲವನ್ನು ಕಟ್ಟಿ ನರ್ತಿಸುವುದು ಎಂದರ್ಥ. ಕೋಲವನ್ನು ಕಟ್ಟವವರು ತಲೆ ಮತ್ತು ಸೊಂಟಕ್ಕೆ ತೆಂಗಿನ ಗರಿಗಳಿಂದ ಅಲಂಕರಿಸಿಕೊಂಡಿರುತ್ತಾರೆ. ಭೂತಕೋಲಗಳಿಗೆ ಆಲಯಗಳೇನು ಇಲ್ಲ. ಅವುಗಳನ್ನು ಕಲ್ಲಿನ ರೂಪದಲ್ಲಿ ಮರದ ಅಡಿಯಲ್ಲಿ ಸ್ಥಾಪನೆ ಮಾಡಿ, ವೃಷಭ ಮಾಸದಲ್ಲಿ ಕೋಳಿ ಮತ್ತು ಮದ್ಯವನ್ನು ನೇವೇದ್ಯವಾಗಿ ಅರ್ಪಿಸುತ್ತಾರೆ. ಆಮೇಲೆ ಕೋಳಿಗಳ್ಳು ಬಲಿಕೊಡಲಾಗುತ್ತದೆ. ಕೋಳಿ ಹಂದಿಗಳ ತಲೆಯ ಭಾಗವನ್ನು ಕೋಲಕಟ್ಟಿದವನಿಗೆ ಕೊಟ್ಟು ಉಳಿದವನ್ನು ಮನೆಗೆ ತರುತ್ತಾರೆ. ಈ ದೈವಗಳಿಗೆ ವರ್ಷಕೊಮ್ಮೆ ಒಂದು ಬಾರಿ ಪೂಜೆ ಸಲ್ಲಿಸಿ ಅವುಗಳಿಗೆ ಬಲಿಕೊಟ್ಟು ಅವುಗಳನ್ನು ಸಂತೃಪ್ತಿಪಡಿಸುತ್ತಾರೆ. ಕೊಡಿಗಿನ ಬಹುಪಾಲು ದೇವಾಲಯಗಳಲ್ಲಿ ಹಬ್ಬ ಹಾಗೂ ಜಾತ್ರೆಯ ಸಮಯದಲ್ಲಿ ಈ ಕೋಲವನ್ನು ಕಟ್ಟಿಸುತ್ತಾರೆ. ಅಮ್ಮತಿ ಮತ್ತು ಪೊನ್ನಂಪೇಟೆಯಲ್ಲಿ ಮುತ್ತಪ್ಪತೆರೆ ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ಹಾಗೆಯೇ 'ಮಕ್ಕಿಶಾಸ್ತುವು' ಸನ್ನಿಧಿಯಲ್ಲಿನ ಬೇತು ಗ್ರಾಮದ ಉತ್ಸವದಲ್ಲಿ ವಿಷ್ಣುಮೂರ್ತಿ ಕೋಲ ಕಟ್ಟಿಸುತ್ತಾರೆ ಭದ್ರಕಾಳಿ ಉತ್ಸವದಲ್ಲಿ ಗುಳಿಗಪ್ಪನ ವೆಳ್ಳಟಂ ಕುಟ್ಟಿಚಾತನತೆರೆ ಆಕರ್ಷಕವಾಗಿರುತ್ತದೆ. ಭಗವತಿ ಮತ್ತು ಚಾಮುಂಡಿಯ ವಾರ್ಷಿಕ ಉತ್ಸವಗಳಲ್ಲಿ ಚಾವುಂಡಿ, ವಿಷ್ಣುಮೂರ್ತಿಯ ತೆರೆ ಕಟ್ಟುತ್ತಾರೆ ಕಟ್ಟುತ್ತಮ್ಮ ಜಾತ್ರೆ, ಮರಗೋಡು ಜಾತ್ರೆ, ಭದ್ರಕಾಳಿ ಜಾತ್ರೆ ಹೀಗೆ ಕೊಡಗಿನ ಹಲವಾರು ಜಾತ್ರೆಗಳಲ್ಲಿ ಈ ಕೋಲವನ್ನು ನಡೆಸಿ ಜನರು ಧಾರ್ಮಿಕ ಆಚರಣೆಯಲ್ಲಿ ಪಾಲ್ಗೊಳುತ್ತಾರೆ.

## ೪.೫ ಜಾತ್ರೆಗಳ ಸಾಂಸ್ಕೃತಿಕ ಸ್ಥಿತ್ಯಂತರ

ಪ್ರಸ್ತುತ ಅಧ್ಯಯನವನ್ನು ಸಮಕಾಲೀನತೆಯೊಂದಿಗೆ ನೋಡುವುದು ಹೆಚ್ಚು ಸಮಂಜಸ ವೆನಿಸುತ್ತದೆ. ಏಕೆಂದರೆ ಪರಂಪರಾನುಗತವಾಗಿ ನಡೆಯುತ್ತಾ ಬಂದಿರುವ ಜಾತ್ರೆಯ ಆಚರಣೆಗಳನ್ನು ಆಧುನಿಕತೆಯೊಂದಿಗೆ ತುಲನಾತ್ಮಕವಾಗಿ ನೋಡದೆ ಹೋದರೆ ಅಂತಹ ಯಾವುದೇ ಅಧ್ಯಯನವು ಅರ್ಥವಿಲ್ಲದ ಅಧ್ಯಯನವೆನಿಸುತ್ತದೆ. ಪ್ರಸ್ತುತದಲ್ಲಿ ಉಂಟಾಗಿರುವ ಬದಲಾವಣೆಗಳನ್ನು ಪರಂಪರಾನುಗತ ಸನ್ನಿವೇಶದೊಂದಿಗೆ ಮನವರಿಕೆ ಮಾಡಿಕೊಳ್ಳಲು ಸಹಾಯಕ. ಪ್ರಾಚೀನದಿಂದ ಆಧುನಿಕತೆಯವರೆಗೆ ಮಾನವನ ಬೌದ್ಧಿಕ ಬೆಳವಣಿಗೆಯಲ್ಲಿ ಆಗಿರುವ ವ್ಯತ್ಯಾಸಗಳನ್ನು ತಿಳಿಯಲು ಸಹಾಯಕವಾಗುತ್ತದೆ. ಆಧುನೀಕತೆಯ ರಹದಾರಿಯಲ್ಲಿರುವ ಪ್ರಸ್ತುತ ಮಾನವ ಸಮಾಜದ ಆಸಕ್ತಿ ಮತ್ತು ಅಭಿರುಚಿಗಳಲ್ಲಿ ಮಹತ್ತರ ಬದಲಾವಣೆಗಳಾಗಿವೆ. ಇದರ ಜೊತೆಗೆ ವಿಜ್ಞಾನ ಮತ್ತು ತಂತ್ರಜ್ಞಾನಗಳ ಪಾತ್ರ ಕಡಿಮೆಯೇನಲ್ಲ. ಇವೆಲ್ಲವುಗಳ ಪ್ರಭಾವದಿಂದಾಗಿ ರೂಢಿ, ಪದ್ಧತಿ, ಸಂಪ್ರದಾಯ, ನಂಬಿಕೆ ಹಾಗೂ ಸಾಂಪ್ರ ದಾಯಿಕ ಜೀವನ ವಿಧಾನಗಳು ಕಣ್ಮರೆಯಾಗಿವೆ. ಹೊಸ ಬಗೆಯ ಜೀವನ ವಿಧಾನ ಮತ್ತು ಜೀವನ ಶೈಲಿಗಳು ಗ್ರಾಮೀಣ ಜನರನ್ನು ತನ್ನ ತೆಕ್ಕೆಗೆ ಸೆಳೆಯುವಲ್ಲಿ ಸಫಲವಾಗಿವೆ.

ವ್ಯಕ್ತಿಯ ಬದುಕು ಬದಲಾವಣೆಗೊಂಡಂತೆ ಸಮಾಜದ ಬದಲಾವಣೆ ಕೂಡ ನಡೆಯುತ್ತದೆ. ಕಾರಣ ಸಂಪ್ರದಾಯ, ಆಚಾರ ವಿಚಾರಗಳಲ್ಲಿಯು ಜನರು ಭಯ ಭಕ್ತಿಗೆ ಬದಲಾಗಿ ಬದುಕು ಹಕ್ಕಿಗಾಗಿ ಆರ್ಥಿಕತೆಯನ್ನು ಅವಲಂಬಿಸಬೇಕಾಗಿದೆ. ಆದ್ದರಿಂದ ಜಾತ್ರೆ ಉತ್ಸವಗಳಲ್ಲಿ ನಡೆಯುವ ಎಲ್ಲಾ ಆಚಾರ ವಿಚಾರಗಳು ಆರ್ಥಿಕ ಇಚ್ಚಾಶಕ್ತಿಯನ್ನು ಅವಲಂಬಿಸಿರುತ್ತವೆ. ಉದಾ:ಪೂಜಾರಿ, ಗೊರವ,ವೃತ್ತಿಗಾಯಕರು ಇತ್ಯಾದಿ. ಈ ಅಂಶಗಳಿಂದ ಬದುಕು ನೈಸರ್ಗಿಕ ಅಸ್ಥಿತ್ವವನ್ನು ಕಳೆದುಕೊಂಡು ಕೃತಕವಾಗುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಸಾಮಾನ್ಯವಾಗಿ ಮನುಷ್ಯ ಕೃತಕ ಪರಿಕರಗಳನ್ನೆ ಬಳಸಬೇಕಾದ ಅನಿವಾರ್ಯತೆಯಿದೆ.

| ಅಂದು | ಇಂದು |
|---|---|
| ೧. ಹಿಂದೆ ದೇವರ ವಿಗ್ರಹಗಳನ್ನು ಕಲ್ಲು, ಮಣ್ಣು,ಮರ ಇತ್ಯಾದಿಗಳಿಂದ ಮಾಡುತ್ತಿದ್ದರು | ಪ್ರಸ್ತುತ ಬಂಗಾರ, ಬೆಳ್ಳಿ, ತಾಮ್ರಗಳಿಂದ, ದೇವರ ವಿಗ್ರಹಗಳನ್ನು ಮಾಡುತ್ತಿದ್ದಾರೆ |
| ೨. ಹಿಂದೆ ದೇವರ ಗುಡಿಗಳು ಮರದ ಕೆಳಗೆ ಮತ್ತು ಬೆಟ್ಟದ ಮೇಲೆ ನದಿಗಳ ತೀರಗಳಲ್ಲಿ ಊರಿನ ಹೊರಗೆ ಇರುತ್ತಿದ್ದವು | ಪ್ರಸ್ತುತ ಊರಿನ ಮಧ್ಯ ಭವ್ಯವಾದ ಕಟ್ಟಡ ಮತ್ತು ದೇವರ ಗುಡಿಗಳಿವೆ |
| ೩.ಹಿಂದೆ ಜಾತ್ರೆಯ ವಿಷಯವನ್ನು ತಮಟೆಯ ಮೂಲಕ ಸಾರುವುದು ಮತ್ತು ಊರಿನ ಮಧ್ಯೆ ನಿಗದಿತ ಸ್ಥಳದಲ್ಲಿ ನಿಂತು ಕೂಗಿ ಹೇಳುವುದು ಬಳಕೆಯಲ್ಲಿತ್ತು | ಪ್ರಸ್ತುತ ಕರಪತ್ರಗಳೂ, ಭಿತ್ತಿಪತ್ರ, ದೂರದರ್ಶನ, ಪತ್ರಿಕೆಗಳು ಹಾಗೂ ಪ್ರತಿ ಊರಿಗೂ ಕಳುಹಿಸಿ, ಮೈಕ್ ಮೂಲಕ ಸಾರುತ್ತಾರೆ. |
| ೪.ಹಿಂದೆ ಜಾತ್ರೆಗೆ ಊರಿನ ಮುಖ್ಯಸ್ಥರು ರಕ್ಷಣೆಯನ್ನು ನೀಡುತ್ತಿದ್ದರು. ಅದಕ್ಕಾಗಿ ಕೆಲವು ವ್ಯಕ್ತಿಗಳನ್ನು ನೇಮಿಸುತ್ತಿದ್ದರು | ಪ್ರಸ್ತುತ ಪೊಲೀಸರ ಮೂಲಕ ರಕ್ಷಣೆಯನ್ನು ನೀಡುತ್ತಿದ್ದಾರೆ. ಅದಕ್ಕಾಗಿ ಕೆಲವು ಪಡೆಗಳನ್ನು ನೇಮಿಸುತ್ತಿದ್ದಾರೆ. |
| ೫.ಹಿಂದೆ ಜಾತ್ರೆಗಳು ಭಕ್ತಿಯ ಪ್ರತೀಕ ವಾಗಿದ್ದವು ಮತ್ತು ತಮ್ಮ ಸಂಸ್ಕೃತಿಯ ಪ್ರತಿಬಿಂಬದಂತಿದ್ದವು. ಇಲ್ಲಿ ದನ, ಎಮ್ಮೆ, ಕತ್ತೆ, ಒಂಟೆ ಇತ್ಯಾದಿ ಪ್ರಾಣಿಗಳ | ಪ್ರಸ್ತುತ ಜಾತ್ರೆಗಳು ಆರ್ಥಿಕ ಚಟುವಟಿಕೆಗಳ ಕೇಂದ್ರವಾಗುತ್ತಿವೆ. ಜಾತ್ರೆಗಳ ಆಚರಣೆಯ ಸಮಯದಲ್ಲಿ ಮೇಲ್ಜಾತಿಯವರ ಪ್ರಾಬಲ್ಯ ಪ್ರಸ್ತುತವು ಹೆಚ್ಚಿದೆ. ಜಾತ್ರೆಯ ಸ್ಥಳಗಳೂ ರಾಜಕೀಯ ಪಕ್ಷಗಳ ಪ್ರಚಾರ ಕೇಂದ್ರಗಳಾಗುತ್ತಿವೆ. |

| | |
|---|---|
| ಕ್ರಯವಿಕ್ರಯವಾಗುತ್ತಿತ್ತು. ಅಲ್ಲದೆ ದೇವರಿಗೆ ಸಂಬಂಧಿಸಿದಂತೆ ನಾಟಕಗಳನ್ನು ಅಭಿನಯಿಸುತ್ತಿದ್ದರು. ಇವು ಸಾಮಾಜಿಕ ಮೌಲ್ಯಗಳನ್ನು ಬೆಳೆಸುವ ಜೊತೆಗೆ ಜನರಿಗೆ ಅಗತ್ಯಾದ ಮನರಂಜನೆಯನ್ನು ನೀಡುತ್ತಿದ್ದವು | |
| ೬. ಹಿಂದೆ ಜಾತ್ರೆಗೆ ಜನರು ನಡೆದು, ಎತ್ತಿನ ಬಂಡಿಯಲ್ಲಿ ಹೋಗುತ್ತಿದ್ದರು. | ಇಂದು ಜಾತ್ರೆಗೆ ಜನರು ಸ್ಕೂಟರ್, ಆಟೋ, ಟೆಂಪೊ, ಕಾರು ಬಸ್ಸುಗಳ ಮೂಲಕ ಬರುತ್ತಾರೆ. ವಿಶೇಷ ವಾಹನಗಳ ಸೌಲಭ್ಯ ಕಲ್ಪಿಸಲಾಗುತ್ತಿದೆ. |
| ೭. ಹಿಂದೆ ಜಾತ್ರೆಯ ಸಮಯದಲ್ಲಿ ಗುಡಿಯ ಮುಂದೆ ತೆಂಗಿನ ಚಪ್ಪರವನ್ನು ಹಾಕುತ್ತಿದ್ದರು. | ಪ್ರಸ್ತುತ ಗುಡಿಯ ಮುಂದೆ ತೆಂಗಿನ ಚಪ್ಪರಕ್ಕೆ ಬದಲಾಗಿ ಪೆಂಡಾಲ್‌ಗಳನ್ನು ಹಾಕುತ್ತಾರೆ |
| ೮. ಹಿಂದೆ ಜಾತ್ರೆಯ ಪ್ರಯುಕ್ತ ದೇವರ ಗುಡಿಯನ್ನು ಸುಣ್ಣ ಮತ್ತು ಕೆಮ್ಮಣಿನಿಂದ ಬಳಿದು ಅಲಂಕರಿಸುತ್ತಿದ್ದರು. | ಪ್ರಸ್ತುತ ದೇವರ ಗುಡಿಯನ್ನು ಪಾಲಿಶ್ ಮತ್ತು ಆಯಿಲ್ ಪೈಂಟ್‌ಗಳಿಂದ ಅಲಂಕರಿಸುತ್ತಾರೆ |
| ೯. ಹಿಂದೆ ಜಾತ್ರೆಗಳಲ್ಲಿ ಸಾಮಾನ್ಯ ಜನರು ಅಗತ್ಯ ಸ್ವದೇಶಿ ದಿನ ಬಳಕೆಯ ವಸ್ತುಗಳಾದ ಮಡಿಕೆ, ಕುಡಿಕೆಗಳನ್ನು ಖರೀದಿಸುತ್ತಿದ್ದರು. | ಪ್ರಸ್ತುತ ಇಂದು ಜಾತ್ರೆಗಳಲ್ಲಿ ಸ್ವದೇಶಿ ವಸ್ತುಗಳಿಗೆ ಬದಲಾಗಿ ರಾಸಾಯನಿಕ ವಸ್ತುಗಳ ಮಿಶ್ರಣದಿಂದ ತಯಾರಿಸಿದ ಪ್ಲಾಸ್ಟಿಕ್, ಕಂಚು, ಹಿತ್ತಾಳೆ, ತಾಮ್ರ ಹಾಗೂ ಸ್ಟೀಲ್‌ನಿಂದ ತಯಾರಿಸಿ ದಿನಬಳಕೆಯ ವಸ್ತುಗಳನ್ನು ಬರದಿಂದ ವ್ಯಾಪಾರ ಮಾಡಲಾಗುತ್ತಿದೆ. |
| ೧೦. ಹಿಂದೆ ಜಾತ್ರೆಯ ಸಮಯದಲ್ಲಿ ದೇವರ ಮುಂದೆ ಕುಂಬಾರರು ತಯಾರಿಸಿದ ಮಣ್ಣಿನ ದೀಪಗಳನ್ನು ಸಾಲು ಸಾಲಾಗಿ ಹಚ್ಚಿಡುತ್ತಿದ್ದರು | ಪ್ರಸ್ತುತ ಮಣ್ಣಿನ ದೀಪಕ್ಕೆ ಬದಲಾಗಿ ಬೆಳ್ಳಿ, ಬಂಗಾರ, ಕಂಚು, ಸ್ಟೀಲ್ ದೀಪಗಳನ್ನು ಬಳಸುತ್ತಿದ್ದು, ಮೇಣದ ಬತ್ತಿ ಮತ್ತು ವಿದ್ಯುತ್ ಬಲ್ಬ್‌ಗಳು ಆ ಸ್ಥಾನವನ್ನು ಅಲಂಕರಿಸಿವೆ. |

| | |
|---|---|
| ೧೧.ಹಿಂದೆ ಜಾತ್ರೆಯ ಸಮಯದಲ್ಲಿ ಸ್ತ್ರೀ ಪುರುಷರು ಸಾಂಪ್ರದಾಯಿಕ ಉಡುಗೆಗಳಾದ ಸೀರೆ, ಕುಪ್ಪಸ, ಲಂಗ, ದಾವಣಿಗಳನ್ನು, ಪುರುಷರು ಪಂಚೆ, ಶರ್ಟ್ ಧರಿಸುತ್ತಿದ್ದರು. | ಇಂದು ಜಾತ್ರೆಗಳಲ್ಲಿ ಸೇರುವ ಜನರು ಸಾಂಪ್ರದಾಯಿಕ ಉಡುಪುಗಳ ಬದಲಾಗಿ ಮಿಡಿ, ಚೂಡಿದಾರ, ಟಿ ಶರ್ಟ್, ಜೀನ್ಸ ಪ್ಯಾಂಟ್‌ಗಳನ್ನು ಧರಿಸುವುದು ಕಂಡುಬಂದಿದೆ |
| ೧೨.ಹಿಂದೆ ಜಾತ್ರೆಗಳ ಸಮಯದಲ್ಲಿ ಸ್ಥಳೀಯ ಜಾನಪದ ಸಾಹಿತ್ಯ ಮಹತ್ವದ ಸ್ಥಾನ ಪಡೆದಿತ್ತು. ಸ್ತ್ರೀಪುರುಷರೆಂಬ ಭೇದಭಾವವಿಲ್ಲದೆ ದೇವರ ಹಾಡುಗಳನ್ನು ಹಾಡುತ್ತಿದ್ದರು. ಇದು ಭಕ್ತಿಯ ಪ್ರತೀಕ ಹಾಗೂ ಮನರಂಜನೆಯ ಪ್ರತೀಕವಾಗಿತ್ತು. | ಇಂದಿನ ಜಾತ್ರೆಗಳಲ್ಲಿ ಜಾನಪದ ಸಾಹಿತ್ಯದ ಸೊಗಡು ಕಣ್ಮರೆಯಾಗಿದ್ದು ಅದನ್ನು ಕೇಳುವವರು ಇಲ್ಲವಾಗಿದ್ದಾರೆ. ಜಾನಪದ ಸಾಹಿತ್ಯದ ಸ್ಥಾನವನ್ನು ಇಂದು ಆಧುನಿಕ ಸಾಹಿತ್ಯ ಆಕ್ರಮಿಸಿದ್ದು ಯಾಂತ್ರಿಕವಾಗಿದೆ. |
| ೧೩.ಹಿಂದೆ ಜಾತ್ರೆಯ ಮೆರವಣಿಗೆಯ ಸಮಯದಲ್ಲಿ ಬೆಳಕಿಗೆಂದು ಮಡಿವಾಳರು ಪಂಜನ್ನು ಹಿಡಿಯುತ್ತಿದ್ದರು. ಇದು ಜಾತಿ ಜಾತಿಗಳ ನಡುವೆ ಉತ್ತಮ ಸಂಬಂಧ ಸೂಚಕವಾಗಿತ್ತು | ಇಂದು ಮೆರವಣಿಗೆಯ ಸಂದರ್ಭದಲ್ಲಿ ಮಡಿವಾಳದ ಪಂಜಿಗೆ ಬದಲಾಗಿ ಗ್ಯಾಸ್‌ಲೈಟ್, ಜನರೇಟರ್ ಹಾಗೂ ಯು.ಪಿ.ಎಸ್ ಗಳನ್ನು ಬೆಳಕಿನ ಸಾಧನಗಳಾಗಿ ಬಳಸಲಾಗುತ್ತಿದೆ. |
| ೧೪.ಹಿಂದೆ ಜಾತ್ರೆಯ ಸಮಯದಲ್ಲಿ ಉತ್ಸವಮೂರ್ತಿಯನ್ನು ಪ್ರಕೃತಿದತ್ತವಾದ ವಿವಿಧ ಬಗೆಯ ಹೂ, ಪತ್ರೆ ಮತ್ತು ತಳಿರು ತೋರಣಗಳಿಂದ ಹಾಗೂ ಬಾಳೆ ಕಂದುಗಳಿಂದ ಅಲಂಕರಿಸುತ್ತಿದ್ದರು | ಇಂದು ಜಾತ್ರೆಯ ಸಮಯದಲ್ಲಿ ಉತ್ಸವ ಮೂರ್ತಿಯನ್ನು ಅಲಂಕರಿಸಲು ಪ್ರಕೃತಿ ಸಹಜವಾದ ವಸ್ತುಗಳಿಗೆ ಬದಲಾಗಿ ಅವುಗಳನ್ನೇ ಹೋಲುವ ಕೃತಕ ಮಾದರಿಯ ಪ್ಲಾಸ್ಟಿಕ್ ಹೂ, ತಳಿರು ತೋರಣ ಬಾಳೆಕಂದುಗಳನ್ನು ಬಳಸುವುದು ಕಂಡುಬರುತ್ತಿದೆ. |
| ೧೫. ಹಿಂದೆ ಜನರು ಜಾತ್ರೆಯ ಸಮಯದಲ್ಲಿ ಸಮಷ್ಠಿಯ ಹಿತರಕ್ಷಣೆಗೆಂದು ಹರಕೆ ಮಾಡಿಕೊಳ್ಳುತ್ತಿದ್ದರು ಹಾಗು ಹರಕೆಯ ಸ್ವರೂಪ ಕಠಿಣವಾಗಿದ್ದು ಭಕ್ತಿಯಿಂದ ಕೂಡಿರುತ್ತಿತ್ತು | ಜಾತ್ರೆಗಳಲ್ಲಿ ಇಂದು ಹರಕೆ ಮಾಡಿಕೊಳ್ಳುವುದು ಬಾಹ್ಯ ಆಡಂಬರದ ಸಂಕೇತವಾಗಿದೆ. ಇಂದಿನ ಹರಕೆಗಳು ಬಾಹ್ಯ ಸ್ವರೂಪವಾಗಿದ್ದು ಬೆಲೆಬಾಳುವ ಬೆಳ್ಳಿ ಬಂಗಾರಗಳನ್ನು ಹರಕೆಯ ವಸ್ತುಗಳಾಗಿ ದೇವರಿಗೆ ಅರ್ಪಿಸುವುದು ಕಂಡುಬಂದಿದೆ. |

| | |
|---|---|
| ೧೬. ಹಿಂದೆ ಪೂಜಾ ವಿಧಾನ ಸರಳವಾಗಿತ್ತು, ಶಂಖ, ಗಂಟೆ, ಜಾಗಟೆಗಳನ್ನು ಬಾರಿಸುತ್ತಾ ಮಂತ್ರಗಳನ್ನು ಹೇಳುತ್ತ ಪೂಜೆ ಮಾಡುತ್ತಿದ್ದ | ಇಂದು ಪೂಜ ವಿಧಾನ ಆಧುನಿಕವಾಗಿದ್ದು ದುಬಾರಿಯಾಗಿದ್ದುದಾಗಿದೆ. ಹೊಸಹೊಸ ಪೂಜಾ ವಿಧಾನಗಳು ಹುಟ್ಟಿಕೊಳ್ಳುತ್ತಿವೆ. ವಿದ್ಯುತ್ ಗಂಟೆ ಮತ್ತು ಧ್ವನಿಸುರುಳಿಗಳೂ ಪೂಜಾ ವಿಧಾನಗಳಲ್ಲಿ ಸೇರಿಕೊಂಡಿವೆ |
| ೧೭.ಹಿಂದೆ ಮನೆ ದೇವರನ್ನು ಪೂಜಿಸುವುದು ಆರಾಧಿಸುವುದು ಮನೆದೇವರಿಗೆ ನಡೆದುಕೊಳ್ಳುವುದು ಆ ದೇವರ ಹೆಸರಿನಲ್ಲಿ ಜಾತ್ರೆಯ ಉತ್ಸವಗಳನ್ನು ಆಚರಿಸುವುದು ಬಳಕೆಯಲ್ಲಿತ್ತು | ಪ್ರಸ್ತುತ ದಿನದಿಂದ ದಿನಕ್ಕೆ ಹೊಸ ಹೊಸ ದೇವರುಗಳನ್ನು ಹುಟ್ಟಿಕೊಳ್ಳುತ್ತಿವೆ. ಈ ದೇವರ ಜಾತ್ರೆಗಳ ಆಚರಣೆಯಲ್ಲಿ ಎಲ್ಲಾ ಜನರು ಜಾತಿ, ಧರ್ಮ, ಲಿಂಗ ಭೇದಗಳಿಲ್ಲದೆ ಭಾಗವಹಿಸುತ್ತಾರೆ. |
| ೧೮.ಹಿಂದೆ ಜಾತ್ರೆಗಳ ಆಚರಣೆಯಲ್ಲಿ ಮಹಿಳೆಯರ ಭಾಗವಹಿಸುವಿಕೆಗೆ ಭಾಗಶಃ ಅವಕಾಶ ನೀಡಿದ್ದರು. ಅಲ್ಲದೆ ಮಹಿಳೆ ಜಾತ್ರೆಯ ನಿಮಿತ್ತ ಗರ್ಭಗುಡಿ ಪ್ರವೇಶಿಸುವುದಾಗಲಿ, ರಥವನ್ನು ಎಳೆಯುವುದಾಗಲಿ, ಅರ್ಚಕರ ವೃತ್ತಿಯನ್ನು ಅನುಸರಿಸುವುದಾಗಲಿ ನಿಷಿದ್ಧವಾಗಿತ್ತು | ಪ್ರಸ್ತುತ ಜಾತ್ರೆಗಳು ಆಚರಣೆಯಲ್ಲಿ ಮಹಿಳೆಯರು ಭಾಗವಹಿಸಲು ಮುಕ್ತ ಅವಕಾಶವಿದೆ. ಅಲ್ಲದೆ ಮಹಿಳೆ ಜಾತ್ರೆಯ ನಿಮಿತ್ತ ಗರ್ಭಗುಡಿ ಪ್ರವೇಶಿಸಲು, ರಥವನ್ನು ಎಳೆಯಲು ಹಾಗೂ ಅರ್ಚಕರ ವೃತ್ತಿಯನ್ನು ನಿರ್ವಹಿಸಲು ಸಮಾನ ಅವಕಾಶ ಮಾಡಿಕೊಡುವ ಚಿಂತನೆಗಳು ನಡೆಯುತ್ತಿವೆ |

ಈ ಬಗೆಯ ಬದಲಾವಣೆಗಳು ನಿಧಾನವಾಗಿ ಆಗುವಂತಹವು. ಇಂದಿನ ಸಾಮಾಜಿಕ ಆರ್ಥಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಬದಲಾವಣೆಗಳಾಗಿರುವುದನ್ನು ಈ ಹಿನ್ನಲೆಯಲ್ಲಿ ಗುರುತಿಸುವುದು ಸಾಧ್ಯ. ಈ ಅಂಶಗಳು ಸಂದರ್ಭಾನುಸಾರ ಬದಲಾವಣೆಯ ಪ್ರಕ್ರಿಯೆಗಳಿಗೆ ಒಳಪಟ್ಟಿದೆ. ಸಂಸ್ಕೃತಿಯ ಬದಲಾವಣೆಯ ಅಂಶದೊಂದಿಗೆ ಪ್ರಸ್ತುತ ದೇವರ ಹೆಸರಿನಲ್ಲಿ ನಡೆಯುತ್ತಿದ್ದ ಹಬ್ಬ, ಹರಿದಿನ, ಜಾತ್ರೆಯಂತಹ ಆಚರಣೆಗಳಲ್ಲಿ ಹೊಸತನ ಕಂಡು ಬರುತ್ತದೆ. ಇದರೊಂದಿಗೆ ಅಲ್ಲಿನ ಸಮಾಜ ಮತ್ತು ಸಂಸ್ಕೃತಿಗಳು ತನ್ನ ಹಳೆಯದರಿಂದ ಹೊಸ ವಿಕಾಸವನ್ನು ಪಡೆಯುತ್ತೇವೆ. ಈ ಬಗೆಯ ಸನ್ನಿವೇಶದಿಂದ ಆರ್ಥಿಕ ಅಂಶಗಳಲ್ಲಿ ಬದಲಾವಣೆಗಳುಂಟಾಗುತ್ತವೆ.

ಪೂರ್ವ ಕಾಲದಲ್ಲಿ ಕ್ಷಾಮಡಾಮರಗಳು ಸಂಭವಿಸಿದಾಗ ರೋಗರುಜಿನಗಳು ಉಂಟಾದಾಗ ನಮ್ಮ ಜನಪದರು ಅದಕ್ಕೆ ಸಂಬಂಧಿಸಿದ ದೇವರಿಗೆ ಹರಸಿಕೊಂಡು ಜಾತ್ರೆ ನಡೆಸುತ್ತಿದ್ದರು. ಯಾವ ದೇವತೆಗೆ ಹರಕೆ ಹೊತ್ತುಕೊಳ್ಳುತ್ತಾರೋ ಆ ದೇವತೆಗೆ ಸಂಬಂಧಿಸಿದ ತಮ್ಮ ನಂಬಿಕೆಯ ಮೂಲ

ದ್ರವ್ಯದಿಂದ ಪುರಾಣವನ್ನು ಪುನರ್ ಅಭಿನಯಿಸಿ ಆಚರಿಸುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಈ ಆಚರಣೆಗಳು ಜನಪದ ಬದುಕಿನಿಂದ ಮರೆಯಾಗುತ್ತಿವೆ. ಇಂದು ಅವುಗಳ ಸ್ಥಾನದಲ್ಲಿ ಅನ್ಯಸಂಸ್ಕೃತಿಯ ವ್ರತಗಳು ವಿಜೃಂಭಿಸಿವೆ. ಜಾತ್ರೆಗಳು ನಿರ್ದಿಷ್ಟ ಪುರಾಣಗಳ ಪುನರ್ ಅಭಿನಯ ರೂಪಗಳು. ಈ ಪುನರ್ ಅಭಿನಯ ತನ್ನೊಳಗಿನ ಜಾನಪದೀಯ ಮೂಲದ್ರವ್ಯವಾದ ನಂಬಿಕೆಯನ್ನು ಉಳಿಸಿಕೊಂಡು ಬದುಕಿನ ಸ್ಥಿತಿಗಳಿಗನುಗುಣವಾಗಿ ರೂಪ, ಪುನರ್ ರೂಪಗಳನ್ನು ಪಡೆಯುತ್ತಾ ನಡೆಯುತ್ತವೆ. ಯಾವುದೇ ಜಾತ್ರೆಯನ್ನು ಗಮನಿಸಿದರೂ ಅದು ನಿರ್ದಿಷ್ಟ ಸಮಾಜವೊಂದರ ಸ್ವರೂಪ ರಚನೆಯನ್ನು ವಿಶಿಷ್ಟ ರೀತಿಯಲ್ಲಿ ಮೈಗೂಡಿಸಿಕೊಂಡಿರುತ್ತದೆ. ಈ ಅರ್ಥದಲ್ಲಿಯೇ ಜಾತ್ರೆಗಳು ಆಯಾ ನಿರ್ದಿಷ್ಟ ಸಮಾಜಗಳ ಸಾಂಸ್ಕೃತಿಕ ಮತ್ತು ಸಾಮಾಜಿಕ ಸಂಕೀರ್ಣಾವಸ್ಥೆಯ ಮೂರ್ತ ರೂಪಗಳು.

ಆಧುನಿಕ ಸಂದರ್ಭದಲ್ಲಿ ಮಾನವನ ಮೇಲೆ ಹೊಸ ರೀತಿಯ ಪ್ರಭಾವ ಕಂಡು ಬರುತ್ತದೆ. ಹೊಸ ಬಗೆಯ ನಾಗರೀಕತೆಯ ಪ್ರಭಾವ ದಟ್ಟವಾಗಿ ಹರಡಿಕೊಂಡಿದೆ. ಅನೇಕ ರೀತಿಯ ವೈಜ್ಞಾನಿಕ ಉಪಕರಣಗಳು ಇಂದು ನಿತ್ಯ ಬದುಕಿನಲ್ಲಿ ಹಾಸು ಹೊಕ್ಕಾಗಿದೆ. ಹಳೆಯ ತಲೆಮಾರಿನ ಜನರ ಆಚರಣೆಗಳಲ್ಲಿ ತಮ್ಮದೇ ಆದ ನಂಬಿಕೆಗಳಿಂದ ತಮ್ಮ ಬದುಕಿನಲ್ಲಿ ನೆಮ್ಮದಿಯನ್ನು ಕಾಣುವುದು ಕಂಡು ಬರುತ್ತದೆ. ಗ್ರಾಮ ಮತ್ತು ನಗರ ಪ್ರದೇಶಗಳಲ್ಲಿ ವಾಸಿಸುವ ಜನರು ಭಯ ಭಕ್ತಿಯಿಂದ ದೇವರನ್ನು ಪೂಜಿಸುವುದು ಕಂಡುಬರುತ್ತದೆ. ಹಿಂದೆಂದಿಗಿಂತಲೂ ಇಂದು ಹೆಚ್ಚಿನ ಸಂಖ್ಯೆಯಲ್ಲಿ ಜನರು ಪೂಜಾ ಪುರಸ್ಕಾರಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಾರೆ. ಸಾಂಸಾರಿಕ ಜೀವನ ಸುಖ ಸಂತೋಷಕ್ಕಾಗಿ ಹರಕೆಗಳ ರೂಪದಲ್ಲಿ ಹಲವಾರು ಆಚರಣೆಗಳನ್ನು ಮಾಡುತ್ತಾರೆ. ಮೊದಲು ದೇವರ ನೆನೆದು ಮುಂದಿನ ಕೆಲಸ ಕಾರ್ಯಗಳನ್ನು ಮಾಡುವುದು ಆಯಾ ಪ್ರದೇಶಕ್ಕನುಗುಣವಾಗಿ ಕಾಣಬಹುದು. ಎಂಬ ಸಿ.ಮಹದೇವಯ್ಯ ಅವರ ಅಭಿಪ್ರಾಯ ಕೇವಲ ಔಪಚಾರಿಕ ಆಚರಣೆಯಾಗಿ ಮಾತ್ರ ಉಳಿದಿದೆ.

ಹಿಂದೆ ಸಿಡಿಯಾಡುವಾಗ ವ್ಯಕ್ತಿಯ ಬೆನ್ನುಹುರಿಗೆ ಕಬ್ಬಿಣದ ಕೊರಡಿ ಸಿಕ್ಕಿಸಿ ಸಿಡಿಯಾಡಿಸುತ್ತಿದ್ದರು. ಆಧುನಿಕ ಕಾನೂನು ಇದಕ್ಕೆ ಅಡ್ಡಿಯಾಗಿರುವುದರಿಂದ ಮತ್ತು ಜನಮನ ದಲ್ಲಿ ಎಚ್ಚರ ಮೂಡತೊಡಗಿರುವುದರಿಂದ ಈ ಕೊಂಡಿ ಸಿಡಿ ಬಟ್ಟೆ ಸಿಡಿಯ ರೂಪಕ್ಕೆ ಇಳಿದಿದೆ. ಎಂದು ಎಸ.ಜಿ.ಸಿದ್ದರಾಮಯ್ಯ ಆಧುನಿಕ ಸಂದರ್ಭದಲ್ಲಿ ಜಾತ್ರೆಗಳು ಎಂಬ ಲೇಖನದಲ್ಲಿ ಜಾತ್ರೆಯ ಬದಲಾದ ಆಚರಣೆಗಳನ್ನು ಕುರಿತು ಚರ್ಚಿಸಿದ್ದಾರೆ.

ಆಧುನಿಕತೆಯ ಪ್ರಭಾವದಿಂದ ಸಿಡಿ ಆಚರಣೆಯಲ್ಲಿ ಅಷ್ಟೆ ಅಲ್ಲದೆ ಬಲಿ ಆಚರಣೆಯಲ್ಲಿ ಮಹತ್ವದ ಬದಲಾವಣೆಗಳಾಗಿವೆ. ಕೆಲವು ಕಡೆ ಜಾತ್ರೆಗೆ ಹರಕೆ ಬಿಟ್ಟ ಕೋಣಗಳನ್ನು ಕಡಿ ಯುವುದಿಲ್ಲ. ಬದಲಾಗಿ ಪಶುವೈದ್ಯರೊಬ್ಬರನ್ನು ಕರೆಯಿಸಿ ಸಿರಿಂಜಿನಿಂದ ಈ ಕೋಣಗಳ (ಬಲಿ ಹರಕೆಯ) ರಕ್ತ ತೆಗೆಸಿ, ಕಡಿದಾಗ ರಕ್ತ ಛಿಲ್ಲೆನ್ನುವ ವಿಧಿಯನ್ನು ಅನುಸರಿಸಿ ಸಿರಿಂಜಿ ನಿಂದ ರಕ್ತ ಛಿಳ್ಳೆನ್ನಿಸಿ ದೇವಿಗೆ ಅರ್ಪಿಸುವ ವಿಧಾನ ಬಳಕೆಗೆ ಬಂದಿದೆ

ಪರಂಪರಾನುಗತ ಜಾತ್ರೆಗಳು ಈ ಹಿಂದೆ ಯಾವುದೋ ಒಂದು ಜನ ಸಮುದಾಯದ ಧಾರ್ಮಿಕ ವಿಧಿವಿಧಾನಗಳ ಈಡೇರಿಕೆಗಾಗಿ ನಡೆಯುತ್ತಿದ್ದವು. ಆದರೆ ಇಂದು ಆಧುನಿಕ ಸಾರಿಗೆ ಸಂಪರ್ಕದ ಅಭಿವೃದ್ಧಿಯಿಂದಾಗಿ ದೂರದ ಭಕ್ತರಷ್ಟೆ ಅಲ್ಲದೆ ವ್ಯಾಪಾರಿಗಳು ಅಪಾರ ಸಂಖ್ಯೆಯಲ್ಲಿ ಜಾತ್ರಾ ಪ್ರದೇಶಕ್ಕೆ ಸೇರುತ್ತಾರೆ. ವ್ಯಾಪಾರಿ ಚಟುವಟಿಕೆಗಳು ಬಿರುಸಿನಿಂದ ಸಾಗುವ. ಜಾತ್ರೆಯು ಧಾರ್ಮಿಕ ಕೇಂದ್ರವೆನ್ನುವುದೇ ಮರೆತು, ವ್ಯಾಪಾರ ಕೇಂದ್ರವೇನೋ ಎಂಬ ಭಾವನೆ ಮೂಡಿಸುತ್ತದೆ.

ದೇವರ ಜಾತ್ರೆಯ ಜೊತೆ ಜೊತೆಗೆ ಸುಮಾರು ಒಂದು ತಿಂಗಳ ಕಾಲ ನಡೆಯುತ್ತಿದ್ದ ಜಾನುವಾರು ಜಾತ್ರೆಗಳು ಜನಗಳು ಸೇರುವ ಪ್ರಮಾಣ ಗಣನೀಯವಾಗಿ ಕಡಿಮೆಯಾಗಿದೆ. ಇದಕ್ಕೆ ಆಧುನಿಕ ಕೃಷಿ ಯಂತ್ರೋಪಕರಣಗಳು ಕಾರಣವಾಗಿದೆ. ಪರಿಸ್ಥಿತಿ ಮುಂದುವರೆದರೆ ಭವಿಷ್ಯದ ತಲೆಮಾರಿಗೆ ದನಗಳ ಜಾತ್ರೆಗಳ ಕುರಿತು ಚಿತ್ರಪಟಗಳಲ್ಲಿ ತೋರಿಸಬೇಕಾದ ಪರಿಸ್ಥಿತಿ ಬಂದೊದಗುತ್ತದೆ.

## ೪.೬ ಕೊಡಗಿನ ಜಾತ್ರೆಗಳ ಸ್ವರೂಪ

ಪ್ರತಿ ಸಮಾಜದಲ್ಲಿಯೂ ಆಚರಣೆಯಲ್ಲಿರುವ ಎಲ್ಲಾ ಜಾತ್ರೆಗಳ ಲಕ್ಷಣಗಳು ಒಂದೇ ಆಗಿದ್ದರೂ ಅವುಗಳ ಸ್ವರೂಪದಲ್ಲಿ ವ್ಯತ್ಯಾಸಗಳಿರುತ್ತವೆ. ಸಾಮಾಜಿಕ ಸಾಮರಸ್ಯ ಎಲ್ಲಾ ಜಾತ್ರೆಗಳ ಉದ್ದೇಶ. ಆದರೂ ಅವುಗಳ ಆಚರಣೆಯ ವಿಧಿ ವಿಧಾನಗಳು ಆಚಾರವಿಚಾರಗಳು. ನಂಬಿಕೆ, ಸಂಪ್ರದಾಯಗಳು ಪ್ರದೇಶದಿಂದ ಪ್ರದೇಶಗಳಿಗೆ ಭಿನ್ನವಾಗಿರುತ್ತದೆ. ಭಾರತವು ವೈವಿಧ್ಯಮಯ ಭೌಗೋಳಿಕೆ ಹಿನ್ನಲೆ, ವೈವಿಧ್ಯಮಯ ಜಾತಿಧರ್ಮ ಆಚಾರವಿಚಾರವನ್ನು ಹೊಂದಿರುವಂತೆ ಕರ್ನಾಟಕವು ಸಹ ವೈವಿಧ್ಯತೆಯನ್ನು ಹೊಂದಿದೆ. ಅಲ್ಲಿರುವ ಭೌಗೋಳಿಕ ಹಿನ್ನಲೆ, ಜನರ ಆಚಾರ ವಿಚಾರ ನಂಬಿಕೆಗೆ ಅನುಗುಣವಾಗಿ ಜಾತ್ರೆಗಳ ಸ್ವರೂಪ ಭಿನ್ನವಾಗಿರುತ್ತದೆ. ಕೊಡಗು ಜಿಲ್ಲೆಯು ಮಲೆನಾಡು ಪ್ರದೇಶವಾಗಿದ್ದು ಬಯಲು ಸೀಮೆಯಲ್ಲಿ ನಡೆಯುವ ಜಾತ್ರೆಗಳಿಗೂ ಕೊಡಗಿನಲ್ಲಿ ನಡೆಯುವ ಜಾತ್ರೆಗಳ ಸ್ವರೂಪಕ್ಕೂ ಕೆಲವು ಬದಲಾವಣೆಗಳಿವೆ. ಕೊಡಗಿನಲ್ಲಿ ಅಲ್ಲಿನ ಭೌಗೋಳಿಕ ಹಿನ್ನಲೆ ಹಾಗೂ ಜನರ ಆಚಾರ ವಿಚಾರ ನಂಬಿಕೆ ಸಂಪ್ರದಾಯಗಳಿಗೆ ಅನುಗುಣವಾಗಿ ಅಲ್ಲಿನ ಜಾತ್ರೆಗಳು ಬಯಲು ಸೀಮೆ ಜಾತ್ರೆಗಿಂತ ಕೆಲವೊಂದು ಬದಲಾವಣೆಯನ್ನು ಹೊಂದಿದೆ.

ಕೊಡಗಿನಲ್ಲಿ ನಡೆಯುವ ಎಲ್ಲಾ ಜಾತ್ರೆಗಳನ್ನು ಬಯಲು ಸೀಮೆ ಜಾತ್ರೆಗಳೊಂದಿಗೆ ತೌಲನಿಕವಾಗಿ ಅವಲೋಕಿಸಿ ನೋಡಿದಾಗ ಕೊಡಗಿನ ಜಾತ್ರೆಗಳ ಸ್ವರೂಪವನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

೧. ನಾನು ಜಾತ್ರೆಗಳ ಅಧ್ಯಯನ ನಡೆಸಿದಂತೆ ವಿರಾಜಪೇಟೆ ತಾಲೂಕು ಹಾಗೂ ಮಡಿಕೇರಿ ತಾಲೂಕಿನಲ್ಲಿ ನಡೆಯುವ ಜಾತ್ರೆಗಳಲ್ಲಿ ತೇರು, ರಥೋತ್ಸವ ಬಹಳ ಕಡಿಮೆ. ಇದ್ದರೂ ಸಹ ಅವು ಅಲ್ಲೋ ಇಲ್ಲೋ ಬೆರಳೆಣಿಯೆಷ್ಟು ಮಾತ್ರ. ಆದರೆ ಇದೆ ಜಿಲ್ಲೆಗೆ ಸೇರಿರುವ ಮತ್ತೊಂದು ತಾಲೂಕು

ಆದ ಸೋಮವಾರಪೇಟೆಯಲ್ಲಿ ಜರುಗುವ ಜಾತ್ರೆಗಳಲ್ಲಿ ತೇರು, ರಥೋತ್ಸವ ಸಾಮಾನ್ಯವಾಗಿ ಕಂಡುಬರುವ ಆಚರಣೆ. ಇದಕ್ಕೆ ಕಾರಣವೇನೆಂದು ವಿಶ್ಲೇಷಿಸಿದಾಗ ವಿರಾಜಪೇಟೆ ಹಾಗೂ ಮಡಿಕೇರಿ ಪ್ರದೇಶವು ಸಂಪೂರ್ಣವಾಗಿ ಬೆಟ್ಟಗುಡ್ಡ ಪ್ರದೇಶವಾಗಿದ್ದು ಈ ಪ್ರದೇಶದಲ್ಲಿ ರಥ ಹಾಗೂ ತೇರುಗಳನ್ನು ಬಳಸಲು ಸಾಧ್ಯವಾಗುವುದಿಲ್ಲ. ಆದರೆ ಸೋಮವಾರಪೇಟೆಯ ಮುಕ್ಕಾಲು ಭಾಗ ಸಮತಟ್ಟಾಗಿದ್ದು, ಅಲ್ಲಿ ಬಂಡಿ ಬಳಸ ಬಹುದಾದರಿಂದ ಇಲ್ಲಿ ರಥೋತ್ಸವ ತೇರುಗಳನ್ನು ಜಾತ್ರೆಗಳನ್ನು ಎಳೆಯುತ್ತಾರೆ.

೨. ಬಯಲು ಸೀಮೆಯ ಜಾತ್ರೆಗಳಲ್ಲಿ ಸಾಮಾನ್ಯವಾಗಿ ದೇವರಿಗೆ ಒಪ್ಪಿಸುವ ಪ್ರಾಣಿ ಬಲಿ ಕೋಳಿ, ಕುರಿ ಕೋಣವಾಗಿರುತ್ತದೆ. ಆದರೆ ಕೊಡಗಿನಲ್ಲಿ ಕೋಣ ಬಲಿಯ ಬದಲು ಹೆಚ್ಚಾಗಿ ಹಂದಿಯನ್ನು ಬಳಸುತ್ತಾರೆ. ಭಿನ್ನತೆಗೆ ಕಾರಣವನ್ನು ಹುಡುಕಿದಾಗ ಬಯಲು ಸೀಮೆಯ ಬಹುಪಾಲು ಜನರು ಹಂದಿ ಮಾಂಸ ಸೇವನೆ ಮಾಡದಿರುವುದು. ಆದರೆ ಕೊಡಗಿನಲ್ಲಿ ವಾಸಿಸುವ ಬಹುಪಾಲು ಮಂದಿ ಹಂದಿ ಮಾಂಸ ಸೇವನೆ ಮಾಡುವುದರಿಂದ ಈ ಪ್ರಾಣಿ ಬಲಿಯನ್ನು ಜಾತ್ರೆಯಲ್ಲಿ ನೀಡುತ್ತಾರೆ. ಇಲ್ಲೂ ಕೆಲರು ಈ ಪ್ರಾಣಿ ಸೇವನೆ ಮಾಡದಿದ್ದರೂ ಹಂದಿ ಬಲಿ ಕೊಡುವುದಾಗಿ ಹರಕೆ ಮಾಡಿಕೊಂಡು ಅದನ್ನು ಬಲಿಕೊಟ್ಟು ಸೇವನೆ ಮಾಡುವವರಿಗೆ ಅಥವಾ ದೇವಾಲಯದ ಸಮಿತಿಗೆ ಒಪ್ಪಿಸುತ್ತಾರೆ.

೩. ಬಯಲುಸೀಮೆಯಲ್ಲಿ ನಡೆಯುವ ಜಾತ್ರೆಗಳಲ್ಲಿ ಸಾಮಾನ್ಯವಾಗಿ ಉತ್ಸವ ಮೂರ್ತಿಯನ್ನು ತೇರು, ಟ್ರಾಕ್ಟರ್, ಜೀಪ್‌ನಲ್ಲಿ ಕೂರಿಸಿ ಮೆರವಣಿಗೆ, ಮಾಡುತ್ತಾರೆ. ಆದರೆ ಕೊಡಗಿನಲ್ಲಿ ನಡೆಯುವ ಹಬ್ಬ ಹಾಗೂ ಜಾತ್ರೆಗಳಲ್ಲಿ ದೇವರ ವಿಗ್ರಹವನ್ನು ತಲೆಯ ಮೇಲೆ ಹೊತ್ತು ಮೆರವಣಿಗೆ ಮಾಡುವುದು, ದೇವಸ್ಥಾನಕ್ಕೆ ಪ್ರದಕ್ಷಿಣೆ ಬರುವುದು ಮಾಡುತ್ತಾರೆ.

೪. ಕೊಡಗಿನಲ್ಲಿ ಕೆಲವು ದೇವರುಗಳಿಗೆ ಗುಡಿ, ಗೋಪುರಗಳನ್ನು ಕಟ್ಟದೆಯೇ ಪ್ರಕೃತಿಯ ಮಡಿಲಿನಲ್ಲಿಯೇ ನೆಲಗೊಳಿಸಿ ಆರಾಧಿಸುವ ಸಂಸ್ಕೃತಿಯನ್ನು ಕೊಡಗಿನಲ್ಲಿ ಕಾಣಬಹುದಾಗಿದೆ. ಹಾಲು ಬರುವ ಮರದ ಕೆಳಗೆ ಇರುವ ಕಲ್ಲಿನ ಮೂರ್ತಿ, ತ್ರಿಶೂಲಗಳನ್ನು ಇಟ್ಟ ದೇವರ ಆರಾಧನೆ ಮಾಡುತ್ತಾರೆ. ಆದರೆ ಬಯಲು ಸೀಮೆಯಲ್ಲಿನ ಎಲ್ಲಾ ದೇವರುಗಳಿಗೆ ಗುಡಿಗೋಪುರಗಳು ಇರುತ್ತವೆ.

೫. ಬಯಲು ಸೀಮೆಯಲ್ಲಿ ಗ್ರಾಮದ ಹೊರಗೆ ಅಥವಾ ಗ್ರಾಮದಲ್ಲಿರುವ ದೇವಾಲಯದಲ್ಲಿ ಉತ್ಸವ ಅಥವಾ ಜಾತ್ರೆ ನಡೆಯುತ್ತದೆ. ಆದರೆ ಕೊಡಗಿನಲ್ಲಿ ಬಹುಪಾಲು ದೇವರುಗಳು ದೇವರ ಬನ ಅಥವಾ ದೇವರಕಾಡು ಎಂಬಲ್ಲಿ ನೆಲೆಯಾಗಿರುತ್ತದೆ. ದೇವರ ಕಾಡು ಎಂದರೆ ದೇವರ ಹೆಸರಿನಲ್ಲಿ ಕಾಡನ್ನು ಬಿಟ್ಟಿರುತ್ತಾರೆ. ಅದರೊಳಗೆ ದೇವರವಾಸ ಬಿಟ್ಟರೆ ಬೇರೆ ಯಾರಿಗೂ ಪ್ರದೇಶ ಇರುವುದಿಲ್ಲ. ಈ ಕಾಡಿನಲ್ಲಿ ಯಾವುದೇ ಮರ ಕಡಿಯುವುದು, ಹಣ್ಣು ಕೀಳುವುದು ನಿಷೇಧವಾಗಿರುತ್ತದೆ. ಈ ಮೂಲಕ ಅಲ್ಲಿನ ದೇವರ ಬನಗಳ ರಕ್ಷಣೆ ಮಾಡಲಾಗಿರುತ್ತದೆ. ಇಂತಹ ದೇವರ ಕಾಡಿನ ಒಳಗೆ ಕೊಡಗಿನಲ್ಲಿ ಜಾತ್ರೆಗಳು ನಡೆಯುತ್ತವೆ. ಕೊಡಗಿನೆಲ್ಲೆಡೆ ಈ ರೀತಿಯ ಹಲವಾರು ದೇವರ

ಕಾಡು ಇದ್ದು ಅಲ್ಲಿ ಮರಗಳ ಕಡಿಯುವಿಕೆ ಇಲ್ಲದೆ ಇಂದಿಗೂ ಕೊಡಗು ಹೆಚ್ಚು ಅರಣ್ಯ ಭಾಗವನ್ನು ಹೊಂದಿದ್ದು ಉತ್ತಮ ಮಳೆ ಬೆಳೆ ಹೊಂದಿರುವುದನ್ನು ಸ್ಮರಿಸಬಹುದಾಗಿದೆ.

೬. ಬಯಲು ಸೀಮೆಯಲ್ಲಿ ಜರುಗುವ ಜಾತ್ರೆಗಳು ಬಹುಪಾಲು ಪೌರಾಣಿಕ ಹಿನ್ನಲೆಯ ದೇವರುಗಳ ಹೆಸರಿನಲ್ಲಿ ನಡೆಯುತ್ತದೆ. ಉದಾ. ಈಶ್ವರ ಗಣಪ ರಾಮ ಹನುಮ ವಿಷ್ಣು ಕೊಡಗಿನಲ್ಲಿ ಕೊಡಗಿನ ಜನಪದ ಹಿನ್ನಲೆ ಹೊಂದಿರುವ ದೇವರುಗಳ ಹೆಸರಿನಲ್ಲಿ ಹಬ್ಬ ಹಾಗೂ ಜಾತ್ರೆಗಳು ನಡೆಯುತ್ತವೆ. ಕೊಡಗಿನ ಬಹುಪಾಲು ದೇವರುಗಳು ಕೇರಳದಿಂದ ವಲಸೆ ಬಂದ ದೇವರಾಗಿದ್ದು ಅವುಗಳ ಆರಾಧನೆಯ ಹಿನ್ನಲೆಯಲ್ಲಿ ಜಾತ್ರೆ ನಡೆಯುತ್ತದೆ. ಉದಾ: ಇಗ್ಗುತ್ತಪ್ಪ,ಪಾಲಾರಪ್ಪ, ಬೇಟೆ ಅಯ್ಯಪ್ಪ, ಪುತ್ತು ಭಗವತಿ ಪನ್ನಂಗಾಲತಮ್ಮೆ, ಮೈತೂರಪ್ಪ ನಾತ ಇತ್ಯಾದಿ.

೭. ಬಯಲು ಸೀಮೆಯಲ್ಲಿ ಜಾತ್ರೆಗಳಲ್ಲಿ ಹರಿಕಥೆ ಪೌರಾಣಿಕ ನಾಟಕಗಳು ಎಂಬ ಧಾರ್ಮಿಕ ಪ್ರದರ್ಶನಗಳು ನಡೆಯುತ್ತದೆ. ಕೊಡಗಿನಲ್ಲಿ ದೈವಕೋಲಗಳನ್ನು ನಡೆಸುತ್ತಾರೆ. ಇದಕ್ಕೆ ಕಾರಣವೇನೆಂದು ವಿಶ್ಲೇಷಿಸಿದಾಗ ವಿರಾಜಪೇಟೆ ತಾಲೂಕು, ಕೇರಳ ಪ್ರಭಾವ, ಮಡಿಕೇರಿಯು ಸುಳ್ಯ ಪರಿಸರದ ಪ್ರಭಾವವನ್ನು ಹೊಂದಿದ್ದು ಆ ಪ್ರದೇಶಗಳಲ್ಲಿ ನಡೆಯುವ ಧಾರ್ಮಿಕ ಆಚರಣೆಗಳ ಪ್ರಭಾವದಿಂದಾಗಿ ಈ ಭಾಗಗಳಲ್ಲಿ ದೈವಕೋಲ ನಡೆಯುತ್ತದೆ. ಕೊಡಗಿಗೆ ವಲಸ ಬಂದಿರುವ ಬಹುಪಾಲು ದೇವರು ಕೇರಳದಿಂದ ಆಗಿರುವುದರಿಂದ ಕೇರಳದಲ್ಲಿನ ಧಾರ್ಮಿಕ ಆಚರಣೆಗಳ ದಟ್ಟ ಪ್ರಭಾವ ಕೊಡಗಿನಲ್ಲಿ ಉಂಟಾಗಿದೆ.

೮. ಬಯಲುಸೀಮೆಯಲ್ಲಿ ಡೊಳ್ಳು ಕುಣಿತ, ವೀರಗಾಸೆ ತಮಟೆ ವಾದ್ಯ ಬಳಸಲಾಗುತ್ತದೆ. ಕೊಡಗಿನ ಜಾತ್ರೆಗಳಲ್ಲಿ ಕೇರಳ ಮಾದರಿಯ ಚಂಡೆ ವಾದ್ಯ ಹುತ್ತರಿ ಕುಣಿತವನ್ನು ಮಾಡಲಾಗುತ್ತದೆ. ಬಯಲು ಸೀಮೆ ಜಾತ್ರೆಗಳಲ್ಲಿ ಸಾಮಾನ್ಯವಾಗಿ ನೃತ್ಯವನ್ನು ಪುರುಷರು ಮಾತ್ರ ಮಾಡಿದರೆ ಕೊಡಗಿನ ಎಲ್ಲಾ ಭಾಗಗಳಲ್ಲೂ ಜಾತ್ರೆಯ ಸಮಯದಲ್ಲಿ ಪುರುಷರ ಸರಿ ಸಮನಾಗಿ ಸ್ತ್ರೀಯರು ನೃತ್ಯ ಮಾಡುವುದು ಬಹಳ ವಿಶೇಷವಾಗಿದ್ದು ಅಲ್ಲಿ ಸಂಸ್ಕೃತಿಯ ವಿಶೇಷತೆಗಳಲ್ಲಿ ಇದು ಒಂದಾಗಿದೆ. ನಿಸರ್ಗದ ಎದುರಿನಲ್ಲಿ ಧಾರ್ಮಿಕ ಆಚರಣೆಯಲ್ಲಿ ಹೆಣ್ಣು ಗಂಡು ಎಂಬ ಭೇದ ಭಾವವಿಲ್ಲ ಎಲ್ಲರೂ ಸಮಾನರು ಎಂಬ ತತ್ವವನ್ನು ಸಾರುವಂತಿದೆ.

೯. ಬಯಲು ಸೀಮೆಯ ಜಾತ್ರೆಗಳಲ್ಲಿ ದೇವಾಲಯದ ಸುತ್ತಮುತ್ತಲಿನಲ್ಲಿ ಜಾತ್ರೆ ಹಿಂದಿನ ದಿನ ಅಥವಾ ಜಾತ್ರೆಯ ದಿನ ಸುತ್ತಮುತ್ತಲಿನ ಊರುಗಳಿಂದ ಜನರು ಬಂದು ಅಲ್ಲೆ ತಂಗಿದ್ದು ತಾವು ಬಲಿಕೊಟ್ಟ ಪ್ರಾಣಿಯನ್ನು ಬೇಯಿಸಿ ಊಟವನ್ನು ತಯಾರಿಸಿ ದೇವರಿಗೆಂದು ಎಡೆಯೊಪ್ಪಿಸಿ ತದನಂತರ ಅವರೊಂದಿಗೆ ಬಂದ ನೆಂಟರು, ಸ್ನೇಹಿತರಿಗೆ ಊಟ ವ್ಯವಸ್ಥೆಯನ್ನು ಮಾಡುತ್ತಾರೆ. ಹಾಗೆಯೆ ಕೊಡಗಿನ ಜಾತ್ರೆಗಳಲ್ಲಿ ದೇವರಿಗೆ ಪ್ರಾಣಿ ಬಲಿ ನೀಡುತ್ತಾರೆ. ಆದರೆ ಅಲ್ಲೆ ಇದ್ದು ಅಡುಗೆ ಮಾಡಿ ಎಡೆಯೊಒಪ್ಪಿಸುವುದು ಬಹಳ ವಿರಳ. ಇದಕ್ಕೆ ಕಾರಣ ಏನಿರಬಹುದೆಂದು ಯೋಚಿಸುವುದಾದರೆ

ಇದು ಬೆಟ್ಟ ಗುಡ್ಡ ಪ್ರದೇಶವಾಗಿರುವುದರಿಂದ ಪಾತ್ರೆ ಪರಿಕರಗಳನ್ನು ಸಾಗಿಸುವು ತ್ರಾಸದಾಯಕವಾಗಿರುವುದರಿಂದ ಮಾಡದೆ ಇರಹುದು. ಜೊತೆಗೆ ದೇವರ ಕಾಡಿನಲ್ಲಿ ಬೆಂಕಿ ಹಚ್ಚುವುದು ಸೌದೆ ಕಡಿಯುವುದು ಹಾಗೆಯೇ ರಾತ್ರಿಯ ವೇಳೆ ತೆಂಗುವುದು ನಿಷೇಧವಿರುವುದರಿಂದ ಇಲ್ಲಿ ಎಲ್ಲರೂ ದೇವರಿಗೆ ಬಲಿ ನೀಡಿ ಬಲಿ ಪ್ರಾಣಿಯನ್ನು ಮನೆಗೆ ತೆಗೆದುಕೊಂಡು ಹೋಗಿ ಅಡುಗೆ ಮಾಡಿ ಅಲ್ಲಿ ಎಡೆಯೊಪ್ಪಿಸುತ್ತಾರೆ.

೧೦. ಬಯಲು ಸೀಮೆ ಜಾತ್ರೆಗಳಲ್ಲಿ ಒಂದು ಗ್ರಾಮ ಅಥವಾ ಸುತ್ತಮುತ್ತಲ ಹಲವಾರು ಗ್ರಾಮಗಳು ನಿಗದಿಪಡಿಸಿದ ದಿನಾಂಕದಂದು ಎಲ್ಲರೂ ಒಂದೊಂದು ಜವಾಬ್ದಾರಿಯನ್ನು ವಹಿಸಿಕೊಂಡು ಜಾತ್ರೆಯನ್ನು ನಡೆಸುತ್ತಾರೆ. ಕೆಲವು ಗ್ರಾಮಗಳಲ್ಲಿ ಪಟೇಲರು, ಗೌಡರು, ಗ್ರಾಮದ ಯಜಮಾನರು ಹೀಗೆ ಗ್ರಾಮದ ಹಿರಿಯ ನಾಯಕರ ಸಮ್ಮುಖದಲ್ಲಿ ನಡೆಯುತ್ತದೆ. ಇದೆ ರೀತಿಯಲ್ಲಿ ಕೊಡಗಿನಲ್ಲಿರುವ ಪ್ರತಿಯೊಂದು ದೇವಾಲಯಗಳಿಗೂ ದೇವಾಯದ ಮುಖ್ಯಸ್ಥನಿರುತ್ತಾನೆ. ಈತನನ್ನು ತಕ್ಕ ಮುಖ್ಯಸ್ಥನೆಂದು ಕರೆಯುತ್ತಾರೆ. ಈತನೇ ಆ ಗ್ರಾಮಕ್ಕೆ ಅಥವ ಆ ದೇವಾಲಯದ ಕೆಲಸ ಕಾರ್ಯಗಳನ್ನು ನಡೆಸಿಕೊಂಡು ಬರುವವನಾಗಿರುತ್ತಾನೆ. ಆ ದೇವಾಲಯದ ದೇವರ ಕಿರೀಟ, ಚಿನ್ನಾಭರಣ, ಎಲ್ಲವೂ ದೇವತಕ್ಕ ಮುಖ್ಯಸ್ಥರ ಮನೆಯಲ್ಲಿಯೇ ಇರುತ್ತದೆ. ದೇವ ಮುಖ್ಯಸ್ಥನು ಆ ದೇವಾಲಯದ ತಕ್ಕ ಮುಖ್ಯಸ್ಥನಾಗಿದ್ದು ಜಾತ್ರೆ ಅಥವಾ ಹಬ್ಬ ಪ್ರಾರಂಭದ ದಿನ ಇವರ ಮನೆಯಿಂದಲೆ ದೇವರಿಗೆ ಸಂಬಂಧಿಸಿದ ಮೂರ್ತಿ, ಆಭರಣ ಒಡವೆಗಳನ್ನು ಧಾರ್ಮಿಕ ವಿಧಿ ವಿಧಾನಗಳ ಮೂಲಕ ದೇವಾಲಯದ ಹತ್ತಿರ ತರುತ್ತಾರೆ. ಜಾತ್ರೆ, ಹಬ್ಬ, ಕಳೆದ ನಂತರ ಪುನಃ ಧಾರ್ಮಿಕ ವಿಧಿ ವಿಧಾನಗಳ ಮೂಲಕ ಇವರ ಮನೆಗೆ ಹಿಂದಿರುಗಿಸಲಾಗುತ್ತದೆ.

ಜಾತ್ರೆ ಹಬ್ಬಗಳ ಪ್ರಾರಂಭ ದಿನದಿಂದ ಅಂತಿಮ ದಿನದವರೆಗೂ ಈ ತಕ್ಕ ಮುಖ್ಯಸ್ಥನ ಮಾರ್ಗದರ್ಶನ ಮುಂದಾಳತ್ವದಲ್ಲಿ ಇತರೆ ಜನರು ಸೇರಿ ಜಾತ್ರೆಯ ಕೆಲಸ ಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಾರೆ.

ಹೀಗೆ ಮೇಲೆ ತಿಳಿಸಿದಂತೆ ಬಯಲು ಸೀಮೆಯ ಜಾತ್ರೆಗಳೊಂದಿಗೆ ಕೊಡಗಿನ ಜಾತ್ರೆಗಳ ಸ್ವರೂಪವನ್ನು ತೌಲನಿಕವಾಗಿ ನೋಡಿದಾಗ ಕಂಡು ಬಂದ ಅಂಶವೆಂದರೆ ಕೊಡಗಿನಲ್ಲಿ ನಡೆಯುವ ಜಾತ್ರೆಗಳು ಬಹಳ ವಿಶೇಷವು ಹಾಗೂ ವಿಶಿಷ್ಟವು ಆಗಿದೆ. ಇಲ್ಲಿನ ಜಾತ್ರೆಗಳು ಇಲ್ಲಿನ ಭೌಗೋಳಿಕ ಜನರ ನಂಬಿಕೆ ಆಚಾರ ವಿಚಾರಗಳ ಹಿನ್ನಲೆಯಲ್ಲಿ ಬೆಸೆದುಕೊಂಡು ಇಲ್ಲಿನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಧಾರ್ಮಿಕ ಆಚರಣೆಯಾಗಿದೆ.

ಕೊಡಗಿನಲ್ಲಿ ನದಿ ತೀರಗಳಲ್ಲಿ, ಬೆಟ್ಟಗುಡ್ಡಗಳಲ್ಲಿ ಈಗಲೂ ಕಂಡುಬರುವ ದಟ್ಟ ಅರಣ್ಯ ಭಾಗಗಳಿಗೆ ಕಾರಣ ಕೊಡಗಿನ ಸಂಸ್ಕೃತಿಯಲ್ಲಿರು ಅರಣ್ಯ ರಕ್ಷಣಾ ವಿಚಾರ. ಪ್ರತಿಯೊಂದು ಊರಿನಲ್ಲೂ ದೇವರ ಕಾಡು ಎಂಬ ಹೆಸರಿನಲ್ಲಿ ಕಾಡುಗಳನ್ನು ರಕ್ಷಿಸಲಾಗುತ್ತದೆ. ಈ ಕಾಡು ಬೇಟೆ ಅಯ್ಯಪ್ಪ ದೇವರ ನೆಲೆಯೆಂದು ಅವರ ನಂಬಿಕೆ. ಕೊಡಗಿನ ಬಹಳಷ್ಟು ದೇವಾಲಯಗಳು ಇರುವುದು ಇಂತಹ

ದೇವರ ಬನದಲ್ಲಿಯೇ. ಇಲ್ಲಿ ಹಬ್ಬ ಜಾತ್ರೆಗಳು ನಡೆದರೂ ಸಹ ಇಲ್ಲಿನ ಅರಣ್ಯ ನಾಶವಾಗುವುದಿಲ್ಲ. ಏಕೆಂದರೆ ಅತಿಕ್ರಮ ಪ್ರದೇಶ ಮಾಡಿದವರಿಗೆ ಹಾಗೂ ಅರಣ್ಯ ನಾಶ ಮಾಡುವರಿಗೆ ದೇವರು ಶಾಪ, ಕಷ್ಟಕಾರ್ಪಣ್ಯ ನೀಡುತ್ತಾನೆಂಬುದು ಪ್ರತಿಯೊಬ್ಬರ ನಂಬಿಕೆ. ಈ ರೀತಿಯ ನಂಬಿಕೆಯಿಂದ ಒಂದು ಚಿಕ್ಕ ಮರದ ಕಡ್ಡಿ ಅಥವಾ ತರಗೆಲೆಯೂ ಸಹ ಯಾರು ಮುಟ್ಟುವುದಿಲ್ಲ. ಅಲ್ಲಿನ ಹಣ್ಣು ಹಂಪಲು ಪ್ರಾಣಿಗಳಿಗೆ ಆಹಾರವಾದರೆ, ಒಣಗಿದ ಮರಕಡ್ಡಿಗಳು, ಹಣ್ಣುಗಳು, ಹೂಗಳು ಎಲ್ಲವೂ ಸೂಕ್ಷ್ಮ ಬ್ಯಾಕ್ಟೀರಿಯಾಗಳಿಂದ ಕೊಳೆತು ಅಲ್ಲಿಯೇ ಗೊಬ್ಬರವಾಗಿ ಗಿಡಮರ ಬಳ್ಳಿಗಳ ಪುನರ್ ಸೃಷ್ಟಿ ಸಹಾಯವಾಗುತ್ತದೆ. ಕೊಡಗಿನ ಧಾರ್ಮಿಕ ಆಚರಣೆಯಿಂದಾಗಿ ಈ ರೀತಿ ಅರಣ್ಯ ಸಂರಕ್ಷಣೆಯಾಗಿ ಉತ್ತಮ ಪರಿಸರ ಉಂಟಾಗುತ್ತದೆ.

ಕಾವೇರಿ ನದಿಯನ್ನು ಕೊಡಗಿನ ಕುಲದೈವ ಆರಾಧ್ಯದೈವವಾಗಿ ತಲತಲಾಂತರದಿಂದ ಪೂಜಿಸುತ್ತ ಬಂದು ಆ ದೇವರ ಹೆಸರಿನಲ್ಲಿ ಪ್ರತಿವರ್ಷ ಹಬ್ಬ ಜಾತ್ರೆಯನ್ನು ಆಚರಿಸುತ್ತ ಬಂದು ಕಾವೇರಿ ನದಿಯು ಕಲುಷಿತವಾಗದಂತೆ ಅದನ್ನು ಸಂರಕ್ಷಿಸುತ ಬಂದಿದ್ದಾರೆ. ಈ ರೀತಿಯ ಧಾರ್ಮಿಕ ನಂಬಿಕೆಯಿಂದಾಗಿ ಇಲ್ಲಿನ ನದಿಗಳ ಸಂರಕ್ಷಣೆ ಉಂಟಾಗುತ್ತಿದೆ.

ಕೊಡಗಿನಲ್ಲಿ ನಡೆಯುವ ಹಬ್ಬ, ಉತ್ಸವ ಕರಗ ಮತ್ತು ಜಾತ್ರೆ ಎಂಬ ಧಾರ್ಮಿಕ ಆಚರಣೆಗಳಲ್ಲಿ ಸ್ತ್ರೀಪುರುಷರೆಂಬ ಭೇದಭಾವವಿಲ್ಲದೆ ಒಟ್ಟಾಗಿ ಪಾಲ್ಗೊಂಡು ದೈವದ ಮುಂದೆ ಎಲ್ಲರೂ ಸಮಾನರು ಎಂಬ ತತ್ವವನ್ನು ಸಾರಲಾಗುತ್ತದೆ.

ಕೊಡವರ ದೇಶಕೆಟ್‌ಪಾಟ್ ನಲ್ಲಿ ಹೇಳಿರುವಂತೆ ಇಡಿಯ ದೇಶಕ್ಕೆ ಒಬ್ಬಳೆ ಮಾತೆ ಕಾವೇರಿಯೂ, ನಾಡಿಗೆ ಒಬ್ಬ ಮಹಾದೇವನೂ, ಗ್ರಾಮಕ್ಕೆ ಒಬ್ಬಳು ಭಗವತಿಯೂ, ಕೇರಿಗೊಬ್ಬ ಅಯ್ಯಪ್ಪನೂ, ಓಡೆಗೊಬ್ಬ ನಾಥನು, ಒಣಿಗೊಬ್ಬ ಪೂದನೂ (ಗುಳಿಗನೂ) ಪ್ರತಿ ಕುಟುಂಬಕ್ಕೆ ಒಬ್ಬ ಕಾರೋಣನೂ (ವಂಶದ ಹಿರಿಯ)ಎಂಬಂತೆ ಪ್ರಕೃತಿಯ ಚರಾಚರ ವಸ್ತುಗಳಲ್ಲಿ ದೇವರ ಅಸ್ತಿತ್ವವನ್ನು ಕಂಡು ಭಾಷೆ, ಆಚಾರವಿಚಾರ ಮತ್ತು ಸಂಸ್ಕೃತಿಗಳ ದೃಷ್ಟಿಯಿಂದ ವಿಭಿನ್ನವಾದ ಜಿಲ್ಲೆಯಾಗಿದೆ.

## ೪.೭ ಜಾತ್ರೆಗಳ ಕ್ಷೇತ್ರಾಧ್ಯಯನದ ಪ್ರಾಥಮಿಕ ಮಾಹಿತಿ ವಿಶ್ಲೇಷಣೆ

### ೧. ಕುಲದೇವರ ಜಾತ್ರೆ ಆಚರಣೆ ಮತ್ತು ಕುಟುಂಬ ಸದಸ್ಯರ ಭಾಗವಹಿಸುವಿಕೆ

ದೇವನೊಬ್ಬ ನಾಮ ಹಲವು ಎಂಬ ನಾಣ್ನುಡಿಯಂತೆ ಪ್ರತಿಯೊಂದು ಮತದವರಲ್ಲಿಯೂ ಕುಲದೇವರ ಆರಾಧನೆಯು ಅಸ್ಥಿತ್ವದಲ್ಲಿದೆ. ಪ್ರತಿಯೊಂದು ಕುಟುಂಬವು ತನ್ನದೇ ಆದ ಕುಲದೇವರ ಮೂಲಕ ತನ್ನ ಕುಲವನ್ನು ಬಿಂಬಿಸಿಕೊಳ್ಳುತ್ತದೆ. ಪ್ರತಿಯೊಂದು ಕುಲವೂ ಸಹ ತನ್ನ ಕುಲದೇವರ ಸಂತೃಪ್ತಿಗಾಗಿ ಜಾತ್ರೆ, ಸಂಪ್ರದಾಯ, ಆಚರಣೆಗಳನ್ನು ಪರಂಪರಾನುಗತವಾಗಿ ನಡೆಸಿಕೊಂಡು

ಬರುತ್ತಿದ್ದಾರೆ. ಭಾಗಶಃ ಕೊಡಗಿನ ಎಲ್ಲಾ ವರ್ಗದವರು ಸಹ ತಮ್ಮ ಕುಲದೇವರ ಆರಾಧನೆಯ ಮೂಲಕ ಅನುಗ್ರಹ ಪಡೆಯಲು ಇಚ್ಚಿಸುತ್ತಾರೆ.

ಹೀಗೆಯೇ ವಸುದೈವಕುಟುಂಬ ಎನ್ನುವ ನಾಣ್ನುಡಿಯಂತೆ ಕುಟುಂಬ ಮಾನವನ ಸಮೂಹ ಜೀವನದ ಅವಿಚ್ಛಿನ್ನವಾದ ಅಂಗ. ಅದನ್ನು ಮಾನವನ ಬದುಕಿನ ಒಂದು ಅನಿವಾರ್ಯ ಅಂಗವೆಂಬಂತೆ ಸಂರಕ್ಷಿಸಿಕೊಂಡೇ ಬಂದಿದ್ದಾನೆ. ಕುಟುಂಬವು ಸಂಪ್ರದಾಯಶಾಸ್ತ್ರ, ಆಚಾರ, ವಿಚಾರ ಮೌಲ್ಯಗಳನ್ನು ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ ವರ್ಗಾಯಿಸುವ ಸಾಮಾಜೀಕರಣದ ಘಟಕವಾಗಿ ಕಾರ್ಯನಿರ್ವಹಿಸುತ್ತದೆ. ತಮ್ಮ ಕುಲದೇವರ ಆರಾಧನೆಗಾಗಿ ಕುಟುಂಬದ ಇತರ ಸದಸ್ಯರೊಂದಿಗೆ ಸಂತೋಷದ ಕ್ಷಣಗಳನ್ನು ಪಡೆಯಲು ಮತ್ತು ತಮ್ಮ ದಿನನಿತ್ಯದ ಜಂಜಾಟದ ಬದುಕಿನಿಂದ ವಿಶ್ರಾಂತಿಯನ್ನು ಪಡೆಯಲು ಜಾತೆಯಲ್ಲಿ ಕುಟುಂಬದ ಸದಸ್ಯರೆಲ್ಲರೂ ಪಾಲ್ಗೊಳ್ಳುತ್ತಾರೆ.

**೨. ಜಾತ್ರೆಯ ಸಮಯದಲ್ಲಿನ ಆಹಾರ ಪದ್ಧತಿ**

ಉತ್ತಮ ಆರೋಗ್ಯಕ್ಕೆ ಉತ್ತಮ ಆಹಾರ ಎಂಬ ತತ್ವದ ಹಿನ್ನೆಲೆಯಲ್ಲಿ ಆಹಾರವು ಪ್ರತಿಯೊಂದು ಜೀವಿಗೂ ಮೂಲಭೂತ ಅವಶ್ಯಕತೆಯಾಗಿದೆ. ಈ ನಿಟ್ಟಿನಲ್ಲಿ ಪ್ರತಿಯೊಂದು ಜೀವಿಯೂ ತನ್ನದೇ ಆದ ವಿಶಿಷ್ಟ ಆಹಾರ ಶೈಲಿ ರೂಢಿಸಿಕೊಂಡಿರುತ್ತದೆ. ಆಹಾರ ಪದ್ಧತಿಯು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನ ರೀತಿಯಲ್ಲಿ ಗುರುತಿಸಬಹುದಾಗಿದೆ. ದೇವರ ಕಾರ್ಯಗಳನ್ನು ಹೆಚ್ಚಾಗಿ ಮಡಿ, ಮೈಲಿಗೆ ನಿತ್ಯ ನಿಯಮಗಳಿಂದ ಕೊಡಗಿನ ಬಹುಪಾಲು ಮಂದಿ ಸಂಪ್ರದಾಯಸ್ಥರ ಕೌಟುಂಬಿಕ ಹಿನ್ನೆಲೆಯನ್ನು ಹೊಂದಿ ವೈದಿಕ ಆಚರಣೆಗಳ ಪ್ರಭಾವ ಹೆಚ್ಚಾಗಿದೆ. ಜಾತ್ರೆಗಳ ಸಂದರ್ಭದಲ್ಲಿ ಹೆಚ್ಚಾಗಿ ಕಟ್ಟುಪಾಡುಗಳನ್ನು ಗೌರವಿಸಿ ಅವುಗಳನ್ನು ಮೀರದಂತೆ ಭಕ್ತಿ ಶ್ರದ್ಧೆಯಿಂದ ಪಾಲಿಸುತ್ತಾರೆ. ಮಾಂಸಾಹಾರವು ನಮ್ಮ ದೇವರಿಗೆ ನಿಷಿದ್ಧ. ಒಂದು ವೇಳೆ ಮಾಂಸಾಹಾರ ಸೇವನೆ ಮಾಡಿದರೆ ಅಪಶಕುನಗಳು ಸಂಭವಿಸುತ್ತವೆ ಎಂಬ ನಂಬಿಕೆಗಳು ಜನರಲ್ಲಿ ಜೀವಂತವಾಗಿವೆ.

ಸಾಮಾನ್ಯವಾಗಿ ಹೆಣ್ಣು ದೇವತೆಗಳ ಜಾತ್ರೆಗಳಲ್ಲಿ ಹೆಚ್ಚಾಗಿ ಬಲಿ ಆಚರಣೆಗಳನ್ನು ಕಾಣಬಹುದಾಗಿದೆ. ಮಾರಿ ಪನ್ನಂಗಾಲತಮ್ಮ, ಚೌಡಿ ಇತರೆ ದೇವತೆಗಳಿಗೆ ಬಲಿ ನೀಡದೆ ಹೋದರೆ ಮಾರಿ ಮುನಿದಾಳು ಎಂಬ ನಂಬಿಕೆಯು ಬಲವಾಗಿದೆ. ಕೆಲವು ಜಾತ್ರೆಗಳಲ್ಲಿ ಶಾಸ್ತ್ರ ಪದ್ಧತಿಗಳ ಆಚರಣೆಗಳೆಲ್ಲಾ ಮುಗಿದ ನಂತರ ದಿನಗಳಲ್ಲಿ ಮಾಂಸಾಹಾರ ಸೇವಿಸುತ್ತಾರೆ. ಕೊಡಗಿನ ಮಡಿಕೇರಿ ಮತ್ತು ವಿರಾಜಪೇಟೆ ತಾಲೂಕಿನ ಭಾಗದ ಜಾತ್ರೆಗಳಲ್ಲಿ ಸಾಮಾನ್ಯವಾಗಿ ಮೊದಲೆರಡು ದಿನ ದೇವರ ಉತ್ಸವ ಪೂಜೆ ಪುರಸ್ಕಾರ ನಡೆದ ಮೇಲೆ ಮಾರನೆಯ ದಿನ ಕೆಲವೊಂದು ದೇವರಿಗೆ ಬಲಿ ನೀಡಿ ಎಡೆ ಇಟ್ಟು ಮಾಂಸ ಆಹಾರ ಸೇವಿಸುತ್ತಾರೆ. ಸೋಮವಾರಪೇಟೆ ಭಾಗದಲ್ಲಿ ಬಹುಪಾಲು ಶೈವ ಜನಾಂಗದವರಿದ್ದು ಅವರುಗಳಲ್ಲಿ ಮಾಂಸಾಹಾರ ಸೇವನೆ ನಿಷಿದ್ದವಾಗಿರುತ್ತದೆ. ಆದರೆ ಹೆಣ್ಣುದೇವತೆ ಜಾತ್ರೆಗಳಲ್ಲಿ ಬಲಿ ಹಾಗೂ ಮಾಂಸಾಹಾರ ಸೇವನೆ ಇರುತ್ತದೆ.

## ೩. ಜಾತ್ರೆಯಲ್ಲಿ ಎಲ್ಲಾ ಜಾತಿಯರ ಭಾಗವಹಿಸುವಿಕೆ

ಭಾರತವು ವಿವಿಧತೆಯಲ್ಲಿ ಏಕತೆಯನ್ನು ಕಾಣುವ ನಾಡಾಗಿದ್ದು ಸುಮಾರು ೪೦೦೦ಕ್ಕಿಂತ ಹೆಚ್ಚು ಜಾತಿ ಉಪಜಾತಿಗಳಿಗೆ ಆಶ್ರಯ ನೀಡಿದೆ. ಈ ಹಿನ್ನೆಲೆಯಲ್ಲಿ ಜಾತ್ರೆಗೆ ಭಾವೈಕ್ಯದ ಸಂಕೇತಗಳಂತಿದ್ದು ಸಹೋದರತ್ವ ಸಮನ್ವಯ ಸಹಬಾಳ್ವೆಯ ಸಾಕಾರಕ್ಕೆ ಜಾತ್ರೆಗಳು ಸಹಕರಿಸುತ್ತವೆ. ಯಾವುದೇ ಒಂದು ವರ್ಗ, ಕುಲ, ಜಾತಿಗೆ ಸೀಮಿತವಾಗದೆ ಇಡೀ ಮಾನವ ಕುಲದ ಪ್ರತೀಕವಾಗಿ ಜಾತ್ರೆಗಳು ನಿಲ್ಲುತ್ತದೆ. ಮನುಕುಲದ ಶ್ರೇಯಸ್ಸಿಗೆ ಹಾಗೂ ಗ್ರಾಮದ ಏಳಿಗೆಗಾಗಿ ಜಾತಿಭೇದವನ್ನು ಮರೆತು ದೇವರ ಕಾರ್ಯಗಳಲ್ಲಿ ಕೈಜೋಡಿಸುತ್ತಾರೆ.

ಈಗಾಗಲೇ ತಿಳಿಸಿರುವಂತೆ ಜಾತ್ರೆಗಳಲ್ಲಿ ಹಲವು ರೀತಿಯ ಸಂಪ್ರದಾಯಗಳು ಆಚರಣೆಗಳು ಮಡಿವಂತಿಕೆ, ವಿಶೇಷವಾದ ಅಲಂಕಾರಗಳು ಅನಾದಿಕಾಲದಿಂದಲೂ ನಡೆದುಕೊಂಡು ಬರುತ್ತಿದೆ. ಜಾತ್ರೆಗಳು ಸೀಮಿತ ವ್ಯಾಪ್ತಿ ಹೊಂದದೆ ಪ್ರತಿಯೊಂದು ಜಾತಿಯವರು ಆಚರಣೆಗಳ ಹಿನ್ನೆಲೆಯಲ್ಲಿ ವಿಶಾಲ ವ್ಯಾಪ್ತಿಯನ್ನು ಹೊಂದಿ ದೇವರ ಸೇವೆಯಲ್ಲಿ ತೊಡಗಿಸಿಕೊಂಡು ಈ ಮೂಲಕ ಜಾತ್ರೆಗೆ ಹೊಸ ಮೆರಗು ಬರುತ್ತದೆ.

ಜಾತ್ರೆಯಲ್ಲಿ ದೇವರ ಕೃಪೆಗೆ ಪಾತ್ರರಾಗಲು ಪ್ರತಿಯೊಂದು ಜಾತಿಯವರು ಯಾವುದೇ ಭೇದಭಾವ ವಿಲ್ಲದ ಭಾಗವಹಿಸುತ್ತಾರೆ. ಜಾತ್ರೆಗೆ ಮುನ್ನ ಆಡಳಿತ ಮಂಡಳಿಯನ್ನು ರಚಿಸಿಕೊಂಡು ಊರಿನ ಸಮಸ್ತ ಜನರು ಸಭೆಯಲ್ಲಿ ಭಾಗವಹಿಸಿ ಯಾವ ಯಾವ ಕೆಲಸ ಕಾರ್ಯಗಳನ್ನು ಮಾಡುವಂತೆ ತಿಳಿಸುತ್ತಾರೆ. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ಜಾತಿಯವರು ದೇವರ ಕೆಲಸಗಳನ್ನು ಹಂಚಿಕೊಂಡು ಜವಾಬ್ದಾರಿಯಾಗಿ ಭಾಗವಹಿಸಿ ಜಾತ್ರೆಯ ಯಶಸ್ಸಿಗೆ ಕಾರಣರಾಗುತ್ತಾರೆ.

ದೇವರ ಪೂಜೆಯನ್ನು ಒಂದು ಜಾತಿಯವರು ಮಾಡಿದರೆ, ದೇವಸ್ಥಾನದ ಶುಚಿತ್ವವನ್ನು ಒಂದು ಜಾತಿಯವರು ಪ್ರಸಾದ ವಿನಿಯೋಗ ಮಾಡುವವರು ಒಂದು ಜಾತಿಯವರು, ದೇವಸ್ಥಾನದ ಅಲಂಕಾರವನ್ನು ಮಾಡುವವರು ಒಂದು ಜಾತಿಯವರು, ಜಾತ್ರೆಯಲ್ಲಿ ತೇರನ್ನು ಎಳೆಯುವಾಗಲು ಸಹ ಎಲ್ಲಾ ಜಾತಿಯವರು ಬಾಗವಹಿಸುತ್ತಾರೆ. ಜಾತ್ರೆಗಳು ಕೆಲವೇ ಜಾತಿಗಳಿಗೆ ಸೀಮಿತವಾಗಿರದೇ ಧರ್ಮ ಸಹಿಷ್ಣುತೆಯ ಪ್ರತೀಕವಾಗಿದೆ.

ಆದರೆ ನಾನು ಅಧ್ಯಯನ ನಡೆಸಿದ ಸಮಯದಲ್ಲಿ ಕೊಡಗಿನಲ್ಲಿ ಕೊಡವರು ಆಚರಿಸುವ ಕೆಲವೊಂದು ಜಾತ್ರೆಗಳಿಗೆ ಪರಿಶಿಷ್ಟಜಾತಿಯವರು ಬರುವುದಿಲ್ಲ. ಅಮ್ಮತ್ತಿಯಲ್ಲಿ ಆಚರಿಸುವ ಭಗವತಿ ಜಾತ್ರೆ ಹಾಗೂ ಮಕ್ಕಿ ಶಾಸ್ತವುನಲ್ಲಿ ನಡೆಯುವ ಜಾತ್ರೆಗಳಲ್ಲಿ ಹರಿಜನರು ದೇವಾಲಯದ ಸಮೀಪ ಬರದೆ ದೂರದಿಂದ ದೇವರನ್ನು ನೋಡಿ ತಮ್ಮ ನಮನವನ್ನು ಸಲ್ಲಿಸುತ್ತಾರೆ.

ಈ ರೀತಿಯಲ್ಲಿ ಪಾಲ್ಗೊಳ್ಳದಿರುವಿಕೆ ಇಡೀ ಕೊಡಗಿನಲ್ಲಿ ಕೈ ಬೆರಳು ಎಣಿಕೆಯಷ್ಟು ಮಾತ್ರ ಅದನ್ನು ಬಿಟ್ಟರೆ ಸಾಮಾನ್ಯವಾಗಿ ಇಲ್ಲಿ ಎಲ್ಲಾ ಜಾತಿಯವರು ಜಾತ್ರೆಗಳಲ್ಲಿ ಪಾಲ್ಗೊಳ್ಳುತ್ತಾರೆ.

**೪. ಜಾತ್ರೆಯ ಸಮಯದಲ್ಲಿನ ಹರಕಗೆಳ ಸ್ವರೂಪ**

ಜಾತ್ರೆಗಳಲ್ಲಿ ಹರಕೆಗಳದ್ದೆ ಒಂದು ವಿಶಿಷ್ಟ ಸ್ಥಾನವಾಗಿ ಕಂಡುಬರುತ್ತದೆ. ಹರಕೆಗಳು ಒಂದು ಸಾಂಪ್ರದಾಯಿಕ ಆಚರಣೆಯ ಒಂದು ಭಾಗವಾಗಿ ಕಂಡುಬರುತ್ತದೆ. ಭಕ್ತಾದಿಗಳು ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಸುಖಶಾಂತಿ ನೆಮ್ಮದಿಯ ಬದುಕನ್ನು ತಮ್ಮದಾಗಿಸಿಕೊಳ್ಳಲು ಹರಕೆಗಳು ದೇವರ ಸಾನಿಧ್ಯಕ್ಕೆ ಕರೆದೊಯ್ಯುವ ಮಾರ್ಗಗಳು ತಮ್ಮ ಇಷ್ಟಾರ್ಥಗಳ ಈಡೇರಿಕೆಗಾಗಿ ಅತ್ಯಂತ ಮಡಿ ಮೈಲಿಗೆ ಶ್ರದ್ಧಾ ಭಕ್ತಿಗಳಿಂದ ಹರಕೆಗಳನ್ನು ದೇವರಿಗೆ ಒಪ್ಪಿಸುತ್ತಾರೆ. ಹರಕೆಗಳು ಇಲ್ಲದೆ ಜಾತ್ರೆಗಳು ಇಲ್ಲ ಎನ್ನುವಷ್ಟರಮಟ್ಟಿಗೆ ಹರಕೆಗಳು ಜಾತ್ರೆಯ ಅವಿಭಾಜ್ಯ ಅಂಗಗಳಾಗಿವೆ.

ಕೊಡಗಿನ ಹಲವು ಜಾತ್ರೆಗಳಲ್ಲಿ ಹಲವು ರೀತಿಯ ಹರಕೆಗಳನ್ನು ಮಾಡಿಕೊಂಡು ಅದನ್ನು ಜಾತ್ರೆಯ ವೇಳೆಯಲ್ಲಿ ಒಪ್ಪಿಸುತ್ತಾರೆ. ಸಾಮಾನ್ಯವಾಗಿ ದೇವರಿಗೆ ಭಂಡಾರ ಹಾಕುವುದು, ದೇವರಿಗೆ ಹೂ ಮಾಲೆ ಅರ್ಪಿಸುವುದು, ಉರುಳು ಸೇವೆ ಮಾಡುವುದು, ಬಾಯಿಬೀಗ ಹಾಕುವುದು, ಕೆಂಡ ಹಾಯುವುದು, ಸಿಡಿ ಎಳೆಯುವುದು, ಕಳಸ ಹೊರುವುದು, ವೇಷ ಬದಲಾವಣೆ, ತ್ರಿಶೂಲ ಒಪ್ಪಿಸುವುದು, ತೊಟ್ಟಿಲು ಕಟ್ಟುವುದು ಎತ್ತು ಪಾರೋಟ ಮಾಡಿಸುವುದು, ಹಾಲು, ಬೆಣ್ಣೆ, ತುಪ್ಪ ಹಾಗೂ ದವಸ ಧಾನ್ಯಗಳನ್ನು ನೀಡುವುದು ಇವುಗಳೆಲ್ಲ ಸಾಮಾನ್ಯ ಹರಕೆಗಳಾಗಿವೆ.

ಪ್ರಾಣಿ ಬಲಿಯು ಒಂದು ವಿಶೇಷ ಆಚರಣೆ. ಸಾಮಾನ್ಯವಾಗಿ ಶಕ್ತಿ ದೇವತೆಗಳಿಗೆ ತಮ್ಮ ರೌದ್ರ ಅವತಾರವನ್ನು ಶಾಂತಿಗೊಳಿಸಲು ಪ್ರಾಣಿಬಲಿ ನೀಡುತ್ತಾರೆ. ಒಂದು ವೇಳೆ ಪ್ರಾಣಿ ಬಲಿ ನೀಡದೆ ಹೋದರೆ ದೇವಿ ಮುನಿದಾಳು ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಕೊಡಗಿನಲ್ಲಿ ಕುರಿ, ಕೋಳಿ, ಹಂದಿ ಬಲಿ ನೀಡುವುದು ಸಹ ಹರಕೆಯ ಸ್ವರೂಪವಾಗಿದೆ.

**೫. ಜಾತ್ರೆಯಲ್ಲಿ ಪರುವು ದಾಸೋಹ ಪದ್ಧತಿ.**

ಎಲ್ಲದಾನಕ್ಕಿಂತ ಅನ್ನದಾನ ಶ್ರೇಷ್ಠ ಎಂಬ ಮಾತಿದೆ. ಈ ಮಾತಿನಂತೆ ಅನ್ನದಾನ ಮಾಡಿದರೆ, ತಮ್ಮ ಕಷ್ಟಗಳು ದೂರವಾಗಿ ಕುಟುಂಬಕ್ಕೆ ಅಷ್ಟ ಐಶ್ವರ್ಯಗಳು ಲಭಿಸುವುವು ಎಂದು ನಂಬಿದ್ದಾರೆ. ತಮಗೆ ಎಷ್ಟೆ ಆರ್ಥಿಕ ಸಂಕಷ್ಟಗಳಿದ್ದರೂ ಸಹ ಅವುಗಳನ್ನು ಬದಿಗೊತ್ತಿ ಅನ್ನದಾನವೇ ಮಹಾದಾನವೆಂದು ಅನ್ನ ಸಂತರ್ಪಣೆ ಮಾಡುತ್ತಾರೆ. ದಾಸೋಹ ಮಾಡುವುದರಿಂದ ಗ್ರಾಮವು ಸಮೃದ್ಧಿಯಾಗಿ ಊರು ತಣ್ಣಗಿರಲಿ ಎಂಬ ನಂಬಿಕೆ ಆಳವಾಗಿ ಬೇರೂರಿದೆ. ಈ ಮೇಲಿನ ಕಾರಣಗಳಿಂದ ಜಾತ್ರೆಯಲ್ಲಿ ಪರವು ಪದ್ಧತಿ ಜಾರಿಯಲ್ಲಿರುವುದು ಸರ್ವೆ ಸಾಮಾನ್ಯ.

ಜಾತ್ರೆಯೆಂದರೆ ಬೇರೆ ಬೇರೆ ಸ್ಥಳಗಳಿಂದ ಭಕ್ತಾದಿಗಳು ೨-೩ ದಿನಗಳ ಮುಂಚೆಯೆ ಆಗಮಿಸಿದ್ದು, ಅವರಿಗೆ ಊಟ ವ್ಯವಸ್ಥೆ ಮಾಡುವುದು, ಕಾಲು ನಡಿಗೆಯಿಂದ ಬರುವ ಭಕ್ತಾದಿಗಳಿಗೂ ದಾಸೋಹ ನೀಡಲಾಗುವುದು. ತಾವು ಬೆಳೆದ ಅಕ್ಕಿ, ಗೋಧಿ, ತರಕಾರಿ, ತೆಂಗಿನಕಾಯಿ, ಹಾಲು

ಇತ್ಯಾದಿಗಳನ್ನು ದೇವರಿಗೆ ನೀಡುವ ಹರಕೆ ಹೊತ್ತು ಹಾಗೂ ಅವುಗಳನ್ನು ದೇವಾಲಯಕ್ಕೆ ನೀಡುವುದು. ಇದನ್ನೆಲ್ಲ ಬಳಸಿ ದೇವಾಲಯದ ಸಮಿತಿಯವರು ಜಾತ್ರೆಗೆ ಬರುವ ಭಕ್ತರ ದಾಸೋಹ ವ್ಯವಸ್ಥೆಯನ್ನು ಮಾಡುವುದು ಕೊಡಗಿನ ಹಲವಾರು ಜಾತ್ರೆಗಳಲ್ಲಿ ಕಂಡುಬರುತ್ತದೆ. ಕೆಲವು ಜಾತ್ರೆಗಳಲ್ಲಿ ಕೆಲವು ಭಕ್ತರು ದಾಸೋಹ ನೀಡುವ ಹರಕೆಯನ್ನು ಹೊತ್ತುಕೊಂಡಿದ್ದು ಅದರಂತೆ ಅವರೊಬ್ಬರೆ ಅದೆಲ್ಲದರ ಖರ್ಚು ವೆಚ್ಚ ಮಾಡಿ ದಾಸೋಹ ನಡೆಸಿಕೊಡುತ್ತಾರೆ. ಪೂರ್ವಜರಿಂದಲೂ ಈ ದಾಸೋಹ ಪದ್ಧತಿ ಕುಟುಂಬದಲ್ಲಿ ನಡೆದುಕೊಂಡು ಬಂದಿರುವ ಸಂಪ್ರದಾಯವನ್ನೂ ಮುಂದುವರೆಸಿಕೊಂಡು ಬರುತ್ತಾರೆ. ಕೆಲವೊಂದು ಜಾತ್ರೆಗಳಲ್ಲಿ, ಪ್ರಸಾದವಾಗಿ ಪಂಚಾಮೃತ, ಕಡ್ಲೆವುಸ್ಲಿ, ಹೆಸರುಕಾಳು ಕೋಸಂಬರಿ, ಮಜ್ಜಿಗೆ ಪಾನಕ ಇವುಗಳನ್ನೆಲ್ಲ ಭಕ್ತರಿಗೆ ನೀಡುವುದು ಕಾಣಬಹುದಾಗಿದೆ.

**೬ ಬಲಿಕೊಡುವುದರ ಬಗ್ಗೆ**

ವೈದಿಕ ಆಚರಣೆಯ ಜೊತೆಗೆ ಬಲಿಕೊಡುವ ವಿಧಾನವೂ ಅನಾದಿ ಕಾಲದಿಂದಲೂ ಇದೆ. ಹಿಂದೆ ಯಜ್ಞಯಾಗಾದಿಗಳ ಸಂದರ್ಭದಲ್ಲಿ ಪ್ರಾಣಿ ಬಲಿ ಕೊಡುವುದು ರೂಢಿಯಲ್ಲಿತ್ತು. ಗ್ರಾಮಗಳಲ್ಲಿ ಕ್ಷಾಮ ತಲೆದೋರಿದ್ದರೆ ದೇವರ ಕೋಪ ಗ್ರಾಮಕ್ಕೆ ತಗಲಿದೆಯಾದ್ದರಿಂದ ದೇವರನ್ನು ತಣಿಸಲು ಬಲಿಕೊಡುವುದು ಇಂದಿಗೂ ಮುಂದುವರೆದಿದೆ. ಬಲಿಕೊಡುವ ಆಚರಣೆಯು ಐತಿಹ್ಯದ ಹಿನ್ನೆಲೆಯಲ್ಲಿ ಒಂದು ಮೌಢ್ಯ ವೆಂಬಂತೆ ಇಂದಿಗೂ ಆಚರಣೆಯಲ್ಲಿದೆ. ಈಗಾಗಲೇ ಬಲಿ ಆಚರಣೆಯೂ ಪ್ರಾಚೀನ ಕಾಲದಿಂದಲೂ ಇದೆ. ಬಲಿ ಕೊಡುವುದರಿಂದ ನಮ್ಮ ಇಡೀ ಗ್ರಾಮಕ್ಕೆ ಒಳ್ಳೆಯದಾಗುತ್ತದೆಂಬ ನಂಬಿಕೆ ಜನರಲ್ಲಿದೆ. ಆರೋಗ್ಯ ಸಮಸ್ಯೆಗಳಿಗಾಗಿ ಮಳೆ ಬೆಳೆ ಉತ್ತಮವಾಗಲಿ ಎಂದು ಮನೆಯ ಸಂಕಷ್ಟಗಳು ನಿವಾರಣೆಯಾಗಲಿ ಸಾಂಕ್ರಾಮಿಕ ರೋಗಗಳು ಗ್ರಾಮದಿಂದ ದೂರವಿರಲಿ ಎಂಬ ಇತ್ಯಾದಿ ಕಾರಣಗಳಿಗಾಗಿ ಬಲಿಕೊಡುವುದು ಅಸ್ತಿತ್ವದಲ್ಲಿದೆ.

ಸಮಾಜವು ಆಧುನೀಕರಣದತ್ತ ಸಾಗುತ್ತಿದ್ದಂತೆ ಜನರಲ್ಲಿ ವೈಚಾರಿಕತೆಯ ಮನೋಭಾವನೆ ಬೆಳೆದು ಬಲಿ ಆಚರಣೆಯು ಕಡಿಮೆಯಾಗುತ್ತಿದೆ. ಇದಕ್ಕೆ ಕಾನೂನಿನ ಬೆಂಬಲವೂ ಇದೆ. ಬಲಿಕೊಡುವುದನ್ನು ಕಾನೂನಿನ ಮೂಲಕ ನಿಷೇಧಿಸಲಾಗಿದ್ದು, ಈ ಕಾನೂನನ್ನು ಅನುಷ್ಠಾನಗೊಳಿಸಲು ಪೊಲೀಸ್ ರಕ್ಷಣೆಯಲ್ಲಿ ಜಾತ್ರೆಗಳನ್ನು ನಡೆಸಲಾಗುತ್ತಿದೆ. ಎಷ್ಟೇ ಕಾನೂನಿನ ನಿಯಂತ್ರಣವಿದ್ದರೂ ಬಲಿ ನೀಡುವುದು ಇಂದಿಗೂ ಮುಂದುವರೆಯುತ್ತಿದೆ.

**೭. ಜಾತ್ರೆಯ ಸಮಯದಲ್ಲಿ ಮನರಂಜನಾ ಕಾರ್ಯಕ್ರಮಗಳು**

ಜಾತ್ರೆಯೇ ಮನೋರಂಜನೆಯ ಒಂದು ಭಾಗ ಪ್ರಸ್ತುತ ದಿನದಲ್ಲಿ ಸಿನಿಮಾ ಟಿ.ವಿ. ಮನೋರಂಜನೆ ಯಾಗಿ ಇರುವಂತೆ ಹಿಂದಿನ ದಿನಗಳಲ್ಲಿ ಗ್ರಾಮೀಣ ಸೊಗಡನ್ನು ಬಿಂಬಿಸುವ ಸೂಕ್ತ ಪ್ರತಿಭೆಗಳನ್ನು ಬಿಂಬಿಸುವ ತಾಣಗಳಾಗಿ ಜಾತ್ರೆಗಳಲ್ಲಿ ಮನರಂಜನೆ ಕಾರ್ಯಕ್ರಮಗಳ ನಡೆಸಲಾಗುತ್ತದೆ. ದಿನನಿತ್ಯದ ಜಂಜಾಟದ ಬದುಕು, ಕೃಷಿಯ ಶ್ರಮದಾಯಕ ಕೆಲಸ , ಕೆಲಸದ

ಒತ್ತಡ ಇವುಗಳಿಂದ ಸ್ವಲ್ಪಮಟ್ಟಿಗೆ ಮನಸ್ಸನ್ನು ಉಲ್ಲಾಸಗೊಳಿಸಲು ಜಾತ್ರೆಯ ಸಮಯದಲ್ಲಿ ಮನರಂಜನೆಯ ಕಾರ್ಯಕ್ರಮವು ಅತ್ಯಂತ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತದೆ.

ಈಗಾಗಲೇ ತಿಳಿದಿರುವಂತೆ ಮನರಂಜನೆಯು ಜಾತ್ರೆಯ ಮುಖ್ಯಕೇಂದ್ರವಾಗಿದ್ದು, ಜಾತ್ರೆಯ ಸಂದರ್ಭದಲ್ಲಿ ಆಡುವಂತಹ ಕೋಲಾಟ, ನಾಟಕ, ದೊಡ್ಡಾಟ, ಭಜನೆ, ಭೂತ ಕುಣಿತ, ತೆಂಗಿನಕಾಯಿಗೆ ಗುಂಡು ಹಾರಿಸುವುದು, ನೃತ್ಯ ಮಾಡುವುದು, ಕೆಸರುಗದ್ದೆ ಓಟ, ಇನ್ನೂ ಮುಂತಾದ ಮನರಂಜನಾ ಕಾರ್ಯಕ್ರಮಗಳನ್ನು ಜಾತ್ರೆಗಳಲ್ಲಿ ಪ್ರದರ್ಶಿಸಲಾಗುತ್ತದೆ. ವರ್ಷಪೂರ್ತಿ ಶ್ರಮದಾಯಕವಾಗಿ ದುಡಿದು ದಣಿದ ದೇಹಕ್ಕೆ ಒಂದಿಷ್ಟು ಮನಸ್ಸಿನ ಉಲ್ಲಾಸಕ್ಕಾಗಿ ಹಾಗೂ ತಮ್ಮ ಬಂದು ಮಿತ್ರರೊಡನೆ ಸಂತೋಷದಿಂದ ಕಾಲಕಳೆಯಲು ಮನರಂಜನೆ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುತ್ತಾರೆ. ಗ್ರಾಮೀಣ ಜನರ ಸುಪ್ತ ಪ್ರತಿಭೆಗಳನ್ನು ಅನಾವರಣಗೊಳಿಸಲು ಜಾತ್ರೆಗಳು ವೇದಿಕೆಯಾಗಿ ರೂಪುಗೊಂಡಿವೆ. ಮನೋರಂಜನೆಯು ಸಂಭ್ರಮದ ಸಂತೋಷದ ಸೂಚಕ, ಲವಲವಿಕೆ, ಉತ್ಸಾಹದಿಂದ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳಲು ಸಹಾಯಕವಾಗುತ್ತದೆ. ಆಧುನೀಕರಣ ನಗರೀಕರಣ ಹೆಚ್ಚಾದಂತೆಲ್ಲಾ ಮನರಂಜನೆಯ ಮಾಧ್ಯಮಗಳು ಬದಲಾಗುತ್ತ ಹೋದವು. ಇತ್ತೀಚಿನ ದಿನಗಳಲ್ಲಿ ಸಿನಿಮಾ ಆರ್ಕೆಸ್ಟ್ರಾ ವಸ್ತುಪ್ರದರ್ಶನಗಳ ಆಕರ್ಷಣೆ ಹೆಚ್ಚಾಗಿರುವುದರಿಂದ ಜಾತ್ರೆಗಳಲ್ಲಿ ಮನೋರಂಜನೆಯು ಕೇವಲ ಸಾಂಪ್ರದಾಯಿಕವಾಗಿ ಸ್ವಲ್ಪಮಟ್ಟಿಗೆ ನಡೆಸುತ್ತಿದ್ದಾರೆ. ಹಿಂದೆ ಜಾತ್ರೆಗಳಲ್ಲಿ ಹರಿಕಥ, ನಾಟಕ, ಈ ಮನೋರಂಜನೆಯ ಕಾರ್ಯಕ್ರಮ ಬಹಳವಾಗಿ ಇರುತ್ತಿತ್ತು. ಅಂದರೆ ಇತ್ತೀಚೆಗೆ ಇವುಗಳ ಅಸ್ತಿತ್ವ ಕಡಿಮೆಯಾಗುತ್ತಿದೆ. ಇವುಗಳ ಬಗ್ಗೆ ಮುಂದಿನ ಪೀಳಿಗೆಗೆ ಚಿತ್ರಪಟಗಳ ಮೂಲಕ ತೋರಿಸುವ ಕಾಲ ಬರುವುದಂತು ಸತ್ಯ.

### ೮. ದನದ ಜಾತ್ರೆಗಳ ಬಗ್ಗೆ ವಿವರ

ಜಾತ್ರೆಗಳು ಕೇವಲ ಆರಾಧನೆ, ಮನೋರಂಜನೆ, ದೃಷ್ಟಿಯಿಂದಷ್ಟೇ ಅಲ್ಲದೆ ವ್ಯಾಪಾರ ದೃಷ್ಟಿಯಿಂದಲೂ ದನದ ಜಾತ್ರೆಗಳನ್ನು ಮಾಡಲಾಗುತ್ತದೆ. ದನಗಳು ಮತ್ತು ಕೃಷಿಗೆ ಸಂಬಂಧಿಸಿದ ಎಲ್ಲಾ ವಸ್ತುಗಳು ಮಾರಾಟ ಚಟುವಟಿಕೆಗಳು ಜಾತ್ರೆಗಳಲ್ಲಿ ಆಗುತ್ತದೆ. ಜಾತ್ರೆಗಳಲ್ಲಿ ದನಗಳಿಗೆ ಅಲಂಕಾರ ಮಾಡುವುದು ಒಂದು ಸಂಭ್ರಮದ ರೀತಿಯಲ್ಲಿ ಆಚರಿಸಲಾಗುತ್ತದೆ. ದನಗಳನ್ನು ಕೇವಲ ವ್ಯಾಪಾರದ ದೃಷ್ಟಿಯಿಂದ ಮಾತ್ರ ಮಾಡುವುದಲ್ಲದೆ ಸಾಂಸ್ಕೃತಿಕ ಆಚರಣೆಯಾಗಿ ಮೊದಲಿನಿಂದಲೂ ನಡೆದು ಬಂದಿದೆ. ದನಗಳನ್ನು ಜಾತ್ರೆಗಳಲ್ಲಿ ವಿಭಿನ್ನ ರೀತಿಯಲ್ಲಿ ಸಿಂಗರಿಸಿ ತಮ್ಮ ಸಂಭ್ರಮದ ಒಂದು ಭಾಗವಾಗಿ ಆಚರಿಸುತ್ತಾರೆ. ದನಗಳ ಜಾತ್ರೆಗಳಲ್ಲಿ ಕೃಷಿಕರು, ಲೇವಾದೇವಿಗಾರರು, ದನಗಳನ್ನು ಕೊಂಡುಕೊಳ್ಳುವ ಮತ್ತು ಮಾರುವ ಚಟುವಟಿಕೆಗಳನ್ನು ನಿರ್ವಹಿಸುತ್ತಾರೆ. ದನಗಳನ್ನು ಜಾತ್ರೆಗಳಲ್ಲಿ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಂತೆ ಮಾಡಿ ಮನೋರಂಜನೆಪಡುತ್ತಾರೆ. ದನಗಳ ಜಾತ್ರೆಗಳಲ್ಲಿ ದನಗಳನ್ನು ದೇವರಂತೆ ಕೂಡ ಆರಾಧನೆ ಮಾಡುತ್ತಾರೆ.

ಕೊಡಗಿನ ವಿರಾಜಪೇಟೆ ಹಾಗೂ ಮಡಿಕೇರಿ ತಾಲೂಕಿನಲ್ಲಿ ದನಗಳ ಜಾತ್ರೆ ಬಹಳ ವಿರಳ. ಆದರೆ ಸೋಮವಾರಪೇಟೆ ತಾಲೂಕಿನ ಶನಿವಾರಸಂತೆ ಹಾಗೂ ಸುತ್ತಮುತ್ತಲಿನ ಗ್ರಾಮಗಳಲ್ಲಿ ದನಗಳ ಜಾತ್ರೆ ನಡೆಯುತ್ತದೆ. ಇತ್ತೀಚಿನ ದಿನಗಳಲ್ಲಿ ದನಗಳ ಜಾತ್ರೆಗಳ ಬಗ್ಗೆ ಒಲವು ಕಡಿಮೆಯಾಗುತ್ತಿದೆ. ಆಧುನೀಕರಣ ಮತ್ತು ಶಿಕ್ಷಣ ಹೆಚ್ಚಾಗಿ ಜನರು ದನಗಳ ಜಾತ್ರೆಗಳು ಕಡಿಮೆಯಾಗುತ್ತಿದೆ. ಕೃಷಿ ಚಟುವಟಿಕೆಗೆ ಆಧುನಿಕ ಯಂತ್ರೋಪಕರಣವನ್ನು ಹೆಚ್ಚಾಗಿ ಬಳಸುತ್ತಿರುವುದರಿಂದ ದನಗಳ ಕೊಳ್ಳುವ ಮತ್ತು ಮಾರುವ ಅವಶ್ಯಕತೆ ಇಲ್ಲದಿರುವುದರಿಂದ ದನಗಳ ಜಾತ್ರೆಗಳ ಬಗೆ ಆಸಕ್ತಿ ಕಡಿಮೆಯಾಗುತ್ತದೆ.

### ೯. ಜಾತ್ರೆ ಮತ್ತು ಸಾಮಾಜಿಕ ಸಹಕಾರ

ಕೂಡಿ ಬಾಳಿದರೆ ಸ್ವರ್ಗ ಸುಖ ಎಂಬ ಮಾತು ಜಾತ್ರೆಗಳ ಮೂಲಕ ಸಾಕಾರವಾಗುತ್ತದೆ. ಜಾತ್ರೆಯು ನಾಡಿನ ವಿವಿಧ ಜನ ಜನಾಂಗ ಜಾತಿ ಸಂಸ್ಕೃತಿ ಆಚಾರ ವಿಚಾರಗಳ ಹಿನ್ನೆಲೆಯಿಂದ ಬಂದದಾಗಿದೆ. ಎಲ್ಲರೂ ಒಂದೇ ಎಂಬ ಭಾವನೆಯಿಂದ ಜಾತ್ರೆಯ ಕೈಂಕರ್ಯಗಳಲ್ಲಿ ಭಾಗವಹಿಸಿ ಸರ್ವಧರ್ಮ ಸಹಿಷ್ಣುತೆಯನ್ನು ಬೆಳೆಸುತ್ತಾರೆ. ಪರಸ್ಪರ ಸಹಕಾರ ಸೌಹಾರ್ದದಿಂದ ಜಾತ್ರೆಯ ಎಲ್ಲಾ ಕಾರ್ಯಗಳಲ್ಲಿ ಭಾಗವಹಿಸುತ್ತಾರೆ. ಜಾತ್ರೆಗಳು ಸಾಮಾಜಿಕ ಸಹಕಾರ ಜೀವನದ ಸಾಧನಗಳಾಗಿವೆ. ಇದು ಸಹಬಾಳ್ವೆಯ ಸಂಕೇತವಾಗಿದೆ. ಜಾತ್ರೆಯ ಯಶಸ್ಸಿನ ಹಿಂದೆ ಹಲವಾರು ವ್ಯಕ್ತಿಗಳ ಸಹಕಾರ, ಸಹಬಾಳ್ವೆ, ಪರಿಶ್ರಮ ಅಡಗಿದೆ. ಜಾತ್ರೆಯ ಎಲ್ಲಾ ಕೆಲಸಗಳನ್ನು ಯಾವುದೇ ಜಾತಿ, ಮತ, ಭೇದಗಳಿಲ್ಲದೆ ಸರ್ವರೂ ಸಹಮತದಿಂದ ಭಾಗವಹಿಸುತ್ತಾರೆ. ಎಲ್ಲಾ ವರ್ಗದವರೂ ಆರ್ಥಿಕವಾಗಿ ಧನಸಹಾಯ ಮಾಡುವುದರ ಮೂಲಕ ಸಹಕಾರ ಮನೋಭಾವನೆಯನ್ನು ಮೆರೆದಿದ್ದಾರೆ. ವಿವಿಧ ಸಾಂಸ್ಕೃತಿಕ ಹಿನ್ನೆಲೆಯಿಂದ ಬಂದ ಜನರು ಒಂದುಗೂಡಿ ಎಲ್ಲಾ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಾರೆ. ಆ ಮೂಲಕ ಸಾಂಸ್ಕೃತಿಕ ಐಕ್ಯತೆಯನ್ನು ಕಾಣಬಹುದು. ಜಾತ್ರೆಯ ದೈವ ಕಾರ್ಯಗಳನ್ನು ಆಚರಣೆಗಳನ್ನು ಒಂದೊಂದು ಜಾತಿಯವರು ಹಂಚಿಕೊಂಡು ಅತ್ಯಂತ ಶ್ರದ್ದೆ ಭಕ್ತಿಯಿಂದ ಕ್ರಿಯಾವಿಧಿಗಳನ್ನು ಆಚರಿಸುತ್ತಾರೆ. ಹೀಗೆ ಕೊಡಗಿನಲ್ಲಿ ಜರುಗುವ ಜಾತ್ರೆಗಳು ಸಾಮಾಜಿಕ ಐಕ್ಯತೆಯ ಸಂಕೇತಗಳಾಗಿದ್ದು ಸಹಕಾರ, ಸಹಬಾಳ್ವೆ, ಸೌಹಾರ್ದಯುತ ಮನೋಭಾವನೆಯನ್ನು ಬೆಳೆಸಿ ಸಹಕಾರ ಜೀವನಕ್ಕೆ ನಾಂದಿಯಾಗಿವೆ.

### ೧೦. ಜಾತ್ರೆ ಮತ್ತು ಸ್ತ್ರೀಯರ ಮಡಿ ಮೈಲಿಗೆ ಹಾಗೂ ಪಾಲ್ಗೊಳ್ಳುವಿಕೆ

ಭಾರತೀಯ ಸಾಮಾಜಿಕತೆಯಲ್ಲಿ ಮಡಿ ಮೈಲಿಗೆ ಆಚರಣೆಗಳು ಸಂಪ್ರದಾಯದೊಂದಿಗೆ ಅನಾದಿಕಾಲದಿಂದಲೂ ಬೆಳೆದು ಬಂದಿದೆ.

## ಅಧ್ಯಾಯ-೫

## ಜಾತ್ರೆಯ ವಿಧಗಳು

೫.೧ ಮೋಜಿನ ಜಾತ್ರೆಗಳು

೫.೨ ವಸ್ತುಪ್ರದರ್ಶನದ ಜಾತ್ರೆಗಳು

೫.೩ ದನದ ಜಾತ್ರೆಗಳು

೫.೪ ದೇವ-ದೇವತೆಗಳ ಆರಾಧನಾ ಜಾತ್ರೆಗಳು

೫.೫ ಶಿಷ್ಟ ದೇವರ ಜಾತ್ರೆಗಳು

೫.೬ ಗ್ರಾಮೀಣ ದೇವರ ಜಾತ್ರೆಗಳು

೫.೭ ಕಗರ ಜಾತ್ರೆಗಳು

೫.೮ ಮುಸ್ಲಿಮರ ಉರುಸ್

ಅಧ್ಯಾಯ-೫

# ಜಾತ್ರೆಯ ವಿಧಗಳು

'ಜನಮರುಳೋ ಜಾತ್ರೆಮರುಳೋ' ಎಂಬ ನಾಣ್ನುಡಿ ಜಾತ್ರೆ ಜನರಿಂದ ಕಂಗೊಳಿಸುತ್ತದೆ. ಎಂಬುದನ್ನು ಮನವರಿಕೆ ಮಾಡಿಸುತ್ತದೆ. ಜಾತ್ರೆಗಳು ಪ್ರತಿ ಸಮಾಜಗಳ ರಸಮಯ ತಾಣಗಳ ಕೇಂದ್ರಗಳಾಗಿವೆ. ಮಾನವ ಸಮಾಜದ ಜೀವನಾಡಿಯಂತಿರುವ ಜಾತ್ರೆಗಳು ವೈವಿಧ್ಯಮಯ ವಾಗಿವೆ. ಜನರ ಅಭಿರುಚಿ, ಕಲ್ಪನೆ, ಕನಸು, ನಂಬಿಕೆಗಳಿಗೆ ತಕ್ಕಂತೆ ಜಾತ್ರೆಗಳು ಆಚರಣೆಯಲ್ಲಿದ್ದು, ಇವುಗಳನ್ನು ಒಂದು ಸಾಮಾಜಿಕ ನೆಲೆಯಲ್ಲಿ ವಿಂಗಡಿಸುವುದು ಕಷ್ಟದ ಕೆಲಸ. ಏಕೆಂದರೆ ಪ್ರಾಚೀನ, ಐತಿಹಾಸಿಕ, ಪೌರಾಣಿಕ ನಂಬಿಕೆಗಳೊಂದಿಗೆ ಬೆಸೆದುಕೊಂಡಿವೆ. ದೇವರಕಲ್ಪನೆ, ಧಾರ್ಮಿಕ ವಿಧಿ ವಿಧಾನ ಸಮಾಜದ ರೀತಿ -ನೀತಿ, ಆಚಾರ- ವಿಚಾರ, ರೂಢಿ-ಪದ್ಧತಿ, ಸಂಪ್ರದಾಯ ಸಂಸ್ಕೃತಿ, ಜೀವನ ಪದ್ಧತಿ ಮತ್ತು ಜೀವನ ವಿಧಾನಗಳೊಂದಿಗೆ ಹರಡಿಕೊಂಡಿರುವ ಜಾತ್ರೆಗಳನ್ನು ಯಾವ ಆಯಾಮದಿಂದ ವರ್ಗೀಕರಿಸಿದರೂ ಅಂತಹ ವರ್ಗೀಕರಣ ಅಪೂರ್ಣವಾಗುವುದೆಂದು ನನ್ನ ಭಾವನೆ, ಏಕೆಂದರೆ 'ಜಾತ್ರೆ' ಎಂಬ ಪದವು ಸಾಮಾ ಜಿಕ ಪರಿಕಲ್ಪನೆಯಷ್ಟೇ ಸಂಕೀರ್ಣ.

ಸಮಾಜದ ಬುದ್ಧಿಜೀವಿಗಳು, ವಿದ್ವಾಂಸರು, ಪಂಡಿತರು ತಮ್ಮದೇ ಆದ ದೃಷ್ಟಿ ಕೋನದಲ್ಲಿ ಜಾತ್ರೆಗಳ ವರ್ಗೀಕರಣ ಮಾಡಿದ್ದಾರೆ. ಜಗನ್ನಾಥ ಹೆಬ್ಬಾಳೆ ಅವರು "ಐತಿಹಾಸಿಕ ಜಾತ್ರೆಗಳು ಮತ್ತು ಪೌರಾಣಿಕ ಜಾತ್ರೆಗಳು"[೧] ಎಂದು ಎರಡು ವಿಧಗಳಾಗಿ ಜಾತ್ರೆಗಳನ್ನು ವರ್ಗೀಕರಿಸಿದ್ದಾರೆ. ಸಿ.ಎಂ.ಗೋವಿಂದರೆಡ್ಡಿಯವರು ಜಾತ್ರೆಗಳನ್ನು ಐದು ವಿಧಗಳಾಗಿ ವರ್ಗೀಕರಿಸಿದ್ದಾರೆ. ಅವುಗಳೆಂದರೆ "ಶಿಷ್ಟದೇವರುಗಳ ಜಾತ್ರೆಗಳು, ಗ್ರಾಮೀಣ ದೇವರುಗಳ ಜಾತ್ರೆಗಳು, ಜಾನುವಾರು ಜಾತ್ರೆಗಳು, ಕರಗ ಜಾತ್ರೆಗಳು, ಇತರೆ ಜಾತ್ರೆಗಳು"[೨] ಮೇಲುನೋಟಕ್ಕೆ ಎಲ್ಲಾ ಜಾತ್ರೆಗಳು ಏಕಪ್ರಕಾರವಾಗಿ ಕಂಡುಬರುತ್ತವೆಯಾದರೂ ಅವುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಜಾತ್ರೆಗಳಲ್ಲಿ ವೈವಿಧ್ಯತೆಯನ್ನು ಕಾಣುತ್ತೇವೆ. ಜಾತ್ರೆಗಳ ಸಾಮಾಜಿಕ ಸ್ವರೂಪ ಮತ್ತು ಹಲವು ಕಾರಣಗಳ ಆಧಾರದ ಮೇಲೆ ಹಾಗೂ ಅವುಗಳು ಸಾಮಾಜಿಕ ಆಚರಣೆಯ ನಿಯಮಗಳ ಆಧಾರದ ಮೇಲೆ ಜಾತ್ರೆಗಳನ್ನು ಪ್ರಮುಖವಾಗಿ ನಾಲ್ಕು ವಿಧಗಳಾಗಿ ವರ್ಗೀಕರಿಸಲಾಗಿದೆ.

- ಮೋಜಿನ ಜಾತ್ರೆಗಳು
- ವಸ್ತು ಪ್ರದರ್ಶನದ ಜಾತ್ರೆಗಳು

- ದನದ ಜಾತ್ರೆಗಳು
- ದೇವ-ದೇವತೆಗಳ ಆರಾಧನಾ ಜಾತ್ರೆಗಳು
- ಶಿಷ್ಟ ದೇವರ ಜಾತ್ರೆಗಳು
- ಗ್ರಾಮೀಣ ದೇವರ ಜಾತ್ರೆಗಳು
- ಕರಗ ಜಾತ್ರೆಗಳು
- ಮುಸ್ಲಿಮರ – ಉರುಸ್

## ೫.೧ ಮೋಜಿನ ಜಾತ್ರೆಗಳು

ಜಾತ್ರೆಗಳು ಸಾಮಾಜಿಕ ಸ್ವರೂಪಕ್ಕೆ ಅನುಗುಣವಾಗಿ ನಡೆಯುತ್ತವೆ. ಮೋಜಿನ ಜಾತ್ರೆಗಳು ಯುವ ಸಮುದಾಯವನ್ನು ಕೇಂದ್ರಬಿಂದುವನ್ನಾಗಿಟ್ಟುಕೊಂಡಿವೆ. ಆದರೂ ಎಲ್ಲಾ ವಯೋಮಾನದವರು ಈ ಬಗೆಯ ಜಾತ್ರೆಗಳಲ್ಲಿ ಭಾಗವಹಿಸುತ್ತಾರೆ. ಈ ಜಾತ್ರೆಗಳು ಸುಗ್ಗಿಯ ಸಂಭ್ರಮದಲ್ಲಿ ಆಚರಿಸಲ್ಪಡುತ್ತವೆ. ಇಂತಹ ಜಾತ್ರೆಗಳು ಗ್ರಾಮೀಣ ಆಚರಣೆಗಳ ಸ್ವರೂಪವನ್ನೊಳಗೊಂಡಿವೆ. ದೇಶೀಯ ಸೊಗಡನ್ನು ಬಿಂಬಿಸುವ ಗ್ರಾಮೀಣ ರೈತರ ಸಾಂಪ್ರದಾಯಿಕ, ನಂಬಿಕೆ, ಹರಕೆ, ಭಕ್ತಿಭಾವಗಳ ಸಮರ್ಪಣೆಯ ಉದ್ದೇಶವನ್ನೊಳಗೊಂಡಿವೆ. ಗ್ರಾಮೀಣರಿಗೆ ಮನರಂಜನೆ, ಕ್ರೀಡೆಯ ಅನುಭವ ನೀಡುವ ಜೊತೆಗೆ ಸ್ಪರ್ಧೆ ಮತ್ತು ಸಾಹಸ ಪ್ರದರ್ಶನ ಈ ಜಾತ್ರೆಗಳಲ್ಲಿ ಪ್ರಧಾನವಾಗಿರುತ್ತದೆ. ಮೋಜಿನ ಪಾತ್ರೆಗಳಲ್ಲಿ ನೆರೆದವರಿಗೆ ಸ್ಪರ್ಧೆ ನೋಡಲು ಉತ್ಸಾಹವಿದ್ದರೆ ಸ್ಪರ್ಧಾಳುಗಳಿಗೆ ತಾಕತ್ತು ಕೌಶಲ, ದೈಹಿಕ ಸಾಮರ್ಥ್ಯ, ಸಾಹಸ ಮೆರೆಯುವುದಕ್ಕೆ ಸದಾವಕಾಶವನ್ನು ಈ ಬಗೆಯ ಜಾತ್ರೆಗಳು ಒದಗಿಸುತ್ತವೆ. ಇಲ್ಲಿನ ಆಚರಣೆಗಳು ಸಾಂಪ್ರದಾಯಿಕವಾಗಿದ್ದು ಸಾಂಸ್ಕೃತಿಕ ಅಂಶಗಳನ್ನೊಳಗೊಂಡಿರುತ್ತವೆ. ಈ ಜಾತ್ರೆಗಳಲ್ಲಿ.

- ಹೋರಿಗಳ ಓಟ
- ಕೋಣಗಳ ಓಟ
- ಗುಂಡು ಎತ್ತುವುದು
- ಹೋರಿ ಹಿಡಿಯುವುದು
- ಜಟ್ಟಿ ಕಾಳಗ
- ಟಗರು ಕಾಳಗ
- ಕೋಳಿ ಕಾಳಗ
- ಮುಳ್ಳಿನ ಪಲ್ಲಕ್ಕಿ ಸೇವೆ
- ಊಟ್ಲುಮರ ಹತ್ತುವುದು

ಮೊದಲಾದ ಆಚರಣೆಗಳು ಪ್ರಮುಖವಾಗಿರುತ್ತವೆ.

**ಹೋರಿ ಅಥವಾ ಕೋಣಗಳ ಓಟ**

ಜಾತ್ರೆ ಸಮಯದಲ್ಲಿ ಇದರ ಭಾಗವಾಗಿ ಹೋರಿ ಅಥವಾ ಕೋಣಗಳ ಓಟದ ಸ್ಪರ್ಧೆಯನ್ನು ಏರ್ಪಡಿಸಲಾಗುತ್ತದೆ. ಇದು ಗ್ರಾಮೀಣ ಕ್ರೀಡೆಯಾಗಿ ಸಮಾಜದಲ್ಲಿ ಬಳಕೆಯಲ್ಲಿದೆ. ಇಂತಹ ಹೋರಿ ಅಥವಾ ಕೋಣಗಳನ್ನು ವಿಶೇಷವಾಗಿ ಆರೈಕೆ ಮಾಡಿರಲಾಗುತ್ತದೆ. ಹೋರಿ ಅಥವಾ ಕೋಣಗಳ ಓಟದ ಸ್ಪರ್ಧೆ ಇಲ್ಲದೆ ಆ ಜಾತ್ರೆಗೆ ಮನ್ನಣೆಯೇ ಇಲ್ಲ ಎನ್ನುವಂತೆ ಈ ಕಾರ್ಯ ಅದರೊಟ್ಟಿಗೆ ಸೇರಿಹೋಗಿದೆ. ಜಾತ್ರೆಯನ್ನು ಗೊತ್ತುಪಡಿಸಿದ ದಿನದಂದು ಸ್ಪರ್ಧೆಗೆಂದೇ ವಿಶೇಷವಾಗಿ ಆರೈಕೆ ಮಾಡಲಾದ ಹೋರಿ ಅಥವ ಕೋಣಗಳ ಓಟದ ಸ್ಪರ್ಧೆ ಏರ್ಪಡಿಸಲಾಗುತ್ತದೆ. ಗೊತ್ತುಪಡಿಸಿದ ಪ್ರದೇಶದಲ್ಲಿ ಈ ಸ್ಪರ್ಧೆ ಜರುಗುತ್ತದೆ. ಅಂದು ನೇಗಿಲಿಗೆ ಜೋಡೆತ್ತು ಅಥವಾ ಕೋಣಗಳನ್ನು ಕಟ್ಟಿ ಅವುಗಳ ನಾಯಕರು ಕೆಸರಿನ ಗದ್ದೆಯಲ್ಲಿ ತಯಾರಾಗಿರುತ್ತಾರೆ. ತೀರ್ಪುಗಾರರು ಒಪ್ಪಿಗೆ ಸೂಚಿಸುತ್ತಿದ್ದಂತೆ ಹೋರಿ ಅಥವಾ ಕೋಣಗಳನ್ನು ಕೆಸರಿನ ಗದ್ದೆಯನ್ನು ಲೆಕ್ಕಿಸದೆ ಗುರಿಯತ್ತ ಮುನ್ನುಗ್ಗಿಸುತ್ತಾರೆ.

ಗುರಿ ಮುಟ್ಟಿಸಲು ತಮ್ಮ ದನಗಳನ್ನು ಸದ್ದುಗದ್ದಲಗಳಮೂಲಕ ಹುರಿದುಂಬಿಸುತ್ತ ಓಡಿಸುತ್ತಾರೆ. ಯಾವ ದನಗಳು ಮೊದಲು ಗುರಿಮುಟ್ಟುತ್ತವೆಯೋ ಆ ದನಗಳು ಮತ್ತು ಅವುಗಳ ನಾಯಕ ಗೆದ್ದನೆಂದು ತೀರ್ಪು ನೀಡಲಾಗುತ್ತದೆ. ಗೆದ್ದ ದನಗಳ ನಾಯಕನಿಗೆ ಬಹುಮಾನ, ಬಿರುದು, ಪಾರಿತೋಷಕಗಳನ್ನು ನೀಡಿ ಗೌರವಿಸಲಾಗುತ್ತದೆ. ಈ ಸ್ಪರ್ಧೆಯನ್ನು ನೋಡಲು ಜನ ಸಾಗರದಂತೆ ಸೇರುತ್ತಾರೆ. ಕೆಲವು ಜಾತ್ರೆಗಳಲ್ಲಿ ಹೋರಿಗಳನ್ನು ಬಳಸಿದರೆ, ಕೆಲವು ಕಡೆ ಕೋಣಗಳನ್ನು ಸ್ಪರ್ಧೆಗಿಳಿಸಲಾಗುತ್ತದೆ. ಉದಾ:- ಕರಾವಳಿ ಪ್ರದೇಶಗಳಲ್ಲಿ ನಡೆಯುವ ಕಂಬಳ.

**ಗುಂಡು ಎತ್ತುವುದು**

ಗುಂಡು ಎತ್ತುವುದು ಜಾತ್ರೆಯ ಸಮಯದಲ್ಲಿನ ಗ್ರಾಮೀಣ ಕ್ರೀಡೆಯ ಒಂದು ಭಾಗವಾಗಿ ಜಾರಿಯಲ್ಲಿದೆ. ಗುಂಡು ಎತ್ತುವುದು ಜಾತ್ರೆಗಳಲ್ಲಿ ಮೋಜಿಗಾಗಿ, ಸ್ಪರ್ಧೆಯಾಗಿ, ಬಳಕೆಯಲ್ಲಿರುವ ಸರ್ವೇಸಾಮಾನ್ಯ ಜನಪದ ಕ್ರೀಡೆಯಾಗಿದೆ. ಬಲಶಾಲಿ ಯುವಚತುರರು, ಶಕ್ತಿಶಾಲಿಗಳು ಗುಂಡು ಎತ್ತುವ ಸ್ಪರ್ಧೆಯಲ್ಲಿ ಭಾಗವಹಿಸುತ್ತಾರೆ. ಜಾತ್ರೆಯ ಗೊತ್ತುಪಡಿಸಿದ ಸ್ಥಳದಲ್ಲಿ ಸ್ಪರ್ಧಾಳುಗಳು ಸೇರುತ್ತಾರೆ. ಈ ಸ್ಪರ್ಧೆಯನ್ನು ನೋಡಲು ಅಪಾರ ಸಂಖ್ಯೆಯಲ್ಲಿ ಜನರು ಸೇರಿರುತ್ತಾರೆ. ಜನರ ಸಮ್ಮುಖದಲ್ಲಿ ತಮ್ಮ ಶಕ್ತಿ ಸಾಮರ್ಥ್ಯ ಮತ್ತು ಚಾಣಕ್ಯತನದಿಂದ ಭಾರವಾದ ಗುಂಡನ್ನು ಎತ್ತಿದವನು ವಿಜಯಶಾಲಿ ಎಂದು ತೀರ್ಮಾನಿಸಲಾಗುವುದು. ಅಂತಹ ಸ್ಪರ್ಧಾಳು ಬಹುಮಾನದ ಜೊತೆಗೆ ಜನಮನ್ನಣೆಯನ್ನು ಪಡೆಯುತ್ತಾನೆ. ಇಂತಹ ಸ್ಪರ್ಧೆಯನ್ನು ನೋಡಲು ಮತ್ತು ಮೋಜಿಗಾಗಿ ಸಾವಿರಾರು ಜನ ಸೇರಿ ಆ ಪ್ರದೇಶದಲ್ಲಿ ಮೋಜಿನ ಜಾತ್ರೆಯ ಸನ್ನಿವೇಶ ಏರ್ಪಡುತ್ತದೆ.

**ಹೋರಿ ಹಿಡಿಯುವುದು**

ಜಾತ್ರೆಗಳಲ್ಲಿ ಹೋರಿ ಹಿಡಿಯುವ ಸ್ಪರ್ಧೆಯು ಮೋಜಿಗಾಗಿ ಮಾಡುವ ಒಂದು ಸ್ಪರ್ಧೆಯಾಗಿದ್ದು, ನೆರೆದ ಜನರಿಗೆ ಮನರಂಜನೆಯನ್ನು ನೀಡುತ್ತದೆ. ಇದು ನಮ್ಮ ಸಂಸ್ಕೃತಿಯನ್ನು ಬಿಂಬಿಸುತ್ತದೆ. ಸಾಕು ಪ್ರಾಣಿಗಳೊಂದಿಗಿನ ಈ ಸಮಾಜದ ಅವಿನಾಭಾವ ಸಂಬಂಧವನ್ನು ಸಂಪೋಷಿಸಿಕೊಂಡು ಬರುವ ಕೆಲಸವನ್ನು ಈ ಜನಪದ ಕ್ರೀಡೆ ಜೀವಂತವಾಗಿರಿಸುತ್ತದೆ. ಸ್ಪರ್ಧೆಗೆಂದೇ ತಯಾರು ಮಡಿದ ಬಲಶಾಲಿ ಹೋರಿಗೆ ಮೂಗುದಾರವನ್ನು ಹಾಕದೆ ಸ್ಪರ್ಧೆ ಗೊತ್ತುಪಡಿಸಿದ ಸ್ಥಳದಲ್ಲಿ ಬಿಡಲಾಗುತ್ತದೆ. ಆ ಹೋರಿಯನ್ನು ಹಿಡಿದು ಮಣಿಸಲು ಸ್ಪರ್ಧಾಳುಗಳನ್ನು ಆಹ್ವಾನಿಸಲಾಗುತ್ತದೆ. ಬಲಶಾಲಿಯಾದ ಹೋರಿಯನ್ನು ಹಿಡಿದು ಮಣಿಸುವುದು ಕಸರತ್ತಿನ ಕೆಲಸ. ಈ ಸ್ಪರ್ಧೆಯಲ್ಲಿ ಭಾಗವಹಿಸುವ ಸ್ಪರ್ಧಾಳುಗಳಿಗೆ ಗಂಡೆದೆ ಇರಬೇಕು. ಧೈರ್ಯಶಾಲಿ ಯುವಕರು ಇಂತಹ ಸ್ಪರ್ಧೆಯಲ್ಲಿ ಭಾಗವಹಿಸುತ್ತಾರೆ. ಹೋರಿಯನ್ನು ಹಿಡಿದು ಸೋಲಿಸಿದ ಯುವ ಸ್ಪರ್ಧಾಳುವಿಗೆ ಜಾತ್ರೆಯಲ್ಲಿ ನೆರೆದ ಜನರ ಸಮ್ಮುಖದಲ್ಲಿ ಬಹುಮಾನ ನೀಡಿ ಸನ್ಮಾನಿಸಲಾಗುವುದು. ತಮಿಳುನಾಡಿನಲ್ಲಿ ಪೊಂಗಲ್ ಹಬ್ಬದ ಸಂದರ್ಭದಲ್ಲಿ ಈ ಬಗೆಯ ಜನಪದ ಕ್ರೀಡೆ ಆಚರಣೆಯಲ್ಲಿದೆ.

**ಜಟ್ಟಿಕಾಳಗ**

ಜಾತ್ರೆಯ ಸಮಯದಲ್ಲಿ ಜಾರಿಯಲ್ಲಿರುವ ಜಾನಪದ ಕ್ರೀಡೆಗಳಲ್ಲಿ ಜಟ್ಟಿ ಕಾಳಗವು ಒಂದಾಗಿದೆ. ಜಟ್ಟಿ ಎಂದರೆ ಬಲಶಾಲಿ ಎಂದರ್ಥ. ಸಮಬಲಶಾಲಿಗಳ ನಡುವೆ ನಡೆಯುವ ಸ್ಪರ್ಧೆ ಇದಾಗಿದೆ. ಜಟ್ಟಿಕಾಳಗವನ್ನು ಮಲ್ಲಯುದ್ಧ ಕುಸ್ತಿ ಎಂದು ಜನಪದರು ಕರೆಯುತ್ತಾರೆ. ಈ ಸ್ಪರ್ಧೆಯು ನಮ್ಮ ಪ್ರಾಚೀನ ಸಮಾಜದ ಆರೋಗ್ಯಪೂರ್ಣ ಚಿತ್ರಣವನ್ನು ಕಲ್ಪಿಸಿಕೊಡುತ್ತದೆ. ಜಟ್ಟಿಕಾಳಗ ದೈಹಿಕ ಕಸರತ್ತಿನ ಕಾರ್ಯವಾಗಿದ್ದು ಇದಕ್ಕೆ ಸಾಕಷ್ಟು ತರಬೇತಿ ಅಗತ್ಯ. ಜಟ್ಟಿಕಾಳಗ ಜಾತ್ರೆಯ ದಿನದಂದು ತೀರ್ಪುಗಾರರ ಒಪ್ಪಿಗೆಯ ನಂತರ ಇಬ್ಬರು ಸಮಬಲಶಾಲಿ ಸ್ಪರ್ಧಾಳುಗಳ ನಡುವೆ ಕಾಳಗ ಶುರುವಾಗುತ್ತದೆ. ಸ್ಪರ್ಧೆಯಲ್ಲಿ ಒಬ್ಬ ಇನ್ನೊಬ್ಬನನ್ನು ತಳ್ಳುತ್ತ, ನೂಕುತ್ತ ಕುಸ್ತಿ ಮಾಡುತ್ತಾರೆ. ಅಂತಿಮವಾಗಿ ಯಾರು ಎದುರಾಳಿಯ ಬೆನ್ನನ್ನು ನೆಲಕ್ಕೆ ಬೀಳುವಂತೆ ಮಾಡುತ್ತಾನೋ ಆ ವ್ಯಕ್ತಿಯನ್ನು ವಿಜಯಶಾಲಿ ಎಂದು ತೀರ್ಪು ನೀಡಲಾಗುತ್ತದೆ.

**ಟಗರು ಕಾಳಗ**

ಜಾತ್ರೆಗಳ ಸಮಯದಲ್ಲಿ ಟಗರುಗಳ ಮಧ್ಯೆ ನಡೆಯುವ ಜನಪದ ಕ್ರೀಡೆ ಇದಾಗಿದೆ. ಈ ಕಾಳಗದಲ್ಲಿ ಭಾಗವಹಿಸುವ ಟಗರುಗಳನ್ನು ಅವುಗಳ ಮಾಲೀಕರು ಕಾಳಜಿಯಿಂದ ಆರೈಕೆ ಮಾಡಿರುತ್ತಾರೆ. ಈ ಕ್ರೀಡೆಯು ಎರಡು ಬಲಶಾಲಿ ಟಗರುಗಳ ನಡುವೆ ನಡೆಯುವ ಕಾಳಗವಾಗಿರುವುದರಿಂದ ಇದನ್ನು ಟಗರು ಕಾಳಗ ಎಂದು ಕರೆಯುವರು. ಈ ಸ್ಪರ್ಧೆಯಲ್ಲಿ ಭಾಗವಹಿಸುವ ಟಗರುಗಳ

ಕೊಂಬುಗಳ ಬಲಶಾಲಿಯಾಗಿದ್ದು ಈ ಸಮಯದಲ್ಲಿ ಅವುಗಳ ಹಣೆಯ ಭಾಗಕ್ಕೆ ದಪ್ಪ ಕಲ್ಲನ್ನಿಟ್ಟರೆ ಆ ಕಲ್ಲುಪುಡಿ ಪುಡಿಯಾಗುವಷ್ಟು ರಭಸವಾಗಿ ಅವು ಕಾಳಗದಲ್ಲಿ ತೊಡಗಿರುತ್ತವೆ ಎಂದು ಜನ ಹೇಳುತ್ತಾರೆ. ಯಾವ ಟಗರು ಎದುರಾಳಿ ಟಗರನ್ನು ಹೊಡೆದು ಉರುಳಿಸುತ್ತದೆಯೋ ಆ ಟಗರು ಜಯಶಾಲಿಯಾದಂತೆ, ಗೆದ್ದ ಟಗರಿನ ಮಾಲೀಕನಿಗೆ ಟಗರಿಗೆ ಸಲ್ಲಬೇಕಾದ ಬಹುಮಾನವನ್ನು ನೀಡಲಾಗುವುದು.

**ಕೋಳಿ ಕಾಳಗ**

ಜಾತ್ರಾ ಸಮಯದಲ್ಲಿ ನಡೆಯುವ ಗ್ರಾಮೀಣ ಕ್ರೀಡೆಗಳಲ್ಲಿ ಕೋಳಿ ಕಾಳಗವು ಒಂದು. ಸ್ಪರ್ಧೆಯಲ್ಲಿ ಕೋಳಿಗಳು ಭಾಗವಹಿಸುವುದರಿಂದ ಇದನ್ನು ಕೋಳಿ ಕಾಳಗ ಎಂದು ಕರೆಯುವರು. ಈ ಬಗೆಯ ಕ್ರೀಡೆಯು ಜಾತ್ರೆ ಸಮಯದಲ್ಲಿ ಎರಡು ಬಲಶಾಲಿ ಕೋಳಿ ಹುಂಜಗಳ ನಡುವೆ ನಡೆಯುವ ಸ್ಪರ್ಧೆ ಅಥವಾ ಕಾಳಗವಾಗಿದೆ. ಕಾಳಗದಲ್ಲಿ ಸ್ಪರ್ಧೆಗಿಳಿಯುವ ಕೋಳಿಗಳನ್ನು ಕಾಳಜಿಯಿಂದ ಆರೈಕೆ ಮಾಡಿ ದಷ್ಟಪುಷ್ಟವಾಗಿ ಸಾಕಿರುತ್ತಾರೆ. ಅಲ್ಲದೆ ಸೂಕ್ತ ತರಬೇತಿಯನ್ನು ನೀಡಿರುತ್ತಾರೆ. ಈ ಕಾಳಗದಲ್ಲಿ ಯಾವ ಕೋಳಿ ಎದುರಾಳಿ ಕೋಳಿಯ ಜುಟ್ಟನ್ನು ಕುಕ್ಕಿ ಕುಕ್ಕಿ ಬಲಹೀನಗೊಳಿಸಿ ಹಿಮ್ಮೆಟ್ಟಿಸುತ್ತದೆಯೋ ಆ ಕೋಳಿಯನ್ನು ವಿಜಯಶಾಲಿ ಎಂದು ಘೋಷಿಸಲಾಗುತ್ತದೆ.

**ಊಟ್ಲುಮರ ಹತ್ತುವುದು**

ಜಾತ್ರೆಗಳಲ್ಲಿ ಊಟ್ಲುಮರ ಹತ್ತುವುದು ಮನರಂಜನೆಯ ಕ್ರೀಡೆಯಾಗಿದ್ದು, ಆಟ ಮುಗಿಯುವವರೆಗೂ ಜಾತ್ರೆಯಲ್ಲಿ ನೆರೆದ ಜನಸಮೂಹಕ್ಕೆ ಕುತೂಹಲ ಉಂಟು ಮಾಡುತ್ತೆ. ಈ ಬಗೆಯ ಕ್ರೀಡೆಗಳಲ್ಲಿ ಯುವಕರು ಹೆಚ್ಚಾಗಿ ಭಾಗವಹಿಸುತ್ತಾರೆ. ಕೆಲವು ಭಕ್ತರು ಹರಕೆ ತೀರಿಸುವ ಸಲುವಾಗಿ ಉಪವಾಸದ ವ್ರತವಿದ್ದು ಈ ಬಗೆಯ ಜಾತ್ರೆಯ ಆಚರಣೆಯಲ್ಲಿ ಭಾಗವಹಿಸುತ್ತಾರೆ. ಊಟ್ಲುಮರದ ಕಂಭವು ಸುಮಾರು ೨೦ ರಿಂದ ೨೫ ಅಡಿ ಎತ್ತರವಿರುತ್ತದೆ. ಇಂತಹ ಕಂಭವನ್ನು ವೃತ್ತಾಕಾರದ ಗುಂಡಿಯ ಮಧ್ಯದಲ್ಲಿ ನೆಟ್ಟು ಜೇಡಿಮಣ್ಣು ಮತ್ತು ಲೋಳಿಯ ರಸವನ್ನು ಲೇಪಿಸುತ್ತಾರೆ. ಊಟ್ಲುಮರದ ಮೇಲುಭಾಗದಲ್ಲಿ ಒಬ್ಬ ಮನುಷ್ಯನಿದ್ದು, ಮೇಲುಭಾಗದ ನಾಲ್ಕು ದಿಕ್ಕಿಗೂ ಒಂದೊಂದು ತೆಂಗಿನಕಾಯಿಯನ್ನು ಕಟ್ಟಿರುತ್ತಾರೆ. ಊಟ್ಲುಮರದ ಮೇಲುಭಾಗದ ಮಧ್ಯಕ್ಕೆ ಒಂದು ಸೋರೆಯಲ್ಲಿ ಲೋಳಿಯಸರದ ರಸವನ್ನು ಸಂಗ್ರಹಿಸಿಟ್ಟದ್ದು, ಮೇಲಿರುವ ಮನುಷ್ಯ ಅದನ್ನು ಕಂಭಕ್ಕೆ ಹಾಕುತ್ತಿರುತ್ತಾನೆ.

ಸುಮಾರು ೮-೧೦ ಜನ ಊಟ್ಲುಮರವನ್ನು ಒಬ್ಬರ ಮೇಲೊಬ್ಬರಂತೆ ಹತ್ತುತ್ತಿರುತ್ತಾರೆ. ಕಂಭದ ಕೆಳಭಾಗದಲ್ಲಿ ಗುಂಡಿಯ ತುಂಬ ನೀರನ್ನು ಹಾಕಿದ್ದು, ಹತ್ತುವವರ ಕೈಕಾಲುಗಳು ಕೆಸರಿನಿಂದ ಕೂಡಿರುತ್ತವೆ. ಊಟ್ಲುಕಂಭಕ್ಕೆ ಜೇಡಿಮಣ್ಣು ಮತ್ತು ಲೋಳಿಯಸರ ಸವರಿದ್ದು, ಕೆಸರಿನ ನೀರು ಚಲ್ಲುವುದರಿಂದಾಗಿ ಊಟ್ಲುಮರವನ್ನು ಹತ್ತುವವರು ಹತ್ತಲು ಪ್ರಯತ್ನಿಸಿ ಜಾರಿ ಕೆಳಗೆ ಬೀಳುತ್ತಿರುತ್ತಾರೆ. ಅಂತಿಮವಾಗಿ ಚಾಕಚಕ್ಯತೆಯಿಂದ ಒಬ್ಬರ ಮೇಲೊಬ್ಬರು ಹತ್ತಿ , ಒಬ್ಬ ಊಟ್ಲುಮರದ ಮೇಲತ್ತಿ

ನಾಲ್ಕು ದಿಕ್ಕಿಗೆ ಕಟ್ಟಿರುವ ತೆಂಗಿನಕಾಯಿಗಳನ್ನು ಮುಟ್ಟಿಸುತ್ತಾನೆ. ಆ ವ್ಯಕ್ತಿಯ ಸಾಮರ್ಥ್ಯವನ್ನು ನೆರೆದ ಜನಸಮೂಹ ಕೊಂಡಾಡುತ್ತದೆ.

ಜಾತ್ರೆಯ ಪ್ರಧಾನ ಭಾಗವೆಂಬಂತೆ ಆಚರಣೆಯಲ್ಲಿರುವ ಮೋಜಿನ ಪಾತ್ರೆಗಳು ಸಮುದಾಯದ ಜನರಲ್ಲಿ ಜಾತಿಭೇದ ಮರೆತು ಒಂದುಗೂಡುವ ಮನೋಭಾವವನ್ನು ಬೆಳೆಸುತ್ತವೆ. ಜೀವನದ ಪ್ರತಿಯೊಂದು ಕ್ಷೇತ್ರವು ಸ್ಪರ್ಧಾತ್ಮಕತೆಯಿಂದ ಕೂಡಿದೆ. ವ್ಯಕ್ತಿ ಗುರಿ ಮುಟ್ಟಲು ಮತ್ತು ಅಭಿವೃದ್ಧಿ ಹೊಂದಲು ಸ್ಪರ್ಧಾತ್ಮಕ ಮನೋಭಾವವನ್ನು ಬೆಳೆಸುವ ಮೂಲಕ ವ್ಯಕ್ತಿಯ ಅಭಿವೃದ್ಧಿ ಮತ್ತು ಸಮಾಜದ ಅಭಿವೃದ್ಧಿಗೆ ಪ್ರೇರಣೆ ನೀಡುತ್ತವೆ. ಕ್ಲಿಷ್ಟಮಯ ಸನ್ನಿವೇಶವನ್ನು ಧೈರ್ಯದಿಂದ ಎದುರಿಸುವ ಮೂಲಕ ಉತ್ತಮ ಭವಿಷ್ಯವನ್ನು ಪಡೆಯಲು ಇಂತಹ ಜಾತ್ರೆಗಳು ಸಹಕಾರಿಯಾಗಿವೆ.

ಒಟ್ಟಾರೆ ಮೋಜಿನ ಜಾತ್ರೆಗಳು ಮನರಂಜನೆ ಮತ್ತು ಮೋಜನ್ನು ಒದಗಿಸುವುದಷ್ಟೇ ಅಲ್ಲದೆ ಜೀವಪರವಾದ ಕಾಳಜಿಯ ಉದ್ದೇಶವನ್ನು ಒಳಗೊಂಡಿವೆ. ಸಮುದಾಯಗಳಲ್ಲಿ ತಮ್ಮ ಹೋರಿ, ಕೋಣ, ಟಗರು ಅಥವಾ ಕೋಳಿಗಳನ್ನು ಸ್ಪರ್ಧೆಗೆ ತಯಾರುಮಾಡುವ ಸಲುವಾಗಿಯಾಗದರು ಮನುಷ್ಯ ಕೆಲವು ಪ್ರಾಣಿ ಮತ್ತು ಪಕ್ಷಿ ಸಂಕುಲಗಳನ್ನು ಸಂರಕ್ಷಿಸುವ ಉದ್ದೇಶವು ಈ ಮೋಜಿನ ಜಾತ್ರೆಗಳಲ್ಲಿ ಅಡಗಿದೆ.

ಪ್ರಸ್ತುತ ವಿಜ್ಞಾನ ಮತ್ತು ತಂತ್ರಜ್ಞಾನಗಳ ಬೆಳವಣಿಗೆಯಿಂದಾಗಿ ಮಾನವ ದೂರ, ಕಾಲ, ವೇಗಗಳನ್ನು ಜಯಿಸಿದ್ದಾನೆ. ಬಿಡುವಿಲ್ಲದ ಸತತ ಒತ್ತಡದ ಸನ್ನಿವೇಶಗಳಲ್ಲಿ ಮಾನವ ಕುಲವು ತನ್ನನ್ನು ತೊಡಗಿಸಿಕೊಳ್ಳಬೇಕಾದ ಅನಿವಾರ್ಯತೆ ಎದುರಾಗಿದೆ. ದೂರ ಪ್ರದೇಶದ ಸಂಬಂಧಿಗಳನ್ನು ಆಗಲಿ ದುಡಿಯುವ ಪರಿಸ್ಥಿತಿ ಒದಗಿ ಬಂದಿರುವುದರಿಂದ ಮಾನವೀಯ ಸಂಬಂಧಗಳು ಇಂದು ಸಡಿಲಗೊಳ್ಳುತ್ತಿವೆ. ಇಂತಹ ಸಂಬಂಧಗಳನ್ನು ಕ್ಷಣಕಾಲವಾದರೂ ಒತ್ತಡವನ್ನು ಮರೆಸಿ, ಸಂಬಂಧಿಗಳ ಮನಸ್ಸುಗಳನ್ನು ಬೆಸೆಯುವ ಸಾಧನೆಗಳಾಗಿ ಮೋಜಿನ ಜಾತ್ರೆಗಳು ಕಾರ್ಯನಿರ್ವಹಿಸುತ್ತವೆ. ವಿಶ್ರಾಂತಿ ರಹಿತ ದುಡಿಮೆಯಿಂದಾಗಿ ದೈಹಿಕ ಮತ್ತು ಮಾನಸಿಕ ವಿಕಲ್ಪಗಳಿಗೆ ಒಳಗಾಗುವ ಜೀವಕ್ಕೆ ಹಿಡಿಯಷ್ಟು ಮೋಜು, ಮನರಂಜನೆ ನೀಡುವ ಮೂಲಕ ನಾಳಿನ ಹೊಸ ಕನಸು, ಹೊಸಗುರಿ, ಹೊಸ ಜೀವನಕ್ಕೆ ಮುನ್ನುಡಿ ಬರೆಯುವ ಸಾಮುದಾಯಿಕ ಆಚರಣೆಗಳಾಗಿ ಮೋಜಿನ ಜಾತೆಗಳು ಕಂಡುಬರುತ್ತವೆ. ಆರೋಗ್ಯ ಪೂರ್ಣ ಸದೃಢ ಸಮಾಜದ ನಿರ್ಮಾಣಕ್ಕೆ ಇವು ಪ್ರೇರಣೆ ನೀಡುತ್ತವೆ.

## ೫.೨ ವಸ್ತುಪ್ರದರ್ಶನದ ಜಾತ್ರೆಗಳು

ವಸ್ತುಪ್ರದರ್ಶನವನ್ನು ಕೇಂದ್ರಬಿಂದುವನ್ನಾಗಿಟ್ಟುಕೊಂಡು ಕೆಲವು ಜಾತ್ರೆಗಳು ನಡೆಯುತ್ತವೆ. ಈ ಬಗೆಯ ಜಾತ್ರೆಗಳನ್ನು ವಸ್ತುಪ್ರದರ್ಶನದ ಜಾತ್ರೆಗಳೆಂದು ಕರೆಯುತ್ತೇವೆ. ಸಮಾಜದ ಜನರಿಗೆ ಮೂಲಭೂತ ಅವಶ್ಯಕತೆಗಳನ್ನು ಒಳಗೊಂಡಂತೆ ಇತರೆ ಕೆಲವು ವಸ್ತುಗಳು ಈ ಬಗೆಯ ಜಾತ್ರೆಗಳಲ್ಲಿ

ಪ್ರದರ್ಶನಕ್ಕಿಟ್ಟು, ರಿಯಾಯಿತಿ, ದರದಲ್ಲಿ ಮಾರಾಟ ಮಾಡಲಾಗುತ್ತದೆ. ಅಗ್ಗದ ಬೆಲೆಗೆ ಅವಶ್ಯಕ ವಸ್ತುಗಳು ದೊರೆಯುವುದರಿಂದ ಎಲ್ಲಾ ಸಮೂಹದ ಜನರು ಜಾತ್ರೆಯೋಪಾದಿಯಲ್ಲಿ ಸೇರುತ್ತಾರೆ. ದೇವರ ಉತ್ಸವದ ಒಂದು ಭಾಗವಾಗಿ ಹಾಗೂ ಕೆಲವೊಮ್ಮೆ ಪ್ರತ್ಯೇಕವಾಗಿಯೂ ಈ ಬಗೆಯ ಜಾತ್ರೆಗಳು ನಡೆಯುತ್ತವೆ. ಇಂತಹ ಜಾತ್ರೆಗಳಲ್ಲಿ ಲಕ್ಷಾಂತರ ಜನರು ಉಪಯೋಗವನ್ನು ಪಡೆಯುತ್ತಾರೆ. ಗೃಹಬಳಕೆಯ ವಸ್ತುಗಳು, ಅಲಂಕಾರಿಕ ವಸ್ತುಗಳು, ಸಿದ್ದ ಉಡುಪುಗಳು, ಕೃಷಿ ಉತ್ಪನ್ನಗಳು, ಗೃಹ ಕೈಗಾರಿಕಾ ಉತ್ಪನ್ನಗಳು, ಪುಸ್ತಕ ಪ್ರದರ್ಶನ, ಫಲಪುಷ್ಪ ಪ್ರದರ್ಶನ, ಚಿತ್ರಪ್ರದರ್ಶನ, ಕೃಷಿ ಬಳಕೆಯ ಉಪಕರಣಗಳು, ರಾಸಾಯನಿಕ ಬೀಜ ಮತ್ತು ಗೊಬ್ಬರ, ಕೀಟನಾಶಕ ಔಷಧಿಗಳು, ವಿಜ್ಞಾನ ತಂತ್ರಜ್ಞಾನದಿಂದ ತಯಾರಿಸಿದ ವಸ್ತುಗಳು ಮೊದಲಾದವು ಜಾತ್ರೆಯ ಪ್ರದೇಶವನ್ನು ಆವರಿಸಿಕೊಂಡಿರುತ್ತವೆ.

ಗೃಹಬಳಕೆಯ ವಸ್ತುಗಳು ವಸ್ತುಪ್ರದರ್ಶನದ ಜಾತ್ರೆಗಳಲ್ಲಿ ಪ್ರಧಾನ ಪಾತ್ರವಹಿಸುತ್ತವೆ. ಅವುಗಳಲ್ಲಿ ಚಿಕ್ಕ ಚಮಚದಿಂದ ಹಿಡಿದು, ಸೌಟು, ತಟ್ಟೆ, ಲೋಟ, ಚೊಂಬು, ಬಿಂದಿಗೆ, ಪಾತ್ರೆ, ಗರಡಿ, ಮೊದಲಾದ ವಸ್ತುಗಳು ಈ ಬಗೆಯ ಪಾತ್ರೆಗಳಲ್ಲಿ ಮಾರಾಟವಾಗುತ್ತವೆ.

ಅಲಂಕಾರಿಕ ವಸ್ತುಗಳಾದ ಮನೆಯ ಸಹಜ ಸೌಂದರ್ಯವನ್ನು ಹೆಚ್ಚಿಸಲು ಸಹಾಯಕವಾಗುವ ಗಾಜಿನ ಭರಣಿ, ವಿವಿಧ ಬಣ್ಣಗಳಿಂದ ತಯಾರಿಸಿದ ಬಾಗಿಲ ತೋರಣಗಳು, ಜೋತು ಬೀಳುವಂತೆ ನೇತುಹಾಕುವ ಆಕರ್ಷಕ ನಿಲುವುಗಳು ಹಾಗೂ ಬಣ್ಣದ ಹಾರಗಳು ವಿವಿಧ ಬಗೆಯ ಬೊಂಬೆಗಳು, ಜೊತೆಗೆ ಸ್ತ್ರೀ ಪುರುಷರ ಸೌಂದರ್ಯವರ್ಧಕಗಳಾದ ಸ್ನೋಪೌಡರ್, ಫೇರ್ ಅಂಡ್ ಲವ್‌ಲಿ, ಉಗುರು ಬಣ್ಣಗಳು, ಚಿಕ್ಕ ಹಾಗೂ ದೊಡ್ಡಗಾತ್ರದ ಸ್ಟಿಕ್ಕರ್‌ಗಳು, ಲಿಫ್‌ಸ್ಟಿಕ್, ವಿವಿಧ ವಾಸನೆಯುಕ್ತ ಸುಗಂಧ ದ್ರವ್ಯಗಳು ಈ ಬಗೆಯ ಜಾತ್ರೆಗಳಲ್ಲಿ ಲಭ್ಯವಿರುತ್ತವೆ.

ಸಿದ್ಧ ಉಡುಪುಗಳು ಚಿಕ್ಕವರು ಮತ್ತು ದೊಡ್ಡವರೆಂಬ ಹಾಗೂ ಸ್ತ್ರಿ ಪುರುಷರೆಂಬ ಭೇದಭಾವವಿಲ್ಲದೆ ಅವರವರ ಅಭಿರುಚಿಗೆ ತಕ್ಕಂತೆ ವಿವಿಧ ವರ್ಣ, ವಿನ್ಯಾಸದ ಸಿದ್ಧ ಉಡುಪುಗಳು ಈ ಬಗೆಯ ಜಾತ್ರೆಗಳಲ್ಲಿ ದೊರೆಯುತ್ತವೆ.

ಕೃಷಿಉತ್ಪನ್ನಗಳಾದ, ರಾಗಿ, ಭತ್ತ, ಜೋಳ, ಗೋಧಿ, ಶೇಂಗಾ ಹಾಗೂ ಸಾಂಬಾರ ಪದಾರ್ಥಗಳನ್ನು ವಸ್ತುಪ್ರದರ್ಶನದ ಜಾತ್ರೆಗಳಲ್ಲಿ ರಿಯಾಯಿತಿ ದರದಲ್ಲಿ ಮಾರಾಟ ಮಾಡಲಾಗುತ್ತದೆ. ಕೃಷಿಬಳಕೆಯ ಉಪಕರಣಗಳಾದ ನೇಗಿಲು, ಮಡಿಕೆ, ಕುಂಟೆ, ಕೂರಿಗೆ, ಕುಳ, ಕುರ್ಜಿಗೆ, ಕುಡುಮಾಳ ಮಚ್ಚು, ಕುಡುಗೋಲು, ಬಾಳಸಿ ಮುಂತಾದವುಗಳ ಜೊತೆಗೆ ಎತ್ತಿನ ಅಲಂಕಾರಕ್ಕೆ ಬಳಸುವ ಕುಚ್ಚು, ಕೋಡಣಸು, ಗೆಜ್ಜೆ ಪಟ್ಟಿ, ಲೊಡಗ, ಗಗ್ರಿ, ಜೂಲು, ಬಾರುಕೋಲಿನಂತಹ ವಸ್ತುಗಳು ವಸ್ತುಪ್ರದರ್ಶನದ ಜಾತ್ರೆಗಳಲ್ಲಿ ಭರದಿಂದ ಮಾರಾಟವಾಗುತ್ತವೆ.

ಗುಡಿಕೈಗಾರಿಕೆಯಿಂದ ತಯಾರಾದ ನೆಲಹಾಸಿಗೆ, ಬಾಗಿಲ ತೋರಣಗಳು, ಮಣ್ಣಿನ ಗಡಿಗೆ, ಅಲಂಕಾರಿಕ ದೇವರ ವಿಗ್ರಹ ಹಾಗೂ ಚಿತ್ರಗಳು, ಕೈಮಗ್ಗದಿಂದ ನೇಯ್ದು ಉಡುಪುಗಳು, ಊಟಕ್ಕೆ ಬಳಸುವ ಉಪ್ಪಿನಕಾಯಿ, ಹಪ್ಪಳ, ಸಂಡಿಗೆ ಹಾಗೂ ಕುರುಕಲು ತಿಂಡಿಗಳು ವಸ್ತುಪ್ರದರ್ಶನದ ಜಾತ್ರೆಗಳಲ್ಲಿ ಗಮನ ಸೆಳೆಯುತ್ತವೆ.

ಪುಸ್ತಕಪ್ರದರ್ಶನವು ಪ್ರಮುಖವಾಗಿದ್ದು, ವಿವಿಧ ಲೇಖಕರ , ಸಾಹಿತಿಗಳ, ಕವಿಗಳ , ವಿದ್ವಾಂಸರ, ಪಂಡಿತರ, ಕಥೆ, ಕವಿತೆ, ನಾಟಕ, ಕಿರುನಾಟಕ, ಪ್ರವಾಸಕಥನ, ಕಾದಂಬರಿ, ಜೀವನ ಚರಿತ್ರೆ ಮುಂತಾದವುಗಳನ್ನು ಒಳಗೊಂಡ ಪುಸ್ತಕಗಳು ಅಗ್ಗದ ಬೆಲೆಗೆ ಸಾಹಿತ್ಯಾಭಿರುಚಿಯುಳ್ಳವರ ಕೈ ಸೇರುತ್ತವೆ.

ವಸ್ತು ಪ್ರದರ್ಶನ ಜಾತ್ರೆಗಳಲ್ಲಿ ಫಲ ಪುಷ್ಪ ಪ್ರದರ್ಶನ ಜಾತ್ರಾರ್ಥಿಗಳಿಗೆ ಸಂತೋಷವನ್ನುಂಟುಮಾಡುತ್ತದೆ. ವಿವಿಧ ಬಗೆಯ ಬಣ್ಣ ಬಣ್ಣದ ಚಿಕ್ಕ ದೊಡ್ಡ ಹೂವುಗಳು ಅನೇಕ ಬಗೆಯ ರುಚಿಕರ ಹಣ್ಣುಗಳು ಎಂತಹವರನ್ನು ತಮ್ಮತ್ತ ಕೈ ಬೀಸಿ ಕರೆಯುತ್ತವೆ. ಇಂತಹ ಸ್ಥಳಗಳಲ್ಲಿ ಹೆಣ್ಣುಮಕ್ಕಳ ದೊಡ್ಡ ಗುಂಪೆ ಅಲ್ಲಿರುತ್ತದೆ. ಹವ್ಯಾಸಿ ಪೋಟೋಗ್ರಾಫರ್‌ಗಳು ಸೆರೆಹಿಡಿದ ಪ್ರಕೃತಿ ಸೌಂದರ್ಯದ ಸೂರ್ಯೋದಯ, ಸೂರ್ಯಾಸ್ತ, ಬಣ್ಣ ಬಣ್ಣದ ಚಿಟ್ಟೆಗಳ, ಪಕ್ಷಿಗಳ, ಚೆನ್ನಾಟ ಮತ್ತು ಕಾದಾಟದಲ್ಲಿ ತೊಡಗಿದ ಪ್ರಾಣಿಗಳನ್ನೊಳಗೊಂಡ ವಿವಿಧ ಬಗೆಯ ಆಕರ್ಷಕ ಮತ್ತು ವಿಸ್ಮಯ ಚಿತ್ರಗಳ ಪ್ರದರ್ಶನವು ಜಾತ್ರೆಗಳಲ್ಲಿ ನೆರೆದ ಜನಸಮೂಹವನ್ನು ಬೇರೊಂದು ಕಲಾಲೋಕಕ್ಕೆ ಕರೆದೊಯ್ಯುತ್ತವೆ.

ಈ ಬಗೆಯ ಜಾತ್ರೆಗಳು ಗ್ರಾಮೀಣ ರೈತರು, ಸಣ್ಣ ಕೈಗಾರಿಕೋದ್ಯಮಿಗಳು, ಕರಕುಶಲ ಕಸುಬುಗಳ ಸಣ್ಣವ್ಯಾಪಾರಸ್ಥರು ಮುಂತಾದ ವರ್ಗದವರಿಗೆ ತಮ್ಮ ವೃತ್ತಿಯನ್ನು ಕುರಿತಾಗಿ ಅಭಿಮಾನ ಮೂಡಿಸಲು ಮತ್ತು ಸೂಕ್ತ ಮಾರ್ಗದರ್ಶನ ಹಾಗೂ ಅವರಿಗೆ ಅಗತ್ಯ ಪ್ರೋತ್ಸಾಹ ನೀಡುವ ಹಿನ್ನೆಲೆಯಲ್ಲಿ ಹುಟ್ಟಿಕೊಂಡವು.

ಇವುಗಳ ಜೊತೆಗೆ ಕೇಂದ್ರ ಹಾಗೂ ರಾಜ್ಯಸರ್ಕಾರದ ಒಡೆತನದ ಬ್ಯಾಂಕುಗಳ ಕುರಿತಾಗಿ ಜನರಿಗೆ ಸೂಕ್ತ ಮಾಹಿತಿ ನೀಡಲು ಬ್ಯಾಂಕುಗಳ ಕಾರ್ಯಚಟುವಟಿಕೆ ಮಾಹಿತಿಯನ್ನೊಳಗೊಂಡ ಮಾಹಿತಿ ಪುಸ್ತಿಕೆಗಳನ್ನು ವಸ್ತುಪ್ರದರ್ಶನದ ಜಾತ್ರೆಗಳಲ್ಲಿಡಲಾಯಿತು. ಸಮಾಜದ ಒಂದು ಪ್ರಧಾನ ಭಾಗವಾಗಿರುವ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಹಾಗೂ ಮಹಿಳಾ ಸ್ತ್ರೀ ಶಕ್ತಿ ಸಂಘಗಳಿಗೆ ಇಂತಹ ಜಾತ್ರೆಗಳಲ್ಲಿ ಅಗತ್ಯ ಸಲಹೆ ಸೂಚನೆಗಳನ್ನು ನೀಡಲಾಗುವುದು.

ಒಟ್ಟಾರೆ ಸಮುದಾಯದ ಜನರಲ್ಲಿ ಆರೋಗ್ಯ ಕುರಿತಾಗಿ, ಶಿಕ್ಷಣ ಕ್ಷೇತ್ರದ ಪ್ರಸ್ತುತ ವಿದ್ಯಮಾನಗಳ ಕುರಿತಾಗಿ, ಖಾದಿ ಉದ್ಯಮದ ಕುರಿತಾಗಿ, ಮೀನುಗಾರಿಕೆ ಮತ್ತುಪಶುಪಾಲನೆಯ ಕುರಿತಾಗಿ, ರೇಷ್ಮೆ

ಮತ್ತು ತೋಟಗಾರಿಕೆ ಕುರಿತಂತೆ ಹೀಗೆ ಮಾನವ ಸಮಾಜದ ಅಭಿವೃದ್ಧಿಗೆ ಪೂರಕವಾದ ಎಲ್ಲಾ ಕ್ಷೇತ್ರಗಳ ವಸ್ತುವಿಷಯಗಳ ಮಾಹಿತಿ ಉತ್ಪನ್ನಗಳ ಪ್ರದರ್ಶನ ಹಾಗು ಮಾರಾಟಕ್ಕೆ ಈ ಜಾತ್ರೆಗಳು ವೇದಿಕೆಗಳಾಗಿವೆ. ಜನರ ಮತ್ತು ಸಮಾಜದ ಅಗತ್ಯತೆಗಳನ್ನು ಪೂರೈಸುವ ಆಶಯವನ್ನೊಳಗೊಂಡಿರುವ ಈ ಬಗೆಯ ಜಾತ್ರೆಗಳು ಗ್ರಾಮೀಣ ಪ್ರದೇಶಗಳ ಮುಖ್ಯ ವ್ಯಾಪಾರಕೇಂದ್ರಗಳಾಗಿವೆ.

## ೫.೩ ದನದ ಜಾತ್ರೆಗಳು

ಮಾನವ ಸಮುದಾಯವು ಅಲೆಮಾರಿ ಜೀವನದಿಂದ ಸ್ಥಿರನೆಲೆ ಕಂಡುಕೊಂಡು , ಕೃಷಿ ಚಟುವಟಿಕೆಯಲ್ಲಿ ತೊಡಗಿದ ಕಾಲದಿಂದಲೂ ಪಶುಗಳನ್ನು ಪೂಜಿಸುತ್ತಾ ಬಂದಿದ್ದಾನೆ. ಕೇವಲ ಹಿಂದೂಮತದವರಷ್ಟೆ ಅಲ್ಲ ಎಲ್ಲ ಮತದವರಲ್ಲಿ, ಪ್ರಾಚೀನ ಕಾಲದಿಂದ ಎಲ್ಲಾ ಸಮಾಜದವರಲ್ಲೂ ಈ ಬಗೆಯ ನಂಬಿಕೆ ಆಳವಾಗಿ ಬೇರೂರಿದೆ. ಇದಕ್ಕೆ ಪಶುಗಳು ರೈತರ ಗೆಳೆಯರಾಗಿ ಸಹಕರಿಸಿದ್ದು, ಕಾರಣವಿರಬಹುದು. ಎತ್ತಿಲ್ಲದವನಿಗೆ ಹೆಗಲಿಲ್ಲ, ಎದೆಯಿಲ್ಲ ಎಂಬ ಸಾಮಾಜಿಕ ನುಡಿಗಟ್ಟು ಪಶುಗಳು ಕೃಷಿಕರ ನಿತ್ಯಬದುಕಿನ ಬೆನ್ನೆಲುಬಾಗಿದ್ದವು ಎಂಬುದನ್ನು ತಿಳಿಸುತ್ತದೆ.

ಅಂದಿನ ಕೃಷಿಕ ಸಮಾಜದ ಅಭಿವೃದ್ಧಿಯ ಎಲ್ಲಾ ಆಯಾಮಗಳಲ್ಲೂ ರೈತರೊಡಗೂಡಿ ಶ್ರಮಿಸುತ್ತಿದ್ದ ಪಶುಗಳು ಸಮಾಜದ ಅಭಿವೃದ್ಧಿಯ ಕಾಮಧೇನುವಾಗಿದ್ದವು. ಈ ಕಾರಣಕ್ಕಾಗಿ ರೈತರು ತಮ್ಮ ಅಗತ್ಯಕ್ಕೆ ಅನುಗುಣವಾಗಿ ಇವುಗಳನ್ನು ಕೊಳ್ಳುವ ಮತ್ತು ಮಾರುವ ಸಂಬಂಧವಾಗಿ ದನದ ಜಾತ್ರೆಗಳು ಆಚರಣೆಗೆ ಬಂದಿವೆ. ಕುಲದೇವರ ಜಾತ್ರೆಗೆ ಜೋಡೆತ್ತಿನ ಬಂಡಿಕಟ್ಟಿ ಹೊರಟ ಸಂದರ್ಭದಲ್ಲಿ ತಮ್ಮ ಯಜಮಾನ ರೈತನೊಡಗೂಡಿ ಬಂದ ಉತ್ತಮ ತಳಿಯ ರಾಸುಗಳನ್ನು ಕಂಡುಕೊಳ್ಳುವ ಬಯಕೆ ಮೂಡಿ ಸಹಜವಾಗಿಯೇ ದನಗಳ ಕ್ರಯ ವಿಕ್ರಯಗಳು ನಡೆದಿದೆ. ಈ ಬಗೆಯ ದನಗಳ ಕೊಡುಕೊಳ್ಳುವಿಕೆ ದೇವರ ಜಾತ್ರೆಯ ಸಮಯದಲ್ಲಿಯೇ ಆರಂಭಗೊಂಡಿದೆ. ದನದ ಜಾತ್ರೆಗಳನ್ನು ಪ್ರತ್ಯೇಕವಾಗಿ ಗುರುತಿಸುವುದು ಕಷ್ಟ. ಈ ದನದ ಜಾತ್ರೆಗಳ ಇತಿಹಾಸವು ಶಿಷ್ಟ ಮತ್ತು ಗ್ರಾಮೀಣ ಜಾತ್ರೆಗಳ ಇತಿಹಾಸದೊಂದಿಗೆ ಬೆಸೆದುಕೊಂಡಿದೆ. ಜಾತ್ರೆಯಲ್ಲಿ ದನಗಳ ವ್ಯಾಪಾರವೇ ಪ್ರಧಾನವಾಗಿ ಕಂಡುಬರುವಂತಹ ಜಾತ್ರೆಗಳನ್ನು ದನದ ಜಾತ್ರೆಗಳು ಎಂದು ಕರೆಯುವುದು ಹೆಚ್ಚು ಸೂಕ್ತವೆನಿಸುತ್ತದೆ. ಆದರೆ ಇವು ದೇವರ ಉತ್ಸವ ಮುಗಿದ ನಂತರ ಆ ಜಾತ್ರಾ ಪ್ರದೇಶದಲ್ಲಿ ದನಗಳ ಜಾತ್ರೆಯು ನಡೆಯುತ್ತಿರುವುದು ಕಂಡುಬರುತ್ತದೆ.

"ಈ ಬಗೆಯ ಜಾತ್ರೆಗಳು ವ್ಯವಹಾರ ಮತ್ತು ವಾಣಿಜ್ಯ ಮಹತ್ವ ಉಳ್ಳವುಗಳಾಗಿರುತ್ತವೆ. ದನಗಳ ಪ್ರದರ್ಶನ ಹಾಗೂ ಮಾರಾಟವೇ ಇಲ್ಲಿನ ಪ್ರಧಾನ ಅಂಶವಾಗಿರುವುದನ್ನೂ ಈ ಸಂದರ್ಭದಲ್ಲಿಯೇ ನಾವು ಗಮನಿಸಬಹುದು"[೩]

ಸಾಮಾನ್ಯವಾಗಿ ದನಗಳ ಜಾತ್ರೆ ನಡೆಯುವ ಸ್ಥಳವು ಸಮತಟ್ಟಾದ ಭೂಪ್ರದೇಶವಾಗಿದ್ದು ವಿಶಾಲ ಮೈದಾನವನ್ನು ಒಳಗೊಂಡಿರುತ್ತದೆ. ಅಲ್ಲಿ ನೀರಿನ ಪೂರೈಕೆಯನ್ನು ನದಿ, ಕೆರೆ, ಹಳ್ಳ ಕೊಳ್ಳಗಳು ಒದಗಿಸುತ್ತವೆ. ಗಿಡಮರಗಳ, ಹಸಿರಿನ ತೋಪುಗಳ ಮಧ್ಯೆ ಸುಮಾರು ೧೫ ರಿಂದ ಒಂದು ತಿಂಗಳ ಕಾಲ ದನದ ಜಾತ್ರೆಗಳು ನಡೆಯುತ್ತವೆ. ಜಾತ್ರೆಯಲ್ಲಿ ಸೇರಿದ ಜನರ ಮೆಚ್ಚುಗೆಯ ಜೋಡಿ ರಾಸುಗಳಿಗೆ ಬಹುಮಾನ ಮತ್ತು ಪಾರಿತೋಷಕಗಳನ್ನು ನೀಡಲಾಗುತ್ತದೆ. ಇಂತಹ ಜಾತ್ರೆಗಳಲ್ಲಿ ರಾಜ್ಯದ ರೈತರು ಮತ್ತು ದನಗಳಷ್ಟೆ ಅಲ್ಲದೆ ಹೊರ ರಾಜ್ಯಗಳಿಂದಲೂ ರಾಸುಗಳು ಬಂದು ಸೇರುತ್ತವೆ. ದನದ ಜಾತ್ರೆಗಳು ಸಾಮಾನ್ಯವಾಗಿ ಹಿಂದು ಸಾಮಾಜಿಕ ವ್ಯವಸ್ಥೆಯ ಶಿಷ್ಟ ಮತ್ತು ಬುಡಕಟ್ಟು ದೇವರ ಜಾತ್ರೆಗಳನ್ನು ಹೊರತುಪಡಿಸಿ ಯಾವುದೇ ಮತದವರ ಜಾತ್ರೆಗಳಲ್ಲಿ ದನದ ಜಾತ್ರೆಗಳು ಆಚರಣೆಯಲ್ಲಿರುವುದು ಕಂಡುಬರುವುದಿಲ್ಲ. ಕೊಡಗಿನಲ್ಲಿ ಶನಿವಾರಸಂತೆ ಸಮೀಪದ ಸುತ್ತಮುತ್ತಲಿನ ಗ್ರಾಮಗಳಲ್ಲಿ ದನದ ಜಾತ್ರೆಗಳು ನಡೆಯುತ್ತಿದ್ದು ಅದನ್ನು ಅವಲೋಕಿಸಲಾಗಿದೆ.

## ೫.೪ ದೇವಾನುದೇವತೆಗಳ ಆರಾಧನಾ ಜಾತ್ರೆಗಳು

ದೇವಾನುದೇವತೆಗಳ ಜಾತ್ರೆಗಳಲ್ಲಿ "ದೇವರಸೇವೆ ಎಂಬ ಹೆಸರಿನಲ್ಲಿ ಪರಸ್ಪರ ಸಹಕಾರ ಧನ್ಯತಾ ಭಾವದ ಜೊತೆ ಜೊತೆಗೆ ಗ್ರಾಮಾಭ್ಯುದಯದ ಕನಸೂ ಕೂಡಿರುತ್ತದೆ."[೪] ಈ ಬಗೆಯ ಜಾತ್ರೆಗಳು ಭಕ್ತಿಯ ಕಾರಣದಿಂದ ಆಚರಿಸಲ್ಪಡುತ್ತವೆ. ಎಲ್ಲಾ ಮತದವರಲ್ಲೂ ಎಲ್ಲಾ ಸಮಾಜಗಳಲ್ಲೂ ಈ ಬಗೆಯ ಜಾತ್ರೆಗಳು ಕಂಡು ಬರುತ್ತವೆ. ಇಂತಹ ಜಾತ್ರೆಗಳಿಗೆ ಶಿಷ್ಟ (ಆರ್ಯ) ದೇವರ ಜಾತ್ರೆಗಳು ಗ್ರಾಮೀಣ (ದ್ರಾವಿಡರ) ದೇವರ ಜಾತ್ರೆಗಳು, ಕರಗ ಜಾತ್ರೆಗಳು, ಮುಸ್ಲಿಮರ 'ಉರುಸ್' ಜಾತ್ರೆಗಳು, ಕ್ರೈಸ್ತರ 'ಫೆಸ್ತ' ಜಾತ್ರೆಗಳು, ಜೈನರ ಮಹಾಮಸ್ತಕಾಭಿಷೇಕದಂತಹ ಜಾತ್ರೆಗಳು ಈ ಬಗೆಯ ಜಾತ್ರೆಗಳಲ್ಲಿ ಪ್ರಮುಖವಾದವುಗಳಾಗಿವೆ.

## ೫.೫ ಶಿಷ್ಟದೇವರ ಜಾತ್ರೆಗಳು

ಶಿಷ್ಟ ದೇವರ ಜಾತ್ರೆಗಳನ್ನು ಶೈವ ಮತ್ತು ವೈಷ್ಣವ ಮತಸ್ಥರಲ್ಲಿ ಆಚರಣೆಯಲ್ಲಿರುವುದನ್ನು ಕಾಣುತ್ತೇವೆ. ಶಿಷ್ಟದೇವರುಗಳು ಎತ್ತರದ ವಿಶಾಲ ಬೆಟ್ಟಗುಡ್ಡಗಳಂತಹ ಪ್ರದೇಶಗಳ ಮೇಲೆ ನೆಲೆಗೊಂಡಿದ್ದು ಆ ಸ್ಥಳದಲ್ಲಿ ಆ ದೇವರ ಹೆಸರಿನಲ್ಲಿ ಜಾತ್ರೆಗಳು ನಡೆಯುತ್ತವೆ. ಎತ್ತರದ ಪ್ರದೇಶದಲ್ಲಿ ನೆಲೆಗೊಂಡಿರುವ ಈ ಶಿಷ್ಟ ದೇವರುಗಳ ಆರಾಧಕರು ಮೇಲು ವರ್ಗದ ಸಾಮಾಜಿಕ ಸ್ಥಾನಮಾನವನ್ನು ಪಡೆದವರು ಎಂಬುದರ ಸೂಚನೆ ಇರಬಹುದಾದರೂ ಇಂತಹ ಪ್ರದೇಶದಲ್ಲಿ ಉತ್ತಮ ಆರೋಗ್ಯಕ್ಕೆ ಪೂರಕವಾದ ಹಿತಕರ ವಾಯುಗುಣ ಪ್ರಧಾನವಾಗಿರುತ್ತದೆ. ಶಿಷ್ಟ ದೇವರ ಬಹುಪಾಲು ಜಾತ್ರೆಗಳು ಹುಣ್ಣಿಮೆಯ

ದಿನದಂದು ಶಾಸ್ತ್ರೋಕ್ತವಾಗಿ ನಡೆಯುತ್ತವೆ. ಶಿಷ್ಟ ದೇವರ ಜಾತ್ರೆಗಳಲ್ಲಿ ವೈಷ್ಣವ ಸಂಬಂಧಿ ಮತ್ತು ಶೈವ ಸಂಬಂಧಿ ದೇವರುಗಳ ಜಾತ್ರೆಗಳಿದ್ದು ವೈಷ್ಣವ ದೇವರ ಜಾತ್ರೆಯ ಪೂಜಾ ಸಮಯದಲ್ಲಿ ಓಂ ನಮೋನಾರಾಯಣ ಎಂಬ ಅಷ್ಟಾಕ್ಷರಿ ಮಂತ್ರವನ್ನೂ, ಶೈವ ದೇವರ ಜಾತ್ರೆಯ ಪೂಜಾ ಸಮಯದಲ್ಲಿ ಓಂ ನಮಃ ಶಿವಾಯ ಎಂಬ ಪಂಚಾಕ್ಷರಿ ಮಂತ್ರವನ್ನು ಪಠಿಸುವುದು ಈ ಎರಡು ಬಗೆಯ ಜಾತ್ರೆಗಳಿಗೆ ಇರುವ ಪ್ರಮುಖ ವ್ಯತ್ಯಾಸದ ಕುರುಹಾಗಿದೆ.

ಶಿಷ್ಟ ದೇವರ ಜಾತ್ರೆಗಳು ವಾರ, ನಕ್ಷತ್ರ, ತಿಥಿ ಮೊದಲಾದವುಗಳನ್ನು ಅನುಸರಿಸಿ ಪ್ರತಿ ವರ್ಷ ಆಚರಿಸಲ್ಪಡುತ್ತವೆ. ಇಂತಹ ಜಾತ್ರೆಗಳಲ್ಲಿ ರಥೋತ್ಸವ ಜಾತ್ರೆಯ ಮುಖ್ಯ ಆಕರ್ಷಣೆಯಾಗಿರುತ್ತದೆ. ಅಂದು ವಿವಿಧ ಭಾಗಗಳಿಂದ ಎಲ್ಲಾ ಜಾತಿ, ವರ್ಗ, ಮತ, ಪಂಗಡದ ಜನರೆಲ್ಲ ಭೇದ ಭಾವವಿಲ್ಲದೆ ತೇರೆಳೆಯುವ ಕಾರ್ಯದಲ್ಲಿ ಕೈ ಜೋಡಿಸಿ ಹೂ-ಹಣ್ಣು, ದವಸ-ಧಾನ್ಯಗಳನ್ನು ರಥದ ಮೇಲೆಸೆದು, ಹರಕೆ ತೀರಿಸಿ ಭಕ್ತಿಯನ್ನು ಸಮರ್ಪಿಸುತ್ತಾರೆ. ಈ ಜಾತ್ರೆಗಳು ೫ ರಿಂದ ೧೫ ದಿನಗಳವರೆಗೆ ನಡೆಯುತ್ತವೆ. ಅಂಕುರಾರ್ಪಣೆ ಆಚರಣೆಯೊಂದಿಗೆ ಆರಂಭವಾದ ಶಿಷ್ಟ ಜಾತ್ರೆಗಳು ಧ್ವಜಾರೋಹಣ ಕಾರ್ಯದೊಡನೆ ಪರಿಸಮಾಪ್ತಿಗೊಳ್ಳುತ್ತವೆ. ಶಿಷ್ಟದೇವರ ಜಾತ್ರೆಯ ಸಮಯದಲ್ಲಿ ಸಮಾಜದ ನಂಬಿಕೆಯಂತೆ ಆಚರಣೆಯ ವಿಧಿವಿಧಾನಗಳು ಜರುಗುತ್ತವೆ. ಇಂತಹ ಜಾತ್ರೆಗಳಲ್ಲಿ ಸಾಮಾನ್ಯವಾಗಿ ಅಂಕುರಾರ್ಪಣೆ, ಹೊಳೆಪೂಜೆ, ಕಲಶಸ್ಥಾಪನೆ, ಕಲ್ಯಾಣೋತ್ಸವ, ಗಿರಿಜಾ ಕಲ್ಯಾಣೋತ್ಸವ, ತೆಪ್ಪೋತ್ಸವ, ದೀಪೋತ್ಸವ, ಬಲಿಹರಣ, ಬ್ರಹ್ಮರಥೋತ್ಸವ,ಹನುಮಂತವಾಹನೋತ್ಸವ, ಮೊದಲಾದ ಆಚರಣೆಗಳನ್ನು ಸಾಮಾಜಿಕ ಪದ್ದತಿಯಂತೆ ಪರಂಪರಾನುಗತವಾಗಿ ಆಚರಿಸಿಕೊಂಡು ಬರಲಾಗುತ್ತಿದೆ.

**ಅಂಕುರಾರ್ಪಣೆ**

ಜಾತ್ರೆಯ ನಿಮಿತ್ತ ನವಧಾನ್ಯಗಳನ್ನು ಮಳಕೆ ಕಟ್ಟುವ ಕಾರ್ಯಕ್ಕೆ ಅಂಕುರಾರ್ಪಣೆ ಎಂದು ಕರೆಯಲಾಗುತ್ತದೆ. ಈ ನವಧಾನ್ಯಗಳನ್ನು ನವಗ್ರಹಗಳಿಗೆ ಸಮರ್ಪಿಸುವ ಸಲುವಾಗಿ ಹುತ್ತದ ಮಣ್ಣು, ಹಸುವಿನ ಸಗಣಿ(ಬೆರಣಿ)ಯಲ್ಲಿ ಇಡಲಾಗುತ್ತದೆ. "ನವಗ್ರಹಗಳೆಂದು ಕರೆಯುವ ಸೂರ್ಯ, ಚಂದ್ರ, ಅಂಗಾರಕ, ಬುಧ, ಬೃಹಸ್ಪತಿ, ಶುಕ್ರ, ಶನಿ, ರಾಹುಮತ್ತು ಕೇತುಗಳಿಗೆ ಕ್ರಮವಾಗಿ, ಗೋಧಿ, ಭತ್ತ, ತೊಗರಿ, ಹೆಸರು, ಕಡಲೆ, ಅವರೆ, ಕಪ್ಪು ಎಳ್ಳು, ಹುರುಳಿ ಮತ್ತು ಉದ್ದು ಇವೇ ಮೊದಲಾದ ನವಧಾನ್ಯಗಳನ್ನು ಬಿತ್ತಿ ಮೊಳಕೆಯಾಗಿಸುವುದು ಫಲದಾಯಕತ್ವದ ಸಂಕೇತವಾಗಿ ಕಂಡುಬರುತ್ತದೆ."[೫]

**ಹೊಳೆ ಪೂಜೆ**

ಶಿಷ್ಟದೇವರ ಜಾತ್ರೆಗಳಲ್ಲಿ ದೇವರ ಶುಭಕಾರ್ಯಗಳ ಆಚರಣೆಯ ಸಲುವಾಗಿ ದೇವರನ್ನು ಹೊಳೆಗೆ ಕರೆತಂದು ಸ್ನಾನಮಾಡಿಸಿ ಅಲ್ಲಿಯೇ ಪೂಜೆ ಮಾಡುವರು. ಮರಳಿ ಗುಡಿಗೆ ಬರುವಾಗ ಹೊಳೆಗೆ ಪೂಜಿಸಿ ದೇವರನ್ನು ಕರೆತರುವರು. ಇದನ್ನು ಅವಭೃತಸ್ನಾನ, ಮಣಿವಜಿನ ಎಂತಲೂ ಗ್ರಾಮೀಣರು ಕರೆಯುವುದು ವಾಡಿಕೆ. ಗಂಗಾಮಾತೆ ಪವಿತ್ರಳು ಎಂಬುದು ಇದಕ್ಕೆ ಕಾರಣವಾಗಿದೆ.

ಜೊತೆಗೆ ನೀರು ಪ್ರತಿಯೊಬ್ಬರ ಜೀವನಾವಶ್ಯಕ ಅಂಶವಾಗಿದ್ದು ಸಂವೃದ್ಧಿಗಾಗಿ ಹೊಳೆಯನ್ನು ಪೂಜಿಸುವುದು ಅರ್ಥಪೂರ್ಣವಾಗಿದೆ.

**ಕಲಶಸ್ಥಾಪನೆ**

ಶಿಷ್ಟದೇವರ ಜಾತ್ರೆಗಳ ಅಚರಣೆಗಳಲ್ಲಿ ಕಲಶಸ್ಥಾಪನೆ ಪ್ರಮುಖವಾಗಿರುತ್ತದೆ. ಕಲಶಸ್ಥಾಪನೆಯ ಸಮಯದಲ್ಲಿ ಅಪಾರ ಜನರು ಸೇರುತ್ತಾರೆ. "ನೂರ ಎಂಟು ಕಲಶಗಳನ್ನು ಸ್ಥಾಪಿಸಿದರೆ ಅಷ್ಟೋತ್ತರ ಕಲಶಗಳೆಂತಲೂ, ಅದಕ್ಕಿಂತ ಹೆಚ್ಚಿನ ಕಲಶಗಳಿದ್ದರೆ ಸಹಸ್ರ ಕಲಶೋತ್ಸವೆಂತಲೂ ಕರೆಯಲಾಗುತ್ತದೆ"[೬]

**ಕಲ್ಯಾಣೋತ್ಸವ**

ಶಿಷ್ಟದೇವರ ಜಾತ್ರೆಯ ಸಮಯದಲ್ಲಿ ದೇವರುಗಳಿಗೆ ಪೂಜೆಯ ಜೊತೆಗೆ ವಿವಾಹದ ವಿಧಿವಿಧಾನಗಳನ್ನು ಶಾಸ್ತ್ರೋಕ್ತವಾಗಿ ನೆರವೇರಿಸಲಾಗುತ್ತದೆ. ಇದನ್ನೇ ಕಲ್ಯಾಣೋತ್ಸವ ಎಂದು ಕರೆಯಲಾಗುವುದು. ಈ ಬಗೆಯ ಆಚರಣೆ ಸಮಾಜದ ಎಲ್ಲೆಡೆ ಕಂಡುಬರುತ್ತದೆ.

**ಗಿರಿಜಾ ಕಲ್ಯಾಣೋತ್ಸವ**

ಶಿಷ್ಟರ ಶೈವದೇವರ ಜಾತ್ರೆಯ ಸಮಯದಲ್ಲಿ ದೇವರ ವಿಗ್ರಹಗಳಿಗೆ ಶಾಸ್ತ್ರೋಕ್ತವಾಗಿ ನೆರವೇರಿಸುವ ವಿವಾಹಕಾರ್ಯವೇ ಗಿರಿಜಾಕಲ್ಯಾಣೋತ್ಸವ, ವೈಷ್ಣವರು ತಮ್ಮ ಜಾತ್ರೆಗಳ ಸಮಯದಲ್ಲಿ ದೇವರ ವಿಗ್ರಹಗಳಿಗೆ ಕಲ್ಯಾಣೋತ್ಸವದ ಸಲುವಾಗಿಮಾಡುವ ವಿವಾಹಕಾರ್ಯವನ್ನು ಸೀತಾ ಕಲ್ಯಾಣೋತ್ಸವ ಎಂದೂ ಕರೆಯುವರು.

**ತೆಪ್ಪೋತ್ಸವ**

ಶಿಷ್ಟದೇವರ ಜಾತ್ರೆಯ ಸಮಯದಲ್ಲಿ ದೇವಾಲಯದ ಪಕ್ಕದಲ್ಲಿರುವ ನದಿ, ಹೊಳೆ,ಹಳ್ಳ, ಕೆರೆ ಅಥವಾ ಪುಷ್ಕರಣಿಗಳ ನೀರಿನಲ್ಲಿ ತೆಪ್ಪವನಿಟ್ಟು ಅದರ ಮೇಲೆ ದೇವರ ವಿಗ್ರಹವನ್ನು ಪ್ರತಿಷ್ಠಾಪಿಸಿ, ಪೂಜಾಕೈಂಕರ್ಯದೊಂದಿಗೆ ದೇವರನ್ನು ಜಲವಿಹಾರಕ್ಕೆ ಒಂದೆರಡು ಬಾರಿ ನೀರಿನ ಮೇಲೆ ಸುತ್ತುಹಾಕುವುದು. ಆಚರಣೆಯ ಸಮಯದಲ್ಲಿ ಸಮಾಜದ ಎಲ್ಲರು ಅಪಾರ ಸಂಖ್ಯೆಯಲ್ಲಿ ಸೇರುತ್ತಾರೆ.

**ದೀಪೋತ್ಸವ**

ಶಿಷ್ಟ ಸಮುದಾಯದವರ ಶೈವ ದೇವರ ಜಾತ್ರೆಯ ಸಮಯದಲ್ಲಿ ಗುಡಿಯ ಮುಂದೆ ಕಲ್ಲಿನಲ್ಲಿ ಕೆತ್ತಿ ಪ್ರತಿಷ್ಠಾಪಸಿರುವ ಎತ್ತರದ ಕಲ್ಲಿನ ಕಂಬದ ಮೇಲಿರುವ ದೀಪಕ್ಕೆ ಎಣ್ಣೆಹಾಕಿ ಉರಿಸಲಾಗುತ್ತದೆ. ಕೆಲವೆಡೆ ಹಣತೆಗಳನ್ನು ಹಚ್ಚಿಟ್ಟು ಲಕ್ಷದೀಪೋತ್ಸವವನ್ನು ಆಚರಿಸಲಾಗುತ್ತದೆ. ಸಾಮಾನ್ಯವಾಗಿಕಾರ್ತಿಕ ಮಾಸದಲ್ಲಿ ನಡೆಯುವ ಜಾತ್ರೆಗಳಲ್ಲಿ ಈ ಬಗೆಯ ಆಚರಣೆಗಳು ಹೆಚ್ಚಾಗಿ ಕಂಡುಬರುತ್ತವೆ.

**ಬಲಿಹರಣ**

ಶಿಷ್ಟರು ಜಾತ್ರೆಯ ಸಮಯದಲ್ಲಿ ಗ್ರಾಮದ ಶಾಂತಿಗಾಗಿ ಬಲಿಹರಣ ಆಚರಣೆಯನ್ನು ಮಾಡುತ್ತಾರೆ. ಅನ್ನ, ಹೆಸರು, ಬೇಳೆ, ಬೆಲ್ಲ ಮೊದಲಾದ ಪದಾರ್ಥಗಳನ್ನು ಕುಂಕುಮದ ಜೊತೆ ಬೆರೆಸಿ ಬಲಿಹರಣ ಪೂಜಾ ಸಾಮಾಗ್ರಿಯನ್ನು ತಯಾರಿಸುತ್ತಾರೆ. ಊರಿನ ನಾಲ್ಕು ದಿಕ್ಕುಗಳಿಗೂ ಬಲಿಹರಣವನ್ನು ಕುರಿತು ಮಹಾಮಂತ್ರಗಳನ್ನು ಹೇಳುತ್ತಾ ಹಾಕಲಾಗುತ್ತದೆ.

**ಬ್ರಹ್ಮರಥೋತ್ಸವ**

ಬ್ರಹ್ಮರಥೋತ್ಸವವು ಜಾತ್ರೆಯಲ್ಲಿ ಜನಾಕರ್ಷಣೆಯ ಕೇಂದ್ರ ಬಿಂದು. ಬ್ರಹ್ಮರಥೋತ್ಸವವನ್ನು ದೊಡ್ಡರಥೋತ್ಸವ ಎಂದು ಕರೆಯುವರು. ಬ್ರಹ್ಮ ಎಂಬ ಪದಕ್ಕೆ ಕೇಂದ್ರಸ್ಥಾನ ಎಂಬ ಅರ್ಥವಿದೆ. ಇಂತಹ ರಥದಲ್ಲಿ ದೇವರ ಉತ್ಸವಮೂರ್ತಿಯನ್ನು ಪ್ರತಿಷ್ಠಾಪಿಸಿ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಸಾಗುತ್ತದೆ. ಬ್ರಹ್ಮರಥೋತ್ಸವ ದರ್ಶನದಿಂದ ಮಾಡಿದ ಪಾಪ ಸವೆದು, ಭವಿಷ್ಯದ ದಿನಗಳಲ್ಲಿ ಜೀವನ ಪಥ ಸುಗಮವಾಗಿ ಸಾಗುತ್ತದೆ ಎಂಬ ನಂಬಿಕೆ ಹಳ್ಳಿಗರಲ್ಲಿದೆ. ಈ ಕಾರಣಕ್ಕಾಗಿ ಜನಜಾತ್ರೆಯಾಗಿ ಸೇರುತ್ತಾರೆ. ರಥವನ್ನು ಕಲ್ಲಿನಿಂದ, ಮರದಿಂದ, ಕೆಲವುಕಡೆಗಳಲ್ಲಿ ಲೋಹಗಳಿಂದಲೂ ತಯಾರಿಸಿರುವುದುಂಟು. ರಥದ ಮೇಲುಭಾಗದಲ್ಲಿ ಕಲಶವನ್ನು ಪ್ರತಿಷ್ಠಾಪಿಸಿ ರಥವನ್ನು ಎಳೆದು ತರಲಾಗುತ್ತದೆ. ಸಮಾಜದ ಎಲ್ಲಾ ವರ್ಗದವರಿಗೂ ರಥೋತ್ಸವದ ದರ್ಶನಭಾಗ್ಯ ದೊರೆಯಲಿ ಎಂಬ ಉದ್ದೇಶವನ್ನು ಈ ಆಚರಣೆ ಒಳಗೊಂಡಿದೆ.

**ಹನುಮಂತ ವಾಹನೋತ್ಸವ**

ಶಿಷ್ಟರ ಜಾತ್ರೆಗಳಲ್ಲಿ ಈ ಬಗೆಯ ಆಚರಣೆಯು ರಾಮದೇವಾಲಯ ಇರುವ ಕಡೆ ಕಂಡುಬರುತ್ತದೆ. ಇದುಕಿಂಕರ ಭಕ್ತಿಯ ಅನನ್ಯತೆಯ ಕುರುಹಾಗಿದೆ. ಹನುಮಂತನ ವಾಹನದ ಮೇಲೆ ಸೀತಾರಾಮರ ವಿಗ್ರಹಮೂರ್ತಿಗಳನ್ನು ಪ್ರತಿಷ್ಠಾಪಿಸಿ ಉತ್ಸವಮೂರ್ತಿಗಳ ಮೆರವಣಿಗೆ ಸಾಗುವುದರಿಂದ ಈ ಆಚರಣೆಗೆ ಹನುಮಂತ ವಾಹನೋತ್ಸವ ಎಂದು ಕರೆಯಲಾಗಿದೆ.

## ೫.೬ ಗ್ರಾಮೀಣ ದೇವರ ಜಾತ್ರೆಗಳು

ಗ್ರಾಮೀಣ ದೇವರ ಜಾತ್ರೆಗಳು ಬುಡಕಟ್ಟು ಹಿನ್ನೆಲೆ ಹೊಂದಿರುತ್ತವೆ. ಹಳ್ಳಿಯ ಜನರೆಲ್ಲ ಸೇರಿ, ಕೆಲವೊಮ್ಮೆ ಸುತ್ತಮುತ್ತಲ ಹಳ್ಳಿಯ ಜನರೆಲ್ಲ ಗೊತ್ತುಪಡಿಸಿದ ದಿನದಂದು ಒಂದೆಡೆ ಸೇರಿ ದೇವರ ಅಥವಾ ಗ್ರಾಮದೇವತೆಯ ಹೆಸರಿನಲ್ಲಿ ವಿಜೃಂಭಣೆಯಿಂದ ಜಾತ್ರೆಯನ್ನು ಆಚರಿಸುತ್ತಾರೆ. ಬುಡಕಟ್ಟು ಸಮುದಾಯದ ಪ್ರಧಾನ ಜಾತ್ರೆಗಳು ಪ್ರತಿವರ್ಷ ನಡೆಯುತ್ತವೆ. ಕೆಲವು ಜಾತ್ರೆಗಳು ೩,೫,೭,೧೨ ವರ್ಷಗಳಿಗೊಮ್ಮೆ ಆಚರಿಸಲ್ಪಡುತ್ತವೆ. ಭಾರತೀಯ ಸಮಾಜದ ಪ್ರತಿ ಊರುಗಳಲ್ಲಿಯೂ

ಗ್ರಾಮ ದೇವರ ಜಾತ್ರೆ ಒಂದಲ್ಲೊಂದು ಕಾರಣಕ್ಕಾಗಿ ನಡೆಯುತ್ತಿರುವುದು ಕಂಡುಬರುತ್ತದೆ. ಗ್ರಾಮೀಣ ದೇವರ ಜಾತ್ರೆಗಳು ಶೂನ್ಯ ತಿಂಗಳುಗಳನ್ನು ಲೆಕ್ಕಿಸದೆ ಅಮಾವಾಸ್ಯೆ ದಿನಗಳಂದು ಹೆಚ್ಚಾಗಿ ಆಚರಿಸಲ್ಪಡುತ್ತವೆ.

ಜಾತ್ರೆಯ ಸಮಯದಲ್ಲಿ ಹಳ್ಳಿಗರ ಸಂಭ್ರಮಕ್ಕೆ ಪಾರವಿರುವುದಿಲ್ಲ. ಖಾಸಾ ಬುಡಕಟ್ಟು ಜಾನಪದ ಸಂಪ್ರದಾಯ, ನಂಬಿಕೆ, ಪದ್ಧತಿ, ರೀತಿ – ನೀತಿಗಳಿಗನುಸಾರವಾಗಿ ಈ ಜಾತ್ರೆಗಳು ನಡೆಯುತ್ತವೆ. ಪ್ರಸ್ತುತದಲ್ಲಿ ಗ್ರಾಮೀಣ ದೇವರ ಜಾತ್ರೆಗಳಲ್ಲಿಯೂ ಶಿಷ್ಟ ಜಾತ್ರೆಯ ಧ್ವಜಾರೋಹಣ, ಕಲಶಸ್ಥಾಪನೆ, ಕಲ್ಯಾಣೋತ್ಸವ, ದೀಪೋತ್ಸವದಂತಹ ಕೆಲವು ಆಚರಣೆಗಳು ಸೇರಿಕೊಂಡಿವೆ. ಈ ಜಾತ್ರೆಗಳು ಪ್ರಮುಖವಾಗಿ ಕಂಕಣಕಟ್ಟುವ, ಸಾರುಕೊಡುವ ಸಾಂಪ್ರದಾಯಿಕ ವಿಧಿಯಾಚರಣೆಯೊಂದಿಗೆ ಪ್ರಾರಂಭವಾಗಿ ಮೀಸಲು ಒಪ್ಪಿಸುವ, ಎಡೆಯೊಪ್ಪಿಸುವ ಹರಕೆ ತೀರಿಸುವ, ಬಲಿ ಕೊಡುವ ಕಾರ್ಯಗಳೊಂದಿಗೆ ಅಂತ್ಯವಾಗುತ್ತದೆ. ಗ್ರಾಮೀಣ ದೇವರ ಜಾತ್ರೆಗಳು ಸಾಮಾಜಿಕ ಸಾಮರಸ್ಯದ ಸಂಕೇತಗಳಾಗಿವೆ. ಜಾತ್ರಾ ಸಮಯದಲ್ಲಿ ಎಲ್ಲಾ ಜಾತಿಯ ಜನರು ತಮ್ಮ ಪಾಲಿನ ಕಾರ್ಯವನ್ನು ಅನುವಂಶೀಯವಾಗಿ ನೆರವೇರಿಸುತ್ತಾ ಬಂದಿದ್ದಾರೆ. ದೇವರ ಕೆಲಸ ಕಾರ್ಯಗಳನ್ನು ಜಾತಿಯನುಸಾರ ಹಂಚಿಕೊಂಡು ಮಾಡುವುದು ಸಾಮಾಜಿಕ ಸ್ತರವ್ಯವಸ್ಥೆಯನ್ನು ಪ್ರತಿನಿಧಿಸುತ್ತದ. ಎಲ್ಲಾ ಜಾತಿಯವರು ಒಗ್ಗೂಡಿ ಜಾತ್ರೆಯ ವಿಧಿ ವಿಧಾನಗಳನ್ನು ಕೈಗೊಳ್ಳುವುದು ಸಾಮಾಜಿಕ ಐಕ್ಯತೆಯನ್ನು ಪ್ರತಿನಿಧಿಸುತ್ತದೆ.

ಗ್ರಾಮೀಣ ದೇವರ ಜಾತ್ರೆಗಳು ದ್ರಾವಿಡ ಸಂಸ್ಕೃತಿಯ ಪ್ರತೀಕವಾಗಿದ್ದು ಇವು ಬುಡಕಟ್ಟು ಪ್ರಧಾನ ಆಚರಣೆಗಳನ್ನು ಜೀವಂತವಾಗಿರಿಸಿದೆ. ಈ ಬಗೆಯ ಜಾತ್ರೆಗಳಲ್ಲಿ ಸಾರುವುದು, ಎಡೆ ಒಪ್ಪಿಸುವುದು, ಗದ್ದಿಗೆ ಪೂಜೆ, ಮೆರವಣಿಗೆ, ತಮಟೆಸೇವೆ, ಉರುಳು ಸೇವೆ, ಉರುಳು ಸೇವೆ, ಓಕುಳಿಯಾಟ, ತೇರಡಿಸೇವೆ, ಬೇವಿನುಡುಗೆಸೇವೆ, ದೀಪದಾರತಿ, ಧೂಪಸೇವೆ, ಬಾಯಿಬೀಗ ಸೇವೆ, ಬೆತ್ತಲೆ ಸೇವೆ, ಪ್ರಾಣಿಬಲಿ, ಸಿಡಿಯಾಡಿಸುವುದು, ಗಾವುಸಿಗಿತ ಮುಂತಾದ ಆಚರಣೆಗಳು ಜಾರಿಯಲ್ಲಿವೆ.

**ಸಾರುವುದು**

ಗ್ರಾಮೀಣ ದೇವರ ಜಾತ್ರೆಗಳಲ್ಲಿ ಸಾರುವ ಆಚರಣೆ ಪ್ರಧಾನವಾಗಿ ಕಂಡುಬರುತ್ತದೆ.ಜಾತ್ರೆ ನಡೆಯುವ ಕುರಿತಾಗಿ ಪೂರ್ವಸಿದ್ದತೆ ಮತ್ತುಕಾರ್ಯಕಲಾಪಗಳು ಮಾಹಿತಿಯನ್ನು ದೇವರ ಒಕ್ಕಲು ಮಕ್ಕಳಿಗೆ ತಿಳಿಸುವ ಆಚರಣೆ ಇದಾಗಿದೆ. ಇದನ್ನು 'ಸಾರುಕೊಡುವುದು' 'ಸಾರುವುದು' ಎಂದು ಕರೆಯಲಾಗುತ್ತದೆ. ಈ ಬಗೆಯ ಮಾಹಿತಿಯನ್ನು ತಿಳಿಸುವ ಕಾರ್ಯಭಾರ ಪರಂಪರಾನುಗತವಾಗಿ ನಡೆದು ಬಂದಿದ್ದು ದಳವಾಯಿಗಳು, ಹೆಳವರು ಈ ಕಾರ್ಯವನ್ನು ನಿರ್ವಹಿಸುತ್ತಾರೆ. ಜಾತ್ರೆ ನಡೆಯುವ ವಿಷಯ ಎಲ್ಲರಿಗೂ ತಿಳಿಯಲಿ ಎಂಬುದು ಈ ಆಚರಣೆಯ ಉದ್ದೇಶವಾಗಿದೆ. ಸಾರುವುದರೊಂದಿಗೆ ಗ್ರಾಮೀಣ ದೇವರ ಹಬ್ಬ ಮತ್ತು ಜಾತ್ರೆಗಳು ಆರಂಭವಾಗುತ್ತವೆ. ಇತ್ತೀಚಿನ ದಿನಗಳಲ್ಲಿ ಆಟೋದಲ್ಲಿ ಮೈಕ್‌ನಿಂದ ಸಾರುವುದು, ಭಿತ್ತಿ ಪತ್ರ ಅಂಟಿಸಿ ಪ್ರಚಾರ ಮಾಡುತ್ತಾರೆ.

**ಎಡೆ ಒಪ್ಪಿಸುವುದು**

ದೇವರಿಗೆ ಜಾತ್ರೆಯ ಸಮಯದಲ್ಲಿ ಎಡೆಮಾಡಿ ಒಪ್ಪಿಸುವುದು ಜನರಿಗೆ ದೇವರ ಮೇಲೆ ಇರುವ ನಂಬಿಕೆ. ಭಯ ಮತ್ತು ಭಕ್ತಿಯ ಆಚರಣೆಯಾಗಿದೆ. ದೇವರಿಗೆ ಎಡೆಯನ್ನು ಭಕ್ತಿ ಭಾವದಿಂದ ತಯಾರಿಸಿ ಒಪ್ಪಿಸುವುದರಿಂದ ದೇವರ ಪ್ರೀತಿಗೆ ಪಾತ್ರರಾಗಬಹುದೆಂಬ ನಂಬಿಕೆ ಈ ಆಚರಣೆಗೆ ಕಾರಣೀಭೂತವಾಗಿದೆ. ಸೌಮ್ಯ ಮತ್ತು ಉಗ್ರ ದೇವರುಗಳು ನೈವೇದ್ಯಕ್ಕೆ ಪ್ರತ್ಯೇಕ ಆಹಾರಗಳನ್ನು ಬೇಯಿಸಿ ದೇವರೆದುರಿನಲ್ಲಿ ಬಾಳೆಯೆಲೆ ಹಾಕಿ ಎಡೆಯಿಟ್ಟು ದೇವರಿಗೆ ಸಮರ್ಪಿಸುವರು. ಸೌಮ್ಯ ದೇವರುಗಳಿಗೆ ಸಸ್ಯಾಹಾರದಿಂದ ತಯಾರಿಸಿದ ನೈವೇದ್ಯದ ಎಡೆಯಾದರೆ ಉಗ್ರ ದೇವತೆಗಳಿಗೆ ಮಾಂಸಾಹಾರದ ನೈವೇದ್ಯ ಒಪ್ಪಿಸಿ ದೇವರನ್ನು ಸಂಪ್ರೀತಿಗೊಳಿಸಿ ಒಲುಮೆಗೆ ಪಾತ್ರರಾಗುವ ಆಚರಣೆ ಇದಾಗಿದೆ.

**ಗದ್ದಿಗೆ ಪೂಜೆ**

ಬುಡಕಟ್ಟು ಜನರು ಜಾತ್ರೆ ಸಮಯದಲ್ಲಿ ದೇವರುಗಳನ್ನು ಪೂಜಾರ್ಥವಾಗಿ ಗುಡಿಯಿಂದ ಹೊರತೆಗೆದಾದ ಅವುಗಳನ್ನು ಗದ್ದುಗೆಯ ಮೇಲೆ ಪ್ರತಿಷ್ಠಾಪಿಸುವರು. ಮೆರವಣಿಗೆ ಸಮಯದಲ್ಲಿ ವಿಶ್ರಾಂತಿಗಾಗಿ ದೇವರುಗಳನ್ನು ಗದ್ದುಗೆಯ ಮೇಲೆ ಕೂರಿಸುವುದು ರೂಢಿಯಲ್ಲಿದೆ. ಕರಿಕಂಬಳಿಯನ್ನು ಚೌಕಾಕಾರವಾಗಿ ಮಡಚಿನೆಲದ ಮೇಲೆ ಅದನ್ನು ಹಾಸಿ ಅದರಲ್ಲಿ ಅಕ್ಕಿಕಾಳು ಮತ್ತು ಹೂಗಳಿಂದ ಪ್ರಕೃತಿಯಾಧಾರಿತ ಕೆಲವು ಚಿಹ್ನೆಗಳೊಂದಿಗೆ ಅಲಂಕರಿಸಿ ಸೂರ್ಯ, ಚಂದ್ರ, ಪಶು ಇತ್ಯಾದಿಗಳಿಂದ ಗದ್ದಿಗೆಯನ್ನು ತಯಾರು ಮಾಡುತ್ತಾರೆ. ಇಂತಹ ಗದ್ದಿಗೆಯ ಮೇಲೆ ದೇವರ ಉತ್ಸವಮೂರ್ತಿಗಳನ್ನು ವಿಶ್ರಾಂತಿಗೆಂದು ಕೂರಿಸಿದ ಸಮಯದಲ್ಲಿ ದೈವ ಸಂಬಂಧಿ ಮನರಂಜನೆಯ ಚಟುವಟಿಕೆಗಳು ನಡೆಯುವದುಂಟು.

**ಮೆರವಣಿಗೆ**

ಗ್ರಾಮೀಣ ದೇವರ ಜಾತ್ರೆಗಳಲ್ಲಿ ಉತ್ಸವಮೂರ್ತಿಯ ಮೆರವಣಿಗೆ ಪ್ರಧಾನ ಆಚರಣೆಗಳಲ್ಲಿ ಒಂದಾಗಿದೆ. ಜಾತ್ರೆಯ ಮೆರವಣಿಗೆ ಸಮಯದಲ್ಲಿ ದೇವರ ವಿಗ್ರಹದೊಂದಿಗೆ ಅಲಗು, ಜಾಗಟೆ, ಛತ್ರಿ, ಕುದುರೆ, ಕಲಶಗಳನ್ನು ಹೂವಿನಿಂದ ಅಲಂಕರಿಸಿ, ಪೂಜಾರಿಗಳು ತಮ್ಮ ತಲೆಯಮೇಲೆ, ಭುಜದ ಮೇಲೆ ಹೊತ್ತು ಮೆರವಣಿಗೆ ಮಾಡುವರು. ಕೆಲವು ಕಡೆ ದೇವರ ಉತ್ಸವ ಮೂರ್ತಿಯನ್ನು ಪಲ್ಲಕ್ಕಿ, ಬಂಡಿ ರಥಗಳಲ್ಲಿ ಕೂರಿಸಿ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡುವರು. ದೇವರ ಮೆರವಣಿಗೆಯಲ್ಲಿ ಗ್ರಾಮದ ಎಲ್ಲಾ ಜನರು ಜಾತಿ ಭೇದ ಮರೆತು ಒಂದುಗೂಡುವರು.

**ತಮಟೆ ಸೇವೆ**

ಗ್ರಾಮೀಣ ದೇವರ ಜಾತ್ರೆಗಳಲ್ಲಿ ಸಹಜವಾಗಿ ಬಳಸುವ ವಾದ್ಯ ತಮಟೆಯಾಗಿದೆ. ಗ್ರಾಮೀಣರು ಇದನ್ನು ಆಡುಭಾಷೆಯಲ್ಲಿ ಸಂಸ್ಕೃತಿಯ ಪ್ರಧಾನ ಕುರುಹಾಗಿ, ದೇವರು ಜೀವನವನ್ನು ಸಂತೋಷದಾಯಕವಾಗಿರುವಂತೆ ನೋಡಿಕೊಳ್ಳುತ್ತಾನೆ ಎಂಬ ಭಾವನೆ ಹಳ್ಳಿಗರಲ್ಲಿದೆ. ಕಾರಣ, ತಮಟೆಸೇವೆಯನ್ನು ಸಲ್ಲಿಸುವ ಆಚರಣೆ ಜಾರಿಯಲ್ಲಿವೆ. ಭಕ್ತರು ಹರಕೆ ತೀರಿಸುವ ಆಚರಣೆಯಾಗಿ ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ.

**ಉರುಳು ಸೇವೆ**

"ಗ್ರಾಮೀಣರು ಹರಕೆ ತೀರಿಸುವ ವಿಶಿಷ್ಟ ಆಚರಣೆಯಾಗಿ ಉರುಳು ಸೇವೆ ಜಾರಿಯಲ್ಲಿದೆ. ಹರಕೆ ಹೊತ್ತವರು ಒದ್ದೆ ಬಟ್ಟೆಯನ್ನುಟ್ಟು ದೇವಸ್ಥಾನದ ಸುತ್ತಲೂ ಪ್ರದಕ್ಷಿಣೆವಾಗಿ ಉರುಳುವ ಸೇವೆಯೇ"[೭] ಉರುಳುಸೇವೆ. ಕೆಲಮೊಮ್ಮೆ ಭಕ್ತರು ಬಿಸಿಮೈಯಲ್ಲಿ ರಣಬಿಸಿಲನ್ನೂ ಲೆಕ್ಕಿಸದೆ ದೇವಸ್ಥಾನದ ಸುತ್ತಲು ದಿಂಡುರುಗಳು ಸೇವೆಯನ್ನು ಮಾಡುವುದುಂಟು. ಈ ಬಗೆಯ ಆಚರಣೆಗಳನ್ನು ಗ್ರಾಮೀಣ ದೇವರ ಜಾತ್ರೆಗಳ ಸಮಯದಲ್ಲಿ ಕಾಣುತ್ತೇವೆ.

**ಓಕುಳಿಯಾಟ**

ಜಾತ್ರೆಗಳ ಕೊನೆಯ ದಿನ ಬಣ್ಣದ ನೀರನ್ನು ಅಥವಾ ಅರಿಸಿನದ ನೀರನ್ನು ಎರಚಾಡಿಕೊಳ್ಳುವ ಮೂಲಕ ಈ ಆಚರಣೆಯನ್ನು ಮಾಡಲಾಗುವುದು. ಉತ್ಸವ ಸಂದರ್ಭದಲ್ಲಿ ಒಬ್ಬರ ಮೇಲೊಬ್ಬರು ಎರಚುವ ಬಣ್ಣದ ನೀರು ಮತ್ತು ಆರತಿ ಬೆಳಗಲು ಉಪಯೋಗಿಸುವ ಅರಿಸಿನದ ನೀರನ್ನು ಓಕುಳಿ ಎನ್ನುವರು. ಅರಿಸಿನ, ಸುಣ್ಣವನ್ನು ನೀರಿನಲ್ಲಿ ಬೆರೆಸಿ ಕೆಲವೆಡೆ ಓಕುಳಿಯನ್ನು ತಯಾರಿಸಿ ಪರಸ್ಪರ ಎರಚುವ ಮೂಲಕ ಮನರಂಜನೆಯನ್ನು ಪಡೆಯುವರು. ಓಕುಳಿಯಾಟವು ನೊಡುಗರಿಗೆ ಮನರಂಜನೆ ಎಂಬಂತೆ ಕಂಡುಬಂದರೂ ರೋಗಾಣುಗಳನ್ನು ನಾಶಮಾಡುವ ಶಕ್ತಿ ಅರಿಸಿನಕ್ಕೆ ಇದ್ದು ಜಾತ್ರೆಗಳಲ್ಲಿ ಹೊರಭಾಗದಿಂದ ಬರುವ ಜನರಿಗೇನಾದರೂ ಅಂಟುರೋಗಗಳು ಇದ್ದಲ್ಲಿ ಅವು ಇತರರಿಗೆ ಹರಡದಂತೆ ನೋಡಿಕೊಳ್ಳುವ ಮುಂಜಾಗ್ರತೆಯ ಉದ್ದೇಶ ಈ ಆಚರಣೆಯಲ್ಲಿದೆ.

**ತೇರಡಿ ಸೇವೆ**

ಬಂಜೆಯಾಗಿದ್ದ ಮಹಿಳೆ ದೇವರಿಗೆ ಹರಕೆ ಹೊತ್ತು ಮಕ್ಕಳನ್ನು ಪಡೆದು, ತಾಯಿಯಾದಾಗ ಹರಕೆ ತೀರಿಸುವ ವಿಶಿಷ್ಟ ಆಚರಣೆಯಾಗಿದೆ. ದೇವರ ಅನುಗ್ರಹದಿಂದ ಹುಟ್ಟಿದ ಮಕ್ಕಳನ್ನು ಜಾತ್ರೆಯ ಸಮಯದಲ್ಲಿ ತೇರನ್ನು ಎಳೆಯುವಾಗ, ತೇರಿನ ಚಕ್ರದಡಿ ಮಲಗಿಸಿದಂತೆ ಮಾಡಿ ಎತ್ತಿಕೊಳ್ಳುವ ಆಚರಣೆ ಇದಾಗಿದೆ. ದೇವರ ಅನುಗ್ರಹದಿಂದ ಹುಟ್ಟಿದ ಮಗುವನ್ನು ದೇವರಿಗೆ ಒಪ್ಪಿಸುವ ಮೂಲಕ ಅವನ ಋಣದಿಂದ ಮುಕ್ತರಾಗುವ ಆಚರಣೆ ಇದಾಗಿದೆ.

**ಬೇವಿನುಡುಗೆ ಸೇವೆ**

ಗ್ರಾಮೀಣರ ಸಾಂಪ್ರದಾಯಿಕ ಹರಕೆ ತೀರಿಸುವ ಆಚರಣೆಗಳಲ್ಲಿ ಬೇವಿನುಡುಗೆ ಸೇವೆ ಒಂದಾಗಿದೆ. ಗಾಳಿ ಮೂಲಕ ರೋಗಾಣುಗಳಿಂದ ಹರಡುವ ಮತ್ತು ಮಾರಣಾಂತಿಕ ರೋಗಗಳಿಗೆ ಹಳ್ಳಿಗರು ತುತ್ತಾದಾಗ ದೇವರ ಮೊರೆಹೊಕ್ಕು ಬೇವಿನುಡುಗೆಯ ಹರಕೆ ಹೊರುವರು. ರೋಗದಿಂದ ವಿಮುಕ್ತರಾದ ಮೇಲೆ ಬೇವಿನ ಸೊಪ್ಪನ್ನು ಬೆತ್ತಲೆ ಮೈಗೆ ಉಡುಗೆಯಾಗಿ ಉಟ್ಟು ದೇವರಿಗೆ ಮೂರು ಸುತ್ತು ಪ್ರದಕ್ಷಿಣೆ ಹಾಕುವ ಸಾಂಪ್ರದಾಯಿಕ ಆಚರಣೆಯಾಗಿದೆ. ಈ ಬಗೆಯ ಆಚರಣೆಯು ಗ್ರಾಮೀಣ ಜನರ ಮೂಢನಂಬಿಕೆಯ ಆಚರಣೆ ಎಂಬಂತೆ ಕಂಡುಬಂದರೂ ಬೇವಿನ ಎಲೆ ಮತ್ತು ಬೇವಿನೆಣ್ಣೆ ಕಹಿ ರುಚಿಯು ಔಷಧೀಯ ಗುಣವುಳ್ಳದ್ದಾಗಿದೆ. ಮಾನವ ಜನಾಂಗಕ್ಕೆ ಮಾರಣಾಂತಿಕ ರೋಗಗಳನ್ನು ಹರಡುವ ಕುಷ್ಟರೋಗದಂತಹ ಸಿಡುಬು, ದಡಾರ, ಅಮ್ಮ ಮೊದಲಾದ ಚರ್ಮರೋಗಗಳನ್ನು ತರಬಲರಲ ರೋಗಾಣುಗಳನ್ನು ಕೊಲ್ಲುವಂತಹ ಮತ್ತು ಔಷಧೀಯ ಗುಣಗಳೂ ಬೇವಿನಲ್ಲಿರುವುದನ್ನು ಇತ್ತೀಚಿನ ಕೆಲವು ವೈಜ್ಞಾನಿಕ ಸಂಶೋಧನೆಗಳು ದೃಢಪಡಿಸಿವೆ. ಇದರಿಂದಾಗಿ ಗ್ರಾಮೀಣರ ಕೆಲವು ಸಾಂಪ್ರದಾಯಿಕ ಆಚರಣೆಗಳ ಹಿಂದೆ ವೈಜ್ಞಾನಿಕ ದೃಷ್ಟಿ ಇರುವುದನ್ನು ಕಾಣುತ್ತೇವೆ.

**ದೀಪದಾರತಿ**

ಗ್ರಾಮೀಣರು ದೇವರಿಗೆ ಹರಕೆಯೊಪ್ಪಿಸುವ ಆಚರಣೆಯಾಗಿ ಇದು ಎಲ್ಲೆಡೆ ಕಂಡುಬರುತ್ತದೆ. ಇದು ಮಹಿಳೆಯರು ಮಾತ್ರ ಹರಕೆ ಹೊತ್ತು ತೀರಿಸುವ ಆಚರಣೆಯಾಗಿದೆ. ದೀಪದಾರತಿಯನ್ನು ಸಾಮಾನ್ಯವಾಗಿ ತಂಬಿಟ್ಟಿನಿಂದ ತಯಾರಿಸಲಾಗುತ್ತದೆ. ಅಕ್ಕಿಯ ಹಿಟ್ಟು ಮತ್ತು ಬೆಲ್ಲದಿಂದ ತಂಬಿಟ್ಟಿನ ದೀಪವನ್ನು ತಯಾರಿಸಿ, ಹತ್ತಿಯಿಂದ ಬತ್ತಿ ಹೊಸೆದು ಅದರಲ್ಲಿಟ್ಟು ತುಪ್ಪ ಅಥವಾ ಎಣ್ಣೆಯ ಸಹಾಯದಿಂದ ದೀಪವನ್ನು ಬೆಳಗಿಸುತ್ತಾರೆ. ಈ ದೀಪದ ಸಹಾಯದಿಂದ ದೇವರಿಗೆ ಆರತಿ ಬೆಳಗುತ್ತಾರೆ. ಊರಿನ ಹೆಣ್ಣುಮಕ್ಕಳೆಲ್ಲ ತಮ್ಮ ಭಕ್ತಿಗೆ ತಕ್ಕಷ್ಟು ಗಾತ್ರದ ತಂಬಿಟ್ಟಿನ ದೀಪಗಳನ್ನು ತಯಾರಿಸಿ ತಟ್ಟೆಯಲ್ಲಿಟ್ಟು ಗ್ರಾಮದೇವತೆಯ ಬಳಿ ಸಾಮೂಹಿಕವಾಗಿ ಆರತಿ ದೀಪಗಳನ್ನು ತಯಾರಿಸಿ ತಟ್ಟೆಯಲ್ಲಿಟ್ಟು ಗ್ರಾಮದೇವತೆಯ ಬಳಿ ಸಾಮೂಹಿಕವಾಗಿ ಆರತಿ ಬೆಳಗುವುದು ಕಂಡುಬರುತ್ತದೆ. ಕೆಲವು ಗಂಡುದೀಪದಾರತಿ ಬೆಳಗುವುದೂ ಇದೆ. ದೊಡ್ಡ ತಂಬಿಟ್ಟಿನ ದೀಪವನ್ನು ಗಂಡುದೀಪ ಎಂದು ಕರೆಯಲಾಗುವುದು. ಈ ಬಗೆಯ ದೀಪದಾರತಿಯನ್ನು ಬೆಳಗುವುದು ಕೆಲವೆ ನಿರ್ದಿಷ್ಟ ಮನೆತನದವರಿಗೆ ಮಾತ್ರ ಸೇರಿರುತ್ತದೆ. ಈ ಬಗೆಯ ಸಂಪ್ರದಾಯ ಇರುವ ಕಡೆಗಳಲ್ಲಿ ಗಂಡುದೀಪದಾರತಿ ಬೆಳಗಿದ ನಂತರವೇ ಉಳಿದವರು ತಮ್ಮ ದೀಪದಾರತಿಗಳನ್ನು ತಂದು ಸಾಮೂಹಿಕವಾಗಿ ಆರತಿ ಬೆಳಗಬೇಕಾಗುತ್ತದೆ. ಬರಿ ಕಷ್ಟಗಳೆ ತುಂಬಿರುವ ಅಂಧಕಾರದ ಬಾಳಿಗೆ ಸುಖವೆಂಬ ಸುಜ್ಞಾನದ ಬೆಳಕಿನ ದೀಪ ಹಚ್ಚಿ ಬದುಕನ್ನು ಹಸನುಗೊಳಿಸು ಎಂಬ ನಂಬಿಕೆ ಈ ಆಚರಣೆಯ ಹಿನ್ನಲೆಯಾಗಿದೆ.

**ಧೂಪಸೇವೆ**

ಜನಪದರ ಭಾವನಾತ್ಮಕತೆಯ ಶುದ್ಧತೆಗೆ ಧೂಪಸೇವೆಯ ಆಚರಣೆ ಸಾಕ್ಷಿಯಾಗಿದೆ. ಜಾತ್ರೆಯ ದಿನದಂದು ದೇವರ ಎದುರಿನಲ್ಲಿ ಇಟ್ಟಿರುವ ಬೆಂಕಿಯ ಕೆಂಡಗಳ ಮೇಲೆ ಸಾಂಬ್ರಾಣಿಯಂತಹ ಸುವಾಸನೆಯುಕ್ತ ಪದಾರ್ಥಗಳ ಪುಡಿಯನ್ನು ಹಾಕಿ ದೂಪದ ಹೊಗೆಯನ್ನು ಎಬ್ಬಿಸುವ ಆಚರಣೆಯೇ ಧೂಪಸೇವೆ. ಸುಗಂಧ ವಸ್ತುಗಳಿಂದ ಕೂಡಿದ ಧೂಪವೆಬ್ಬಿಸಿ ಸಲ್ಲಿಸುವ ಸೇವೆ ಇದಾಗಿದೆ. ''ಸಾಂಬ್ರಾಣಿ ಮುಂತಾದ ಸುಗಂಧವಸ್ತುಗಳನ್ನು ಕೆಂಡ ಮೇಲೆ ಹಾಕಿದಾಗ ಹೊರಡುವ ಪರಿಮಳಯುಕ್ತವಾದ ಹೊಗೆ''[೮] ಧೂಪ ಸೇವೆಯಾಗಿದೆ. ನೀಕೊಟ್ಟ ನಾಲ್ಕುದಿನದ ಈ ನಶ್ವರದ ಜೀವನ, ಸಾಂಬ್ರಾಣಿಯ ಸುವಾಸನೆಯ ಹೊಗೆಯಂತೆ ಎಲ್ಲರಿಗೂ ಹಿತವಾಗಿ ಕೂಡಿರಲಿ ಎಂದು ಭಕ್ತರು ದೇವರಲ್ಲಿ ವಿನಂತಿಸಿಕೊಳ್ಳುವ ಆಚರಣೆಯ ಸೇವೆ ಇದಾಗಿದೆ.

**ಬಾಯಿಬೀಗ ಸೇವೆ**

ಭಕ್ತರು ಗ್ರಾಮೀಣ ದೇವರ ಜಾತ್ರೆಯಲ್ಲಿ ತಾವು ಮಾಡಿಕೊಂಡ ಹರಕೆ ತೀರಿಸುವ ಒಂದು ಆಚರಣೆಯಾಗಿ, ಬಾಯಿಬೀಗ ಸೇವೆ ಜಾರಿಯಲ್ಲಿದೆ. ಬಾಯಿಗೆ ತಂತಿಯ ಸಾಧನವನ್ನು ಚುಚ್ಚಿಕೊಳ್ಳುವ ಸೇವೆಯಿದಾಗಿದೆ. ಹರಕೆ ಮಾಡಿಕೊಂಡವರು ದೇವರ ಜಾತ್ರೆಯ ದಿನದಂದು ಎಡ ಕೆನ್ನೆಯಿಂದ ಬಲಕೆನ್ನೆಗೆ ಹಾದು ಹೋಗುವ ರೀತಿಯಲ್ಲಿ ಬೆಳ್ಳಿ ಅಥವಾ ತಾಮ್ರದ ತಂತಿಯನ್ನು ತೂರಿಸಿಕೊಳ್ಳುವುದೇ ಬಾಯಿಬೀಗ ಸೇವೆ. ಅಂತೆಯೇ ತುಟಿಗೆ ತುಟಿ ಸೇರುವಂತೆ ತಂತಿಯನ್ನು ಚುಚ್ಚಿಕೊಳ್ಳುವ ಮತ್ತೊಂದು ವಿಧದ ಬಾಯಿಬೀಗ ಸೇವೆಯು ಆಚರಣೆಯಲ್ಲಿರುವುದನ್ನು ಕಾಣುತ್ತೇವೆ. ಬಾಹ್ಯದಲ್ಲಿ ಮಿತಭಾಷಿಯನ್ನಾಗಿ ಮಾಡಿ ಆಂತರ್ಯದಲ್ಲಿ ನಿನ್ನ ಸವಿ ಮಂತ್ರವನ್ನು ಪಠಿಸಲು ಅವಕಾಶ ಕಲ್ಪಿಸಿ ಜೀವನಕ್ಕೊಂದು ಅರ್ಥ ಬರುವಂತೆ ಮಾಡು ಎನ್ನುವ ತಮ್ಮ ಮನದಿಚ್ಚೆಯನ್ನು ದೇವರಿಗೆ ಭಕ್ತರು ಈ ಹರಕೆಯ ಮೂಲಕ ಮನವಿಮಾಡಿಕೊಳ್ಳುವಂತೆ ಈ ಸೇವೆ ಕಂಡುಬರುತ್ತದೆ.

**ಬೆತ್ತಲೆ ಸೇವೆ**

ಬುಡಕಟ್ಟು ಭಕ್ತ ಸಮುದಾಯದವರು ದೇವರ ಮೇಲಿಟ್ಟಿರುವ ಭಕ್ತಿ ಪರಾಕಾಷ್ಠತೆಯ ಆಚರಣೆಯಾಗಿ ಗ್ರಾಮೀಣ ದೇವರ ಜಾತ್ರೆಗಳ ಸಮಯದಲ್ಲಿ ಬೆತ್ತಲೆ ಸೇವೆಯ ಆಚರಣೆ ಪ್ರಕಟಗೊಳ್ಳುತ್ತದೆ. ಸಮಷ್ಠಿಗೆ ಒಳಿತಿದರೆ ಬೆತ್ತಲೆ ಸೇವೆ ಮಾಡುವುದಾಗಿ ಹರಕೆ ಹೊತ್ತ ಭಕ್ತರು ತಮ್ಮ ಬೇಡಿಕೆ ಈಡೇರಿದರೆ ಈ ಬಗೆಯ ಹರಕೆ ಮಾಡಿಕೊಳ್ಳುವ ಭಕ್ತರಿಗೇನು ಬುಡಕಟ್ಟು ಸಮಾಜದಲ್ಲಿ ಕೊರತೆಯಿಲ್ಲ. ದೇವರ ಜಾತ್ರೆಯ ದಿನ ಶುಭಗಳಿಗೆಯಲ್ಲಿ ಮೈಮೇಲಿನ ಬಟ್ಟೆಯನ್ನು ಕಳಚಿ ದೇವಾಲಯದ ಪಕ್ಕದಲ್ಲಿರುವ ಹೊಳೆ, ಹಳ್ಳ, ನದಿ ಕೆರೆ ಅಥವಾ ಪುಷ್ಕರಿಣಿಗಳಲ್ಲಿ ಸ್ನಾನ ಮಾಡಿ ನಗ್ನವಾಗಿಯೇ ದೇವಾಲಯದ ಸುತ್ತ ಮೂರು ಸುತ್ತ ಪ್ರದಕ್ಷಿಣೆ ಹಾಕುವ ಸೇವೆ ಇದಾಗಿದೆ. ಈ ಸಮಯದಲ್ಲಿ ಕೊರಳು ಮತ್ತು

ಸೊಂಟಕ್ಕೆ ಕಣಗಿಲೆ ಗಿಡದ ಹೂ ಸುತ್ತಿಕೊಂಡು ಹರಕೆ ತೀರಿಸುವ ಭಕ್ತರೂ ಇದ್ದಾರೆ. "ಸುಳ್ಳಿಗೆ ಹೊದಿಕೆ ಬೇಕು ಆದರೆ ಸತ್ಯಕ್ಕೆ ನಗ್ನತೆಯೆ ಸಾಕು"[೯] ಅಂತೆಯೇ ಅಂತರ್ಯದಲ್ಲಿ ನಗ್ನವಾಗಿ ನಿನ್ನ ಪೂಜಿಸುವಂತೆ ಬಾಹ್ಯದಲ್ಲಿಯು ನಗ್ನವಾಗಿ ಪೂಜಿಸಲು ಬರುವೆ, ನೀ ಕೊಟ್ಟ ಈ ನಶ್ವರದ ಕಾಯ ವ್ಯಾಮೋಹವನ್ನು ಭವ ಬಂಧನಗಳಿಂದ ಬಿಡುಗಡೆಗೊಳಿಸಿ ಆಂತರ್ಯದಲ್ಲಿ ಶಾಶ್ವತವಾಗಿ ನಿಮ್ಮ ಸಂಗಾತಿಯಾಗಿರುವಂತೆ ಮಾಡು ಎಂದು ದೇವರ ಮೇಲಿನ ಭಕ್ತಿಯು ಮನಸ್ಸಿನ ಸಂಕೇತವಾಗಿ ಈ ಸೇವೆ ಕಂಡುಬರುತ್ತದೆ.

**ಪ್ರಾಣಿಬಲಿ**

ಸಾಮಾನ್ಯವಾಗಿ ಬಹುತೇಕ ಗ್ರಾಮೀಣ ದೇವರ ಜಾತ್ರೆಗಳ ಸಮಯದಲ್ಲಿ ಭಕ್ತರು ಹರಕೆ ತೀರಿಸುವ ಒಂದು ಆಚರಣೆಯಾಗಿದ್ದ ಪ್ರಾಣಿಬಲಿ ಕಂಡುಬರುತ್ತದೆ. ಜಾತ್ರೆಯ ದಿನದಂದು ಹರಕೆಯಂತೆ ಕೋಣ, ಕುರಿ, ಮೇಕೆ, ಕೋಳಿ, ಹಂದಿ ಮೊದಲಾದ ಪ್ರಾಣಿಗಳನ್ನು ದೇವರ ಹೆಸರಿನಲ್ಲಿ ಬಲಿಕೊಡಲಾಗುತ್ತದೆ. ಬಲಿಯಾಗುವ ಪ್ರಾಣಿಗಳ ತಲೆಕಡಿಯುವ ಅಧಿಕಾರ ಕೆಲವೆಡೆ ಪರಂಪರಾನುಗತ ಸಾಮಾಜಿಕ ನಿಯಮವನ್ನು ಅನುಸರಿಸಿಕೊಂಡು ಬಂದಿದ್ದು, ಬಲಿ ಪ್ರಾಣಿಯ ತಲೆ ಕಡಿಯುವ ಹಕ್ಕು ಕೆಲವೇ ವ್ಯಕ್ತಿ ಅಥವಾ ಕುಟುಂಬಗಳಿಗಿರುತ್ತವೆ. "ಕೆಲವು ದೇವತೆಗಳಿಗೆ ನರಬಲಿ ನೀಡುತ್ತಿದ್ದುದ್ದೂ ಉಂಟು. ಪಿತೃದೇವತೆಯ ಬಳಿಗೆ ದೂತನನ್ನು ಕಳುಹಿಸುವ ಅಥವಾ ಅದೇ ತಾನೆ ಸತ್ತ ರಾಜನೊಂದಿಗೆ ಇರಲು ತಕ್ಕನಾದ ಸೇವಕನನ್ನು ಪ್ರೇತದ ರೂಪದಲ್ಲಿ ಕಳಿಸಲು ನರಬಲಿಯನ್ನು ನೀಡಲಾಗುತ್ತಿತ್ತು. ಇಂದು ನರಬಲಿಗೆ ಬದಲಿ ವ್ಯವಸ್ಥೆಯಾಗಿ ತೆಂಗಿನಕಾಯಿ ಸಮರ್ಪಣೆ ಬಂದಿದೆ ಎನ್ನುತ್ತಾರೆ. ತೆಂಗಿನಕಾಯಿಗೆ ಮಾನವ ಬುರುಡೆಯ ಹೋಲಿಕೆಯಿರುವುದೇ ಈ ಬದಲಿ ವ್ಯವಸ್ಥೆಗೆ ಕಾರಣವೆನ್ನಲಾಗುತ್ತಿದೆ"[೧೦]

**ಸಿಡಿಯಾಡುವುದು**

ಗ್ರಾಮೀಣ ದೇವರಜಾತ್ರೆಗಳ ಸಮಯದಲ್ಲಿ ಭಕ್ತರು ಹರಕೆ ತೀರಿಸುವ ಸೇವೆಯಾಗಿ ಇದು ಕಂಡುಬರುತ್ತದೆ. ಜಾತ್ರೆ ನಡೆಯುವ ಆಯಾದೇವರಿಗೆ ಬಸವಿ ಬಿಟ್ಟ ದೇವದಾಸಿಯನ್ನು ಇದ್ದಲ್ಲಿ ಅವರ ಮೂಲಕ ಸಿಡಿ ಉತ್ಸವ ಆರಂಭಗೊಳ್ಳುತ್ತದೆ. ಸಿಡಿ ಕಂಬವು ಸುಮಾರು ಮೂವತ್ತು ಅಡಿ ಎತ್ತರವಿದ್ದು, ಅದಕ್ಕೆ ಸುಮಾರು ಹದಿನೈದು ಅಡಿ ಉದ್ದದ ಅಡ್ಡಮರವನ್ನ ಕಟ್ಟಿರುತ್ತಾರೆ. ಈ ಸಿಡಿ ಮರಕ್ಕೆ ಸಿಡಿಯಾಡುವಂತೆ ಹರಕೆ ಹೊತ್ತ ಭಕ್ತರ ಹೊಟ್ಟೆ ಮತ್ತು ಬೆನ್ನಿಗೆ ಸೇರುವಂತೆ ಬಟ್ಟೆಯನ್ನು ಕಟ್ಟಿ ಅವರನ್ನು ಸಿಡಿಗಂಬಕ್ಕೆ ಜೋತು ಬೀಳುವಂತೆ ಕಟ್ಟಿ ಅಡ್ಡಮರವನ್ನು ನಿಧಾನವಾಗಿ ಮೇಲಕ್ಕೆತ್ತಿ ವೃತ್ತಾಕಾರವಾಗಿ ತಿರುಗಿಸುತ್ತಾರೆ. ಸಿಡಿಮರವು ಮೇಲಕ್ಕೆ ಹೋದಂತೆಲ್ಲ ಸಿಡಿಮರಕ್ಕೆ ಕಟ್ಟಿದ ಸಿಡಿಯಾಡುವ ವ್ಯಕ್ತಿಯು ಹಿಡಿದಿರುವ ಬೇವಿನ ಸೊಪ್ಪನ್ನು ಕೈಯಲ್ಲಿ ಅಲ್ಲಾಡಿಸುತ್ತ ಕಾಲುಗಳನ್ನು ತಿರುವುತ್ತ ನಕ್ಷೆಯಂತೆ ಸಿಡಿಮರ ತಿರುಗಿದ ದಿಕ್ಕಿನಲ್ಲಿ ಹಾರಾಡುತ್ತಾರೆ. ಈ ಸಿಡಿ ಹರಕೆ ತೀರಿಸುವ ದೃಶ್ಯವನ್ನು ನೋಡಲು

ಜನಜಾತ್ರೆ ಯಾಗಿ ಸೇರುತ್ತಾರೆ. ಈ ಬಗೆಯ ಆಚರಣೆಯಿಂದ ಸಿಡಿಯಾಡುವ ವ್ಯಕ್ತಿಯ ಮನೋವೈಕಲ್ಯ ಹಾಗೂ ದೈಹಿಕ ಅನಾರೋಗ್ಯದಿಂದ ಗುಣಮುಖರಾಗಿ ಮಾನಸಿಕ ಹಾಗೂ ದೈಹಿಕವಾಗಿ ಸ್ವಸ್ಥರಾಗುತ್ತಾರೆ ಎಂಬ ನಂಬಿಕೆ ಜನರಲ್ಲಿ ಕಂಡುಬರುತ್ತದೆ. ಸಿಡಿಯಲ್ಲಿ ಕೊಕ್ಕಿಸಿಡಿ, ಬೆನ್ನುಸಿಡಿ, ಬಟ್ಟೆಸಿಡಿ, ಗೊಂಬೆಸಿಡಿ ಮುಂತಾದ ವಿಧಗಳಿವೆ.

**ಗಾವುಸಿಗಿತ**

ಗ್ರಾಮೀಣ ಉಗ್ರದೇವತೆಗಳ ಜಾತ್ರೆಯ ಸಂದರ್ಭದಲ್ಲಿ ಈ ಬಗೆಯ ಆಚರಣೆಗಳು ಹೆಚ್ಚಾಗಿ ಕಂಡುಬರುತ್ತವೆ. ಈ ಆಚರಣೆಯು ಆದಿಮಾನವನ ಮೂಲ ಜೀವನ ವಿಧಾನವನ್ನು ತಿಳಿಸಿಕೊಡುವಂತಿದೆ. ಗಾವು ಸಿಗಿಯುವ ಕಾರ್ಯವನ್ನು 'ಪೋತರಾಜ' ವಂಶದವರನ್ನು ಕರೆಯಿಸಿ ನೆರವೇರಿಸಲಾಗುತ್ತದೆ. ಗಾವು ಸಿಗಿಯುವ ವ್ಯಕ್ತಿಯನ್ನು 'ಪೋತರಾಜ' ಎಂದು ಕರೆಯುವರು. ಇವನು ನೋಡಲು ಆದಿಮಾನವನ ಸ್ವರೂಪದವನಂತೆ ಕಂಡುಬರುತ್ತಾನೆ. ಈ ವಿಧಿಯಾಚರಣೆಯ ಸಮಯದಲ್ಲಿ ಇವನ ವೇಷಭೂಷಣಗಳು ಆದಿಮಾನವನ ಉಡುಗೆ ತೊಡುಗೆಗಳಂತೆ ಕಂಡು ಬರುತ್ತದೆ. ಪೋತರಾಜ ಜಾತ್ರೆಯಲ್ಲಿ ಗಾವು ಸಿಗಿಯುವಾಗ ಗ್ರಾಮದ ಮುಖಂಡರ ಮತ್ತು ಭಕ್ತರ ಸಮ್ಮುಖದಲ್ಲಿ ಅವು ಒಪ್ಪಿಗೆಯನ್ನು ಪಡೆದ ಗಾವು ಸಿಗಿಯಲು ಮುಂದಾಗುತ್ತಾನೆ. ಸಾಮಾನ್ಯವಾಗಿ ಗಾವು ಸಿಗಿಯುವ ಕಾರ್ಯಕ್ಕೆ ಕುರಿ ಅಥವಾ ಮೇಕೆಯ ಮರಿಯನ್ನು ಬಳಸಲಾಗುತ್ತದೆ.

ಪೋತರಾಜ ಆವೇಶದಿಂದ ಎಲ್ಲರ ಸಮಕ್ಷಮದಲ್ಲಿ ಕುರಿ ಅಥವಾ ಮೇಕೆ ಮರಿಯನ್ನು ಹಿಡಿದು, ಅದನ್ನು ಚಾಟಿಯಿಂದ ಹೊಡೆದು ಘಾಸಿಗೊಳಿಸಿ, ಅದರ ಕಿವಿಯಲ್ಲಿ ಗಾಳೀ ಊದಿ ಹೃದಯಾಘಾತವಾಗುವ ಹಾಗೆ ಮಾಡಿ ಮೂರ್ಛೆ ಹೋಗುವಂತೆ ಮಾಡುತ್ತಾನೆ. ನಂತರ ಅದರ ಕುತ್ತಿಗೆಗೆ ತನ್ನ ಬಾಯಿಯನ್ನಾಕಿ ಕಚ್ಚಿ ಅದರ ರಕ್ತವನ್ನು ಹೀರುವುದಕ್ಕೆ ಗಾವು ಸಿಗಿತ ಎನ್ನುವರು. ಈ ಆಚರಣೆಯು ಕ್ರೌರ್ಯ ಮತ್ತು ಭೀಭತ್ಸತೆಯಿಂದ ಕೂಡಿದ್ದು ಮಾನವನಲ್ಲಿ ಮನೆಮಾಡಿರುವ ಮನುಷ್ಯ ರೂಪ ಮೃಗೀಯವರ್ತನೆಯ ಚಿತ್ರಣವನ್ನು ಪುನರಭಿನಯಿಸಿ ತೋರುವಂತಿರುತ್ತದೆ. ಹಿಂದೆ ಗ್ರಾಮೀಣ ಪ್ರದೇಶಗಳು ಭೀಕರ ಬರಗಾಲ ಮತ್ತು ಕ್ಷಾಮ ಢಾಮರಗಳಿಂದ ಹಾಗೂ ವಾಸಿಯಾಗದ ಮಾರಣಾಂತಿಕ ಮಾರಿರೋಗಗಳಿಗೆ ತುತ್ತಾಗಿ ತನ್ನವರನ್ನೆಲ್ಲ ಕಳೆದುಕೊಳ್ಳುವ ಪರಿಸ್ಥಿತಿ ಎದುರಾಗುವ ಸಮಯದಲ್ಲಿ ಇದಕ್ಕೆಲ್ಲ ದೇವರು ನಮ್ಮ ಮೇಲೆ ಉಗ್ರ ಸ್ವರೂಪ ತಾಳಿದ್ದಾನೆ. ಇನ್ನು ನಮಗೆ ಉಳಿಗಾಲವಿಲ್ಲ ಎಂದು ಹೆದರಿ ಉಗ್ರಸ್ವರೂಪಿ ದೇವರನ್ನು ಶಾಂತಗೊಳಿಸಿ ಸಹಜಸ್ಥಿತಿಗೆ ತರಲು ಪ್ರಾಣಿಗಳ ರಕ್ತತರ್ಪಣದಿಂದ ದೇವರನ್ನು ಸಂತೃಪ್ತಿ ಪಡಿಸುವ ಮಾನವನ ಸಹಜ ಭಯದ ಉದ್ದೇಶದಿಂದ ಈ ಆಚರಣೆ ಜಾರಿಗೆ ಬಂದಂತೆ ಕಂಡುಬರುತ್ತದೆ.

## ೫.೭ ಕರಗಜಾತ್ರೆಗಳು.

ಕರಗ ಜಾತ್ರೆಗಳು ದಕ್ಷಿಣ ಕರ್ನಾಟಕದಲ್ಲಿ ಹೆಚ್ಚಾಗಿ ಆಚರಿಸಲ್ಪಡುತ್ತವೆ. ಕರಗ ಜಾತ್ರೆಗಳು ಮೂಲತಃ ಸ್ತ್ರೀ ಪ್ರಧಾನವಾದವುಗಳು. ಸ್ತ್ರೀ ಪ್ರಧಾನತೆ ಪ್ರಾಚೀನ ಸಮಾಜಗಳಲ್ಲಿ ದಟ್ಟವಾಗಿ ವಿಸ್ತರಿಸಿತ್ತು ಎಂಬುದನ್ನು ಈ ಜಾತ್ರೆಗಳು ಮನವರಿಕೆ ಮಾಡಿಕೊಡುತ್ತೆ. ಕರಗ ಜಾತ್ರೆಗಳು ಮಹಾಭಾರತದ ದ್ರೌಪದಿಯ ಪೌರಾಣಿಕತೆ ಹಿನ್ನೆಲೆಯಾಗಿ ಸುತ್ತಿಕೊಂಡಿವೆ.

'ಕರಗ' ಎನ್ನುವುದು ಸಾಂಪ್ರದಾಯಿಕ ಆಚರಣೆಯಾಗಿದೆ. ಮಹಾಭಾರತದಲ್ಲಿ ಪಾಂಡವರ ವನವಾಸದ ಸಂದರ್ಭದಲ್ಲಿ ಬರುವ ಸ್ವರ್ಗಾರೋಹಣ ಭಾಗದಲ್ಲಿ ಇದರ ಉಲ್ಲೇಖವಿದೆ. ವನವಾಸದಲ್ಲಿ ಪತಿಯನ್ನು ಹಿಂಬಾಲಿಸುತ್ತಿದ್ದ ದ್ರೌಪದಿಯು ಮಾರ್ಗ ಮಧ್ಯದಲ್ಲಿ ಪ್ರಯಾಣದ ಆಯಾಸದಿಂದ ಹಿಂದುಳಿದಳೆಂದೂ, ಆಗ ತಿಮಿರಾಸುರನೆಂಬ ರಾಕ್ಷಸನು ದ್ರೌಪದಿಯ ಸೌಂದರ್ಯಕ್ಕೆ ಮನಸೋತು ಅವಳಲ್ಲಿ ಅನುರಕ್ತನಾಗಿ ಪೀಡಿಸಿದ. ರಾಕ್ಷಸನ ಉಪಟಳವನ್ನು ತಡೆಯಲಾರದೆ ಪತಿವ್ರತೆಯಾದ ದ್ರೌಪದಿಯು ಅವನನ್ನು ಸಂಹಾರ ಮಾಡಲು ಕೋಪಿಷ್ಟಳಾಗಿ ರೌದ್ರ ರೂಪತಾಳಿ ನಿಗ್ರಹಿಸಿದಳೆಂದೂ, ಆ ಸಮಯದಲ್ಲಿ ದ್ರೌಪದಿಯು ತಲೆಯ ಮೇಲೆ ಕುಂಭವನ್ನು ಹೊತಿದ್ದಳೆಂದೂ ಇದರ ಸಂಕೇತವಾಗಿ 'ಕರಗ' ಆಚರಣೆ ಜಾರಿಗೆ ಬಂದಿದೆಯೆಂದು ನಂಬಲಾಗಿದೆ.

ಈ ಕಾರಣಕ್ಕಾಗಿ 'ಕರಗ ಜಾತ್ರೆಗಳು' ಮತಾಚರಣೆಯಾಗಿ, ಜಾನಪದ ಕಲೆಯಾಗಿ ನಮ್ಮ ನೆಲದಲ್ಲಿ, ನಾಡಲ್ಲಿ ಹಾಸು ಹೊಕ್ಕಾಗಿವೆ. 'ಕರಗ' ಎಂಬ ಪದಕ್ಕೆ ಕಲಶ ಮಣ್ಣಿನಿಂದ ಮಾಡಿದ ಮಡಕೆ ಎಂಬ ಸಾಮಾನ್ಯ ಅರ್ಥವಿದೆ. ಈ ಜಾತ್ರೆಯಲ್ಲಿ ಮಹಿಳೆಯರು ಕಲಶವನ್ನು ಹೊತ್ತು ಕುಣಿಯುವುದು ಜಾತ್ರೆಯ ಆಕರ್ಷಣೆಯಾಗಿದೆ. ಈ ಕಲಶವನ್ನೇ ಕರಗ ಎಂದು ಕರೆಯಲಾಗುತ್ತದೆ. ಕರಗಹೊತ್ತು ಕುಣಿಯುವುದೆಂದರೆ ಕಲಶವನ್ನು ಹೊತ್ತು ಕುಣಿಯುವುದೇ ಕರೆಯಲಾಗುತ್ತದೆ. "ಕರಗಹೊತ್ತು ಕುಣಿಯುವುದೆಂದರೆ ಕಲಶವನ್ನು ಹೊತ್ತು ಕುಣಿಯುವುದೇ ಆಗಿದೆ"[೧೧] ಎಂಬ ಕೆ.ಎಸ್.ರಾಮಮೂರ್ತಿ ಅವರ ಮಾತು ಇಲ್ಲಿ ಸ್ಪಷ್ಟವೆನಿಸುತ್ತದೆ. ಅಂದು ಮಣ್ಣಿನಲ್ಲಿ ಮಾಡಿದ ಕರಗ (ಮಡಕೆ) ಇಂದಿನ ಲೋಹದಲ್ಲಿ ಮಾಡಿದ ಕಲಶವಾಗಿ ಮಾರ್ಪಾಟಾಗಿದೆ. ಕರಗ ಜಾತ್ರೆಗಳು ಬುಡಕಟ್ಟು ಜನರ ಶಕ್ತಿದೇವತೆಯ ವಿಶಿಷ್ಟ ರೂಪಗಳಾಗಿ ಆಚರಣೆಯಲ್ಲಿವೆ. ಸ್ತ್ರೀ ಶಕ್ತಿಯು ಒಲಿದರೆನಾರಿ ಮುನಿದರೆ ಮಾರಿ ಎಂದು ನಂಬಿರುವ ಬುಡಕಟ್ಟು ಸಮುದಾಯದವರು ದೇವಿಯ ಕೆಂಗಣ್ಣಿಗೆ ಗುರಿಯಾಗಿ ಕಡುಕಷ್ಟ ಅನುಭವಿಸುವುದಕ್ಕಿಂತ ಆಕೆಯ ಪ್ರೀತಿಗೆ ಭಕ್ತಿಗೆ ಪಾತ್ರರಾಗಿ ಇಷ್ಟಾರ್ಥ ಸಿದ್ಧಿ ಪಡೆಯುವ ಉದ್ದೇಶದಿಂದ ಈ ಜಾತ್ರೆಗಳು ಆಚರಣೆಗೊಳ್ಳುತ್ತಿವೆ.

ಭಾರತದ ಬುಡಕಟ್ಟು ಜನಾಂಗಗಳಲ್ಲಿ ತಿಗಳ ಜನಾಂಗವು ಒಂದು. ಈ ಬುಡಕಟ್ಟು ಜನಾಂಗದವರ ಕುಲದೇವರು ಸ್ತ್ರೀ ದೇವತೆ ದ್ರೌಪದಿಯಾಗಿದ್ದು, ಇವಳನ್ನು ಶಕ್ತಿದೇವತೆ ಯನ್ನಾಗಿಸಿ ಆರಾಧಿಸುವ ವಿಶಿಷ್ಟ ಸನ್ನಿವೇಶವೇ ಕರಗ ಜಾತ್ರೆಯಾಗಿ ಒಡಮೂಡಿದೆ. "ಕರಗದ ಅಗ್ರಭಾಗದಲ್ಲಿ

ವಿಷ್ಣುವೂ, ಕಂಠದಲ್ಲಿ ಶಿವನೂ, ತಳಭಾಗದಲ್ಲಿ ಬ್ರಹ್ಮನೂ, ಮಧ್ಯಭಾಗದಲ್ಲಿ ಮಾತೃಗಣಗಳೂ ವಾಸಮಾಡುತ್ತಾರೆಂಬ ನಂಬಿಕೆ ಇರುವುದರಿಂದ ಜನರು ಭಕ್ತಿಭಾವದಿಂದ ನಡೆದುಕೊಳ್ಳುತ್ತಾರೆ''[೧೨] ಎಂಬ ಸಿ.ಎಂ.ಗೋವಿಂದರೆಡ್ಡಿಯವರ ಮಾತು ಬುಡಕಟ್ಟು ಸಮುದಾಯದ ಜನರು ಪ್ರತಿ ವಸ್ತುವಿನಲ್ಲೂ ದೇವರಿದ್ದಾನೆ ಎಂದು ನಂಬಿದವರಾಗಿದ್ದಾರೆ ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಕರಗ ಜಾತ್ರೆಗಳು ಅಪ್ಪಟ ಸ್ತ್ರೀ ದೇವತೆಯ ದೇಸೀಯ ಉತ್ಸವ. ಹಿಂದೆ ಈ ಜಾತ್ರೆಗಳ ಆಚರಣೆಗಳಲ್ಲಿ ಸ್ತ್ರೀಯರ ಭಾಗವಹಿಸುವಿಕೆಯೇ ಜಾತ್ರೆಗೆ ಮೆರುಗು ತಂದುಕೊಡುತ್ತಿತ್ತು. ಆದರೆ ಇಂದು ಇಂತಹ ಆಚರಣೆಗಳ ಕ್ರಿಯಾ ವಿಧಿ ವಿಧಾನಗಳಲ್ಲಿ ಸ್ತ್ರೀ ಪ್ರಾತಿನಿಧ್ಯ ಗಣನೀಯವಾಗಿ ಕಡಿಮೆಯಾಗಿದೆ. ರಾತ್ರಿಪೂರ ಒಬ್ಬ ಹೆಣ್ಣುಮಗಳು ಕರಗಹೊತ್ತು ಜಾತ್ರೆಗಳಲ್ಲಿ ಕುಣಿಯುವುದು, ಊರಾಡುವುದು ತುಂಬಾ ತ್ರಾಸದಾಯಕ ಎಂಬುದು ಇದಕ್ಕೆ ಕಾರಣವಿರಬಹುದು ಅಥವಾ ಮಾತೃ ಪ್ರಧಾನ್ಯತೆಯಿಂದ ಕೂಡಿದ್ದ ಸಮಾಜವು ಪಿತೃಪ್ರಧಾನ್ಯತೆಯನ್ನು ಅಳವಡಿಸಿಕೊಂಡು ಸಾಮಾಜಿಕ ವ್ಯವಸ್ಥೆ ರೂಪುಗೊಂಡದ್ದು ಕಾರಣವಾಗಿರಬಹುದು. ಎರಡೂ ಅಂಶಗಳು ಕಾರಣವಾಗಿರುವ ಸಾಧ್ಯತೆಯನ್ನೂ ತಳ್ಳಿಹಾಕುವಂತಿಲ್ಲ.

ಪ್ರಸ್ತುತ ದಿನಗಳಲ್ಲಿ ಪುರುಷರು ಸ್ತ್ರೀಯರಂತೆ ಸೀರೆ, ರವಿಕೆ, ಹೂವು, ಕುಂಕುಮ, ಬಳೆ. ಓಲೆ ಮೊದಲಾದುವುಗಳಿಂದ ಅಲಂಕೃತರಾಗಿ ಕರಗಹೊರುತ್ತಾರೆ. ''ಪುರುಷ ಸ್ತ್ರೀ ವೇಷ ಧರಿಸಿ ಕುಣಿಯುವುದು ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯ ಸಾಂಸ್ಕೃತಿಕ ನೆನಪು ಗಳನ್ನು ಆಚರಣೆಗಳ ಮೂಲಕ ವ್ಯಕ್ತಪಡಿಸಲಾಗಿದೆ''[೧೩] ಎಂಬ ಡಾ.ಎಂ.ಸುಮಿತ್ರ ರವರ ಮಾತು ಸತ್ಯವೆನಿಸುತ್ತದೆ. ಕರಗ ಹೊತ್ತು ಕುಣಿಯುವ ಈ ಕುಣಿತವನ್ನು ಗಂಡುಕುಣಿತವೆಂದೇ ಕರೆಯಲಾಗಿದೆ. ಇದು ಗ್ರಾಮೀಣ ಕಲೆಯಾಗಿ ಭಾರತದಾದ್ಯಂತ ಹೆಸರಾಗಿದೆ. ಕರಗ ಜಾತ್ರೆಗಳು ನೆರೆ ರಾಜ್ಯವಾದ ತಮಿಳುನಾಡಿನಲ್ಲಿ ಆಚರಣೆಯಲ್ಲಿದ್ದು ಕರಗಹೊತ್ತವರ ಕುಣಿತವನ್ನು ಅಲ್ಲಿ ಕರಗಾಟಂ ಎಂದು ಕರೆಯುವರು.

ಕರಗ ಜಾತ್ರೆಗಳಲ್ಲಿ ತಿಗಳ ಜನಾಂಗದವರ ಮಾರ್ಗದರ್ಶನದಂತೆ ಜಾತ್ರೆಯ ಎಲ್ಲಾ ಆಚರಣೆಗಳು ನೆರವೇರುತ್ತದೆ. ಕರಗ ಆಚರಣೆಗಳು ಮೂಲತಃ ತಿಗಳ ಜನಾಂಗಕ್ಕೆ ಸೇರಿದಂತವು ಎಂಬ ನಿರ್ಧಾರಕ್ಕೆ ಬರಲಾಗಿದೆ. ಆದರೂ ಈ ಜಾತ್ರೆಗಳನ್ನು ಎಲ್ಲಾ ಜಾತಿ ಜನಾಂಗದವರು ಸೇರಿ ಆಚರಿಸುವುದು ಕಂಡುಬರುತ್ತದೆ. ಈ ಜಾತ್ರೆಗಳ ಪ್ರಮುಖ ಆಚರಣೆಗಳೆಂದರೆ ಕಂಕಣ ಕಟ್ಟುವುದು. ಸಾರುವುದು, ದಾಸೋಹ ಸೇವೆ, ಹಸಿಕರಗ, ಹೂವಿನ ಕರಗ, ದ್ರೌಪದಿ ಕಲ್ಯಾಣೋತ್ಸವ ಕೆಂಡ ತುಳಿಯುವುದು, ಗಾವುಸಿಗಿತ, ಪುರಾಣ ಪಠಣ, ವಸಂತೋತ್ಸವ , ದೀಪದಾರತಿ, ಕಂಕಣ ವಿಸರ್ಜನೆ ಮುಂತಾದ ಆಚರಣೆಗಳು ಪ್ರಧಾನವಾಗಿ ಕಂಡುಬರುತ್ತವೆ. ಈ ರೀತಿಯ ಕರಗೋತ್ಸವವು ಮಡಿಕೇರಿಯ ಶಕ್ತಿ ದೇವತೆಗಳ ಜಾತ್ರೆಗಳಲ್ಲಿ ಕಂಡುಬರುತ್ತದೆ.

**ಕಂಕಣ ಕಟ್ಟುವುದು**

ಕರಗ ಜಾತ್ರೆಗಳಲ್ಲಿ ಕಂಕಣ ಕಟ್ಟುವ ವಿಧಿ ಆಚರಣೆಯ ಮೂಲಕ ಜಾತ್ರೆಯ ಕಾರ್ಯ ಕಲಾಪಗಳಿಗೆ ಉದ್ಯುಕ್ತವಾಗಿ ಚಾಲನೆ ನೀಡಲಾಗುತ್ತದೆ. ಕಂಕಣ ಕಟ್ಟುವುದು ಎಂದರೆ "ಸಂಕಲ್ಪಮಾಡು"[೧೪] ಎಂಬ ಅರ್ಥವಿದೆ. ಅಂದರೆ ಕಂಕಣ ಕಟ್ಟುವುದರೊಂದಿಗೆ ಜಾತ್ರೆಯ ವಿಧಿ ಆಚರಣೆಗಳು ನಿರ್ಧಾರವಾಗುತ್ತವೆ. ಜಾತ್ರೆಯ ಕುರಿತಾಗಿ ಚರ್ಚಿಸಲು ಊರಿನ ಪ್ರಮುಖರನ್ನು ವಾದ್ಯಗಳೊಂದಿಗೆ ದೇವಾಲಯಕ್ಕೆ ಸ್ವಾಗತಿಸಲಾಗುತ್ತದೆ. ಗೋಮೂತ್ರಗಳನ್ನು ಹಾಕಿ ದೇವಾಲಯವನ್ನು ಸ್ವಚ್ಚಗೊಳಿಸಿ, ಕುಲಪುರೋಹಿತರಿಂದ ಮಂತ್ರಾಭಿಷೇಕಗಳೊಂದಿಗೆ ದೇವರನ್ನು ಪೂಜಿಸಿ, ಕಂಕಣ ಕಟ್ಟಲು ಧ್ವಜಸ್ತಂಭವನ್ನು ಸಿದ್ಧಗೊಳಿಸುತ್ತಾರೆ. ಈ ಧ್ವಜ ಸ್ತಂಭವನ್ನು ತಂದುನೆಡುವ ಕಾರ್ಯ ನಿರ್ದಿಷ್ಟ ಮನೆತನದವರಿಗೆ ಮಾತ್ರ ಸೇರಿದ್ದು, ಪರಂಪರಾನುಗತವಾಗಿ ನಡೆದು ಬಂದಿದೆ. ಇಂತಹ ಮನೆತನದವರು ತಂದು ಸಿದ್ದಗೊಳಿಸಿದ ಧ್ವಜಸ್ತಂಭಕ್ಕೆ ಪುರೋಹಿತರನ್ನು ಅನುಸರಿಸಿ ಪಟ್ಟದ ಪೂಜಾರಿಗಳು, ಗೌಡರು, ಯಜಮಾನರು, ಕರಗ ಹೊರುವ ವ್ಯಕ್ತಿಗಳು ಹೀಗೆ ಎಲ್ಲರೂ ಧ್ವಜಸ್ತಂಭಕ್ಕೆ ಕಂಕಣಕಟ್ಟಿ, ಪರಸ್ಪರರು ಕಂಕಣ ಕಟ್ಟಿಕೊಳ್ಳುತ್ತಾರೆ. ಬಳಿಕ ಯಾವ ದಿನದಂದು ಆಚರಣೆಗಳು ನಡೆಯಬೇಕೆಂಬುದನ್ನು ಎಲ್ಲರ ಒಪ್ಪಿಗೆಯ ಮೇರೆಗೆ ಗೊತ್ತುಪಡಿಸಿ, ಜಾತ್ರೆಯ ಕಾರ್ಯಕ್ರಮದ ಪಟ್ಟಿಯನ್ನು ಸಾರಲು ಗೊತ್ತುಪಡಿಸಿದ ವ್ಯಕ್ತಿಗಳಿಗೆ ತಿಳಿಸುತ್ತಾರೆ.

**ಸಾರುವುದು**

ಕಂಕಣ ಕಟ್ಟಿದ ದಿನ ನಿರ್ಧರಿಸಿದ ಜಾತ್ರೆಯ ಆಚರಣೆಗಳ ಕುರಿತಾಗಿ ಊರಿನ ಜನಸಾಮಾನ್ಯರಿಗೆ ಮತ್ತು ಜಾತ್ರೆಯ ಆಚರಣೆಗೆ ನೇರವಾಗಿ ಸಂಬಂಧ ಹೊಂದಿದ ಹೊರಪ್ರದೇಶಗಳ ಭಕ್ತಸಮೂಹಕ್ಕೆ ಸುದ್ದಿ ಮುಟ್ಟಿಸುವುದೇ ಸಾರುವುದು. ಸಾರುವುದು ಎಂಬ ಪದಕ್ಕೆ ತಿಳಿಯಪಡಿಸು ಎಂಬ ಅರ್ಥವೂ ಇದೆ. ಇದಕ್ಕೆ ಸಾಟಿಸುವುದು , ಸಾರು, ಸಾಟು, ಡಂಗೂರ ಹೊಡೆಯುವುದು ಎಂದೂ ಕರೆಯುತ್ತಾರೆ. ಜಾತ್ರೆಯ ಕಾರ್ಯಗಳ ಕುರಿತಾಗಿ ಸಂಬಂಧಪಟ್ಟ ಎಲ್ಲಾ ಗ್ರಾಮದ ಜನರಿಗೆ ಮಾಹಿತಿ ತಿಳಿಸುವ ಕಾರ್ಯಗೊತ್ತುಪಡಿಸಿದ ವ್ಯಕ್ತಿ ಅಥವಾ ಮನೆತನದವರಿಗೆ ಮಾತ್ರ ಸೇರಿರುತ್ತದೆ.

**ದಾಸೋಹ ಸೇವೆ**

ಕರಗ ಜಾತ್ರೆಗಳಲ್ಲಿ ತಿಗಳ ಬುಡಕಟ್ಟು ಜನಾಂಗದವರು ಅಧ್ಯಾತ್ಮಿಕ ಜ್ಞಾನದ ಸೇವೆಯ ಜೊತೆಗೆ ಮಾನವ ಸಹಜ ಹಸಿವನ್ನು ನೀಗಿಸಲು ದಾಸೋಹ ಸೇವೆಯನ್ನು ಕೈಗೊಳ್ಳುತ್ತಾರೆ. ಸಾಮಾನ್ಯವಾಗಿ ಜಾತ್ರಯ ಸಮಯದಲ್ಲಿ ಸಾಮರಸ್ಯದ ಸಂಕೇತವಾಗಿ ಈ ಆಚರಣೆ ಜಾರಿಯಲ್ಲಿದೆ. ಈ ಸೇವೆಯನ್ನು ಬರಿ ತಿಗಳ ಜನಾಂಗದ ಮಹಿಳೆಯರು ಸೇರಿ ನೆರವೇರಿಸುವುದು ವಿಶೇಷ. ಇದು ಜಾತ್ರೆಯ ಆಚರಣೆಯಲ್ಲಿ ಮಹಿಳೆಯರಿಗೆ ನೀಡಿರುವ ಸ್ವಾತಂತ್ರ್ಯದ ಸಂಕೇತ ವಾಗಿ ಕಂಡುಬರುತ್ತದೆ. ಇವರು ದಾಸೋಹದ ದಿನದಂದು ಶುಚಿಗೊಂಡು ಮಡಿಬಟ್ಟೆಗಳನ್ನು ಉಟ್ಟು ದಾಸೋಹ ಕಾರ್ಯವನ್ನು ನೆರವೇರಿಸಿಕೊಡುತ್ತಾರೆ. ಈ ಸೇವೆಯನ್ನು ತಮಿಳುನಾಡಿನಲ್ಲಿ ಪೊಂಗಲ್ ಸೇವೆ ಎಂದು ಕರೆಯುತ್ತಾರೆ.

ಅಂದಿನ ರಾತ್ರಿ ಮಹಿಳೆಯರು ಮಹಾಭಾರತದಲ್ಲಿ ಬರುವ ಆದಿಶಕ್ತಿಯಾದ ದ್ರೌಪದಿ ಹರಿಕಥೆಯ ಕಾರ್ಯ ಕ್ರಮವನ್ನು ನಡೆಸಿಕೊಟ್ಟು ಬೆಳಗಿನ ಜಾವ ಮಹಾಮಂಗಳಾರತಿಯೊಂದಿಗೆ ತಮ್ಮ ಮನೆಗಳಿಗೆ ತೆರಳುತ್ತಾರೆ.

**ಹಸಿಕರಗ**

ಕರಗಜಾತ್ರೆಯ ಸಮಯದಲ್ಲಿ ಆಚರಿಸುವ ಕರಗದ ವಿಧಗಳಲ್ಲಿ ಹಸಿಕರಗವು ಒಂದು. ಈ ಕರಗವು ಹೂವಿನ ಕರಗದಷ್ಟೇ ಜನ ಮನ್ನಣೆಗಳಿಸಿದೆ. ಇದನ್ನು ಜಾತ್ರೆ ಆರಂಭವಾದ ಮೂರು, ಐದು, ಏಳನೇ ದಿನಗಳಂದು ಆಚರಿಸುವುದು ರೂಢಿಯಲ್ಲಿದೆ. ಹಸಿಕರಗದ ಆಚರಣೆಯ ದಿನವನ್ನು ಭಕ್ತಾದಿಗಳು ಬಂಧು ಬಾಂಧವರೊಡಗೂಡಿ ಸಂಭ್ರಮದಿಂದ ಆಚರಿಸು ತ್ತಾರೆ. ಸಮಾಜದ ಎಲ್ಲಾ ಜನವರ್ಗದವರಿಗೂ ಈ ದಿನ ಪುಣ್ಯದ ದಿನವಾಗಿದೆ ಎಂಬ ಭಾವನೆ ಜನರ ಮನಸ್ಸಿನಲ್ಲಿದೆ. ಹಸಿಕರಗವನ್ನು ಅತ್ಯಂತ ಕಟ್ಟುನಿಟಾಗಿ ಶ್ರದ್ಧಾಭಕ್ತಿಯಿಂದ, ಸಂಪ್ರದಾಯಬದ್ಧವಾಗಿ ತಯಾರಿಸಿ ಕಾರ್ಯ ನೆರವೇರಿಸಬೇಕಗುತ್ತದೆ. ಈ ಆಚರೆಣೆಗೆ ಕುಂಬಾರನು ಹಸಿಮಣ್ಣಿನಿಂದ ಶಾಸ್ತ್ರೋಕ್ತವಾಗಿ ಕುಂಭವನ್ನು ತಯಾರಿಸುತ್ತಾರೆ. ಈ ಕುಂಭದ ಮೇಲೆ ವಿವಿಧ ಬಣ್ಣಗಳಿಂದ ಕಲಾಕೃತಿಗಳನ್ನು ರಚಿಸುತ್ತಾರೆ. ಇದು ಕರಗದ ಮೂಲಾಕೃತಿ ಯಾಗಿರುತ್ತದೆ. ''ಕರಗದ ಮೂಲಾಕೃತಿಯನ್ನು ಹಸಿಮಣ್ಣಿನಿಂದ ತಯಾರಿಸುವುದರಿಂದ ಇದನ್ನು ಹಸಿಕರಗ''[೧೫] ಎಂದು ಕರೆಯುತ್ತಾರೆ. ಹಸಿಕರಗವನ್ನು ತಯಾರಿಸಲು ಜೇಡಿಮಣ್ಣನ್ನು ಬಳಸಲಾಗುತ್ತದೆ.

ಜೇಡಿಮಣ್ಣಿನ ಸಹಾಯದಿಂದ ತಯಾರಿಸಿದ ''ಹಸಿಕರಗವನ್ನು ಕೂರಿಸುವೆಡೆ ಮಂಡಲ ವೊಂದು (ಹಸೆ) ಇರುವುದರಿಂದ ಹಸೆಕರಗ ಎಂದು ಕರೆದಿರಬಹುದು ಎಂಬ ಅಬಿಪ್ರಾಯವಿದೆ.''[೧೬] ಕರಗ ಹೊರುವ ವ್ಯಕ್ತಿ ದೇವಾಲಯದ ಸುತ್ತಮುತ್ತ ಇರುವ ನದಿ, ಹಳ್ಳ,ತೊರೆ, ಕೆರೆ ಇಲ್ಲವೆ ಪುಷ್ಕರಣಿಗಳಲ್ಲಿ ಮಿಂದು ಅದಕ್ಕೆ ಪ್ರದಕ್ಷಿಣೆ ಹಾಕಿ ಪೂಜಿಸಿ ಕರಗ ಹೊರಲು ಮುಂದಾಗುತ್ತಾರೆ. ಅನಂತರ ಬಾಳೆ ಎಲೆಯ ಮೇಲೆ ಹಸಿ ಕರಗವನ್ನು ಇಟ್ಟು ಅದನ್ನು ಹೂಗಳಿಂದ ಸಿಂಗರಿಸಿ ನೀರಿನ ಮೇಲೆ ತೇಲಿಬಿಡಲಾಗುತ್ತದೆ. ನೀರಿನ ಮೇಲೆ ತೇಲುತ್ತಿರುವ ಕರಗವನ್ನು ತಲೆಯಮೇಲೆ ಹೊತ್ತುಕೊಂಡು ದೇವಾಲಯಕ್ಕೆ ಕರಗ ನೃತ್ಯ ಮಾಡುತ್ತ ಕರೆತರಲಾಗುತ್ತದೆ. ದೇವಾಲಯದಲ್ಲಿ ಹಸಿಕರಗಕ್ಕೆ ಪೂಜೆ ಸಲ್ಲಿಸಿ ಭಕ್ತರು ತಮ್ಮ ಹರಕೆಗಳನ್ನು ತೀರಿಸುತ್ತಾರೆ. ನಂತರ ಹಸಿಕರಗವನ್ನು ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮೂಲಕ ತರಲಾಗುತ್ತದೆ. ರಾತ್ರಿಪೂರ ಕರಗ ನೃತ್ಯದೊಂದಿಗೆ ಮೆರವಣಿಗೆ ಕಾರ್ಯ ನಡೆಯುತ್ತದೆ. '':ಕರಗ ಜಾತ್ರೆ ನಡೆಯುವ ಎಲ್ಲೆಡೆಯು ಇದೊಂದು ಅದ್ಬುತ ರಮಣೀಯ ದೃಶ್ಯವಾಗಿರುತ್ತದೆ''[೧೭] ಅಂತಿಮವಾಗಿ ಮೆರವಣಿಗೆ ಬೆಳಗಿನ ಜಾವ ದೇವಾಲಯಕ್ಕೆ ಹಿಂತಿರುಗುತ್ತದೆ. ನಂತರ ಹಸಿಕರಗವನ್ನು ದೇವಾಲಯದ ಗರ್ಭಗುಡಿಯಲ್ಲಿ ಇಡಲಾಗುತ್ತದೆ. ಇದರೊಂದಿಗೆ ಹಸಿಕರಗ ಆಚರಣೆ ಮುಕ್ತಾಯವಾಗುತ್ತದೆ.

**ಹೂವಿನ ಕರಗ**

ಹೂವಿನಕರಗವು ಕರಗ ಜಾತ್ರೆಯ ಕೇಂದ್ರ ಬಿಂದು. ಈ ಆಚರಣೆಯನ್ನು ಹುಣ್ಣಿಮೆಯ ದಿನದಂದು ಆಚರಿಸಲಾಗುತ್ತದೆ. ಇದೇ ಹೂವಿನ ಕರಗದ ಪ್ರಮುಖ ವಿಶೇಷತೆ ಆಗಿದೆ. ಕರಗದಾರಿಯುಮಡಿಯುಟ್ಟು ಸ್ತ್ರೀ ವೇಷಧರಿಸಿ ಕುಲಪುರೋಹಿತರಿಂದ ಕರಗವನ್ನು ಪಡೆದು ತಲೆಯ ಮೇಲೆ ಹೊತ್ತು ಸಾಗುತ್ತಾನೆ. ಈ ಕರಗದ ಮೇಲೆ ಕಲಶ. ಛತ್ರಿ, ಚಾಮರಗಳನ್ನು ಇಡಲಾಗುತ್ತದೆ. ಕರಗ ಹೊರುವ ವ್ಯಕ್ತಿ ಕೈಯಲ್ಲಿ ಬೆತ್ತ ಬಾಕುಗಳನ್ನು ಹಿಡಿದು ಗುಡಿಯಿಂದ ಹೊರ ನಡೆಯುತ್ತಾನೆ. ಈ ಸಮಯದಲ್ಲಿ ವಾದ್ಯಗಳ ಸದ್ದು ಸುತ್ತಲಿನ ಸಮಾಜವನ್ನು ಆವರಿಸುತ್ತದೆ. ಇದು ಹೂವಿನ ಕರಗ ಮೆರವಣಿಗೆ ಹೊರಟಿತು ಎಂಬುದರ ಸಂಕೇತವಾಗಿದೆ. ಪೂರ್ವಭಾವಿಯಾಗಿ ನಿರ್ಧರಿಸಲಾದ ಗ್ರಾಮದ ಪ್ರಮುಖ ಬೀದಿಗಳಲ್ಲಿ ಹೂವಿನ ಕರಗವನ್ನು ಮೆರವಣಿಗೆಗೆ ಕರೆತರಲಾಗುತ್ತದೆ. ವೃತ್ತಿನಿರತ ಕರಗಕಲಾವಿದರು ಪ್ರಮುಖ ಸ್ಥಳಗಳಲ್ಲಿ ನರ್ತಿಸುವ ಮೂಲಕ ನೆರೆದ ಭಕ್ತ ಸಮುದಾಯವನ್ನು ಮನರಂಜಿಸುತ್ತಾರೆ. ಈ ದೃಶ್ಯವನ್ನು ನೋಡಲು ಜನರು ಅಪಾರ ಸಂಖ್ಯೆಯಲ್ಲಿ ಸೇರುತ್ತಾರೆ. "ಕರಗ ಪೂಜಾರಿಯು ಏನ್‌ತಾಯೇ ಕರಗದಮ್ಮ ಎನ್‌ತಾಯೇ ಈಶ್ವರಿಯೇ ಎಂದು ತಮಿಳಿನಲ್ಲಿ ಸ್ತುತಿಸುತ್ತಾ ಕರಗ ವ್ಯಕ್ತಿ ಸ್ಫೂರ್ತಿಗೊಳ್ಳುವಂತೆ ಮಾಡುತ್ತಿರುತ್ತಾನೆ"[೨೮] ಇಡೀ ರಾತ್ರಿ ಮೆರವಣಿಗೆ ಮುಗಿಸಿ ಬೆಳಗಿನ ಜಾವ ಮೆರವಣಿಗೆ ದೇವಾಲಯಕ್ಕೆ ಹಿಂದಿರುಗುತ್ತದೆ. ನಂತರ ಕರಗವು ಅಗ್ನಿಕುಂಡವನ್ನು ಪ್ರವೇಶಿಸುವಂತೆ ಮಾಡಿ ಗರ್ಭಗುಡಿಯಲ್ಲಿಟ್ಟು ವಸಂತೋತ್ಸವ ಕಾಲಮುಗಿಯುವವರೆಗೂ ಪ್ರತಿಷ್ಠಾಪಿಸಿ ಪೂಜಿಸಲಾಗುತ್ತದೆ.

**ದ್ರೌಪದಿಯ ಕಲ್ಯಾಣೋತ್ಸವ**

ಸಾಮಾನ್ಯವಾಗಿ ಎಲ್ಲಾ ಜಾತ್ರೆಗಳಲ್ಲಿ ವಿವಾಹವನ್ನು ಶಾಸ್ತ್ರೋಕ್ತವಾಗಿ ನೆರವೇರಿಸುವಂತೆ ಕಂಡುಬರುತ್ತದೆ. ಕರಗ ಜಾತ್ರೆಗಳು ಈ ಮಾತಿಗೆ ಹೊರತಾಗಿಲ್ಲ. ಕರಗ ಜಾತ್ರೆಗಳಲ್ಲಿ ಹೂವಿನ ಕರಗ ಆಚರಿಸುವುದಕ್ಕೂ ಒಂದು ದಿನ ಮೊದಲು ಪುರೋಹಿತರ ಸಮ್ಮುಖದಲ್ಲಿ ದ್ರೌಪದಿಯ ಕಲ್ಯಾಣೋತ್ಸವ ಜರುಗುತ್ತದೆ. ದ್ರೌಪದಿ ಮತ್ತು ಅರ್ಜುನರ ಪ್ರತಿಮೆಗೆ ಶಾಸ್ತ್ರೋಕ್ತವಾಗಿ ವಿವಾಹಕಾರ್ಯ ಮಾಡಿಸುವ ಆಚರಣೆಯನ್ನು ದ್ರೌಪದಿಯ ಕಲ್ಯಾಣೋತ್ಸವ ಎಂದು ಕರೆಯುವರು. ಪುರೋಹಿತರು ದ್ರೌಪದಿಯ ಪ್ರತಿಮೆಗೆ ಮಾಂಗಲ್ಯಾಧಾರಣೆ ಮಾಡುವ ಮೂಲಕ ಈ ಕಲ್ಯಾಣೋತ್ಸವ ಕಾರ್ಯವನ್ನು ನೆರವೇರಿಸುತ್ತಾರೆ.

**ಕೆಂಡ ತುಳಿಯುವುದು**

ಭಕ್ತಾದಿಗಳು ತಮ್ಮ ಆಸೆಗಳನ್ನು ಈಡೇರಿಸಿಕೊಳ್ಳಲು ದೇವರ ಹೆಸರಿನಲ್ಲಿ ಹರಕೆಗಳನ್ನು ಮಾಡಿಕೊಳ್ಳುತ್ತಾರೆ. ಇಂತಹ ಹರಕೆಗಳಲ್ಲಿ ಕೆಂಡ ಹಾಯುವುದು ಒಂದು. ಕರಗ ಜಾತ್ರೆಗಳಲ್ಲಿ ಇದು ಮತ ವಿಧಿಯಾಚರಣೆಯಾಗಿ ಕಂಡು ಬರುತ್ತದೆ. ಹೂವಿನ ಕರಗ ಆಚರಣೆಯ ಮೆರವಣಿಗೆಯನ್ನು

ಮುಗಿಸಿ ಕರಗವು ದೇವಾಲಯಕ್ಕೆ ಹಿಂದಿರುಗುವ ಸಮಯದಲ್ಲಿ ಈ ಆಚರಣೆಯನ್ನು ಮಾಡಲಾಗುತ್ತದೆ. ದೇವಾಲಯದ ಮುಂದೆ ಗೊತ್ತುಪಡಿಸಿದ ಸ್ಥಳದಲ್ಲಿ ಕೆಂಡಗುಂಡಿಯನ್ನು ನಿರ್ಮಿಸಿರಲಾಗಿರುತ್ತದೆ. ಗುಂಡಿಗೆ ಪೂಜೆ ಸಲ್ಲಿಸಿದ ಬಳಿಕ ಭಕ್ತಾಧಿಗಳಿಗೆ ಕೆಂಡ ತುಳಿಯಲು ಅವಕಾಶ ಮಾಡಿಕೊಡಲಾಗುತ್ತದೆ. ಭಕ್ತಾದಿಗಳು ಹರಕೆಯಂತೆ ಮೂರು ಬಾರಿ ಕೆಂಡದ ಮೇಲೆ ನಡೆಯುವ ಮೂಲಕ ತಮ್ಮ ಹರಕೆಯನ್ನು ತೀರಿಸುವರು. ತಾವು ಪವಿತ್ರರು ದೋಷಮುಕ್ತರು ಎಂಬುದನ್ನು ದೇವರ ಸಮ್ಮುಖದಲ್ಲಿ ಪರೀಕ್ಷಿಸುವ, ದೃಢಪಡಿಸುವ ವಿಧಿಯಾಗಿ ಈ ಆಚರಣೆ ಕಂಡು ಬರುತ್ತದೆ.

**ಗಾವುಸಿಗಿತ**

ದೇವರುಗಳನ್ನು ಸಂತೃಪ್ತಿಸುವ ಒಂದು ವಿಧಿಯಾಚರಣೆಯಾಗಿ ಜಾತ್ರೆಗಳ ಸಮಯದಲ್ಲಿ ಕಂಡು ಬರುತ್ತದೆ. ಇದನ್ನು ಪ್ರಾಚೀನ ಸಮಾಜದವರು ರೂಢಿಸಿಕೊಂಡು ಬಂದಿದ್ದರಿಂದ ಇಂದಿಗೂ ಆಚರಣೆಯಲ್ಲಿದೆ. ಮೇಕೆಯನ್ನು ಗಾವು ಎಂದು ಕರೆಯಲಾಗುತ್ತದೆ. ಮೇಕೆಯ ಮರಿಯ ಕುತ್ತಿಗೆಯನ್ನು ವ್ಯಕ್ತಿ ತನ್ನ ಬಾಯಿಂದ ಕಚ್ಚಿ ಅದರ ರಕ್ತ ಹೀರುವುದನ್ನು ಗಾವು ಸಿಗಿತ ಎಂದು ಕರೆಯುವರು. ಗಾವು ಸಿಗಿಯುವ ವ್ಯಕ್ತಿಯನ್ನು ಪೋತರಾಜ ಎಂದು ಕರೆಯುತ್ತಾರೆ. ಗಾವು ಸಿಗಿಯುವ ಕಾರ್ಯ ದೇವಾಲಯದ ಎದುರಿನ ವಿಶಾಲ ಬಯಲಿನಲ್ಲಿ ನಡೆಯುತ್ತದೆ. ಈ ಪ್ರದೇಶದಲ್ಲಿ ನೆರೆದ ಭಕ್ತ ಸಮೂಹ ಮತ್ತು ಸಾರ್ವಜನಿಕರ ಸಮ್ಮುಖದಲ್ಲಿ ಈ ಆಚರಣೆಯನ್ನು ನೆರವೇರಿಸಲಾಗುತ್ತದೆ. ಇದು ಗಾವು ಸಿಗಿಯುವ ವ್ಯಕ್ತಿಯ ಆವೇಶ ಮತ್ತು ಶಕ್ತಿ ಸಾಮರ್ಥ್ಯವನ್ನು ಪ್ರದರ್ಶಿಸುವ ಕ್ರೌರ್ಯದ ಸಂಕೇತವಾಗಿ ಕಂಡು ಬರುತ್ತದೆ. ಆದಿ ಮಾನವನ ಕಾಲದಲ್ಲಿ ಬಲ ಇದ್ದವನು ಮಾತ್ರ ಬದುಕಬೇಕೆಂಬ ನಿಸರ್ಗ ನಿಯಮವಿತ್ತು. ಆ ವ್ಯಕ್ತಿಯ ಕಷ್ಟಕೋಟಲೆಯಿಂದ ಪಾರಾಗಲು ಹಾಗೂ ಅವನ ಕೆಂಗಣ್ಣಿಗೆ ಗುರಿಯಾಗುವ ಬದಲು ಪ್ರೀತಿಗೆ ಪಾತ್ರರಾಗಿ ಅವನನ್ನು ಸಂತೃಪ್ತಿಗೊಳಿಸಿ ತಮ್ಮ ಮನುಕುಲವನ್ನು ಮುಂದುವರಿಸಿಕೊಂಡು ಬರಲು ಮನುಷ್ಯನಿಗೆ ಬದಲು ಪ್ರಾಣಿಗಳ ರಕ್ತಾಭಿಷೇಕ ಮಾಡುತ್ತಾ ಬಂದ ಕಾರಣದಿಂದಾಗಿ ಈ ಆಚರಣೆ ಜಾರಿಗೆ ಬಂದಿರಬೇಕು. " ಆದಿಮಾನವನ ಆಹಾರ ಭಕ್ಷಣೆಯ ರೀತಿಯನ್ನು ಪುರಭಿನಯಿಸಿ ತೋರುವ ಈ ವಿಧಿ ಕ್ರೌರ್ಯ ಮತ್ತ ಬೀಭತ್ಸತೆಯಿಂದ ಕೂಡಿದೆ."[೧೯]

**ಪುರಾಣ ಪಠಣ**

ಮಹಾಭಾರತದ ಪ್ರಮುಖ ಸನ್ನಿವೇಶಗಳನ್ನು ಕರಗ ಜಾತ್ರೆಗಳಲ್ಲಿ ಪಠಿಸುವುದು ವಿಶೇಷ ಆಚರಣೆಯಾಗಿ ಕಂಡುಬರುತ್ತದೆ. ಹೂವಿನ ಕರಗ ಮುಗಿದ ನಂತರದ ದಿನ ಸಾಯಂಕಾಲ ಪುರಾಣ ಹೇಳುವ ಕಾರ್ಯಕ್ರಮವನ್ನು ದೇವಾಲಯದಲ್ಲಿ ಏರ್ಪಡಿಸಲಾಗುತ್ತದೆ. ಪುರಾಣ ಓದುವವನು ತನ್ನ ಸಹಚರನೊಂದಿಗೆ ಮಹಾಭಾರತ ಕಥೆಯನ್ನು ಪಠಿಸುತ್ತಾನೆ. ಭಾರತ ಕಥೆಯನ್ನು ಪಠಿಸುವವನನ್ನು ಭಾರತ ಪೂಜಾರಿ ಎಂದು ಕರೆಯುವುದು ರೂಢಿಯಲ್ಲಿದೆ. ಈ ಮೊದಲು ಮಹಾಭಾರತದ ಹದಿನೆಂಟು ಪರ್ವಗಳನ್ನು ದಿನಕ್ಕೊಂದು ಪರ್ವದಂತೆ ಹದಿನೆಂಟು ದಿನಗಳ ಕಾಲ ಪಠಿಸಲಾಗುತ್ತಿತ್ತು. ಪ್ರಸ್ತುತ ಈ ಕಾರ್ಯಕ್ರಮದಲ್ಲಿ ಸಾಕಷ್ಟು ಬದಲಾವಣೆಗಳಾಗಿದ್ದು ಒಂದೆರಡು ದಿನಗಳಲ್ಲಿ ಮುಗಿಸಲಾಗುತ್ತದೆ.

ಇದು ಜಾತ್ರೆಯ ಆಚರಣೆಗಳಲ್ಲಿ ಮಹತ್ವದ ಬದಲಾವಣೆಗಳಾಗುತ್ತಿರುವುದನ್ನು ಸೂಚಿಸುತ್ತದೆ. ಪುರಾಣ ಪಠಿಸುವ ವ್ಯಕ್ತಿಯನ್ನು ಅವನ ಸಹಚರರು ಅನುಸರಿಸಿ ಹಿಮ್ಮೇಳವನ್ನು ಹೇಳುವ ಮೂಲಕ ಔದಪ್ಪ, ಹೌದೌದು, ಆಗಲಿ ಮಹಾಸ್ವಾಮಿ, ಮತ್ತೆ, ಭಲೇ ಭಲೇ ಹಾ. .. . ಹಾ. . . ಓ. . .ಓ. . .. ಆಮೇಲೆ ಎಂಬುದಾಗಿ ಪ್ರೇಕ್ಷಕರ ಗಮನ ಸೆಳೆಯುತ್ತಾ ಪರಾಣ ಹೇಳುವವರಿಗೆ ಉತ್ತಮ ಪ್ರೋತ್ಸಾಹ ನೀಡುತ್ತಾರೆ.

**ವಸಂತೋತ್ಸವ**

ವಸಂತೋತ್ಸವವು ವಿಜಯದ ಸಂಕೇತವಾಗಿ ಆಚರಣೆಯಲ್ಲಿದೆ. ಹೂವಿನ ಕರಗದ ಉತ್ಸವ ನಡೆದ ಮರುದಿನ ಇಲ್ಲವೇ ನಂತರದ ದಿನದಲ್ಲಿ ವಸಂತೋತ್ಸವವನ್ನು ಆಚರಿಸುವುದು ರೂಢಿಯಲ್ಲಿದೆ. ಈ ಆಚರಣೆಯ ಸಮಯದಲ್ಲಿ ಓಕುಳಿಯಾಡುವುದು ಎಲ್ಲರ ಗಮನ ಸೆಳೆಯುತ್ತದೆ. ಜೊತೆಗೆ ಒನಕೆ ಹಿಡಿದು ನೃತ್ಯ ಮಾಡುವ ವಿಧಿಯಾಚರಣೆ ಇದರ ಭಾಗವಾಗಿದೆ. ಇದನ್ನು ಒನಕೆ ಕರಗ ಎಂದೂ ಕರೆಯುವರು. ಊಟ್ಲುಕಾಯಿ ಹೊಡೆಯುವ ಆಚರಣೆ ಒಂದು ಕ್ರೀಡೆಯಾಗಿದ್ದು ವಸಂತೋತ್ಸವದ ಆಚರಣೆಯೊಂದಿಗೆ ನಡೆಯುತ್ತದೆ.

**ದೀಪದಾರತಿ**

ಕರಗ ಜಾತ್ರೆಯಲ್ಲಿ ಮಹಿಳೆಯರು ಹಸಿಕರಗದ ನಂತರದ ದಿನ ಇಲ್ಲವೆ ಕಂಕಣಕಟ್ಟಿದ ಆರನೆಯ ದಿನದಂದು ತಂಬಿಟ್ಟಿನ ದೀಪದಾರತಿಗಳನ್ನು ಮಾಡಿ ಅವುಗಳನ್ನು ಹೂವುಗಳಿಂದ ಮತ್ತು ಹತ್ತಿಬತ್ತಿಯ ಹಾರಗಳಿಂದ ಅಲಂಕರಿಸಿ ಸಾಮೂಹಿಕವಾಗಿ ದೀಪದಾರತಿಗಳನ್ನು ದೇವಾ ಲಯದಲ್ಲಿ ಬೆಳಗುವ ಮೂಲಕ ಈ ಆಚರಣೆಯನ್ನು ನೆರವೇರಿಸುತ್ತಾರೆ. ಜಾತ್ರೆಗಳ ಆಚರಣೆಯಲ್ಲಿ ಮಹಿಳೆಯರ ಪ್ರಾಧಾನ್ಯತೆಯನ್ನು ಈ ಅಚರಣೆ ಸ್ಪಷ್ಟಪಡಿಸುತ್ತದೆ. ಇದನ್ನು ಆಚರಿಸುವುದಕ್ಕೆ ಪ್ರಮುಖ ಕಾರಣವೇನೆಂದರೆ ಮುಂದಿನ ಕರಗ ತಕ್ಯುತ್ಸವಕ್ಕೆ ಯಾವುದೇ ಅಪಾಯಕಾರಕ ವಿಘ್ನಗಳು ಬಾರದಂತೆ ಮತ್ತು ಕರಗ ಉತ್ಸವವು ಸುಲಲಿತವಾಗಿ ನಡೆಯಲಿ ಎಂಬ ರಕ್ಷಣೆಯ ದೃಷ್ಟಿಯಿಂದ ಈ ಆಚರಣೆ ಜಾರಿಯಲ್ಲಿದೆ. ಆರತಿಗಳನ್ನು ನೀರಿನಲ್ಲಿ ವಿಸರ್ಜಿಸುವುದರೊಂದಿಗೆ ಈ ಆಚರಣೆ ಮುಕ್ತಾಯವಾಗುತ್ತದೆ.

**ಕಂಕಣ ವಿಸರ್ಜನೆ**

ಕಂಕಣ ವಿಸರ್ಜನೆ ಕರಗ ಜಾತ್ರೆಗಳ ಮುಕ್ತಾಯವನ್ನು ಸೂಚಿಸುತ್ತದೆ. ಕರಗ ಜಾತ್ರೆಯ ಆರಂಭದ ಕುರುಹಾಗಿ ಧ್ವಜಸ್ತಂಭಕ್ಕೆ ಕಟ್ಟಿದ ಕಂಕಣ ಹಾಗೂ ಪುರೋಹಿತರು ಪಟ್ಟದ ಪೂಜಾರಿಗಳೂ, ಗೌಡರು, ಯಜಮಾನರು ಹಾಗೂ ಕರಗ ಹೊರುವ ವ್ಯಕ್ತಿಯನ್ನು ಒಳಗೊಂಡಂತೆ ಕಂಕಣ ಕಟ್ಟಿಕೊಂಡ ಎಲ್ಲರೂ ಪರಸ್ಪರ ಕಂಕಣವನ್ನು ವಿಸರ್ಜಿಸುವ ಮೂಲಕ ಪ್ರತಿಷ್ಠಾಪಿಸಿದ ಧ್ವಜಸ್ತಂಭವನ್ನು ಕೀಳುತ್ತಾರೆ. ನಂತರ ದೇವಾಲಯವನ್ನು ಮೂರು ಬಾರಿ ಪ್ರದಕ್ಷಿಣೆ ಹಾಕುವ ಮೂಲಕ ಕರಗ ಜಾತ್ರಗೆ ಮಂಗಳ ಹಾಡುತ್ತಾರೆ. ಬೆಂಗಳೂರು ಕರಗ ಉತ್ಸವವನ್ನು ಗಮನಿಸಬಹುದಾಗಿದೆ.

## ೫.೮ ಮುಸ್ಲಿಮರ ಉರುಸ್ ಜಾತ್ರೆಗಳು

ಭಾರತವು ಸಾಂಸ್ಕೃತಿಕವಾಗಿ ಅತ್ಯಂತ ಶ್ರೀಮಂತ ರಾಷ್ಟ್ರವಾಗಿದೆ. ಈ ಸಮಾಜವು ಜಾತ್ಯಾತೀತ ಮನೋಭಾವನೆಯ ಜೊತೆಗೆ ಸರ್ವಮತ ಸಮನ್ವಯ ತತ್ವವನ್ನು ಅನುಸರಿಸಿಕೊಂಡು ಬಂದಿದೆ. ಇಲ್ಲಿ ಯಾವುದೇ ಮತ್ತು ಶ್ರೇಷ್ಠವೆಂದಾಗಲಿ ಅಥವಾ ಕನಿಷ್ಠವೆಂದಾಗಲಿ ಪರಿಗಣಿಸಲ್ಪಡುವುದಿಲ್ಲ. ಎಲ್ಲಾ ಮತಗಳಿಗೂ ಸಮಾನ ಸ್ಥಾನಮಾನವನ್ನು ನೀಡಿದ ಕಾರಣಕ್ಕಾಗಿಯೇ ಪ್ರಪಂಚದಲ್ಲಿ ವಿಶಿಷ್ಟ ಸ್ಥಾನವನ್ನಲಂಕರಿಸಿದೆ. ಇಲ್ಲಿಯ ಜನರು ಸಹ ಈ ವೈವಿಧ್ಯಮಯ ಸಂಸ್ಕೃತಿಯ ಪ್ರತೀಕವಾಗಿದ್ದಾರೆ. ಇಲ್ಲಿ ಎಲ್ಲರೂ ಸಾಮಾಜಿಕ ಸಾಮರಸ್ಯದಿಂದ ಸುಖ ದುಃಖಗಳನ್ನು ಹಂಚಿಕೊಂಡು ಬದುಕುತ್ತಿದ್ದಾರೆ. ಇವರ ಈ ಬದುಕು ದೇಶೀಯ ಸಂವಿಧಾನದ ಮೂಲ ಪರಿಕಲ್ಪನೆಯನ್ನು ಸಾಕಾರಗೊಳಿಸಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಮತ ಸಮನ್ವಯದ ಕುರುಹಾಗಿ ವಿಶಿಷ್ಟ ಬಗೆಯ ಜಾತ್ರೆಗಳು ಆಚರಣೆಯಲ್ಲಿವೆ. ಇಂತಹ ವಿಶಿಷ್ಟ ಬಗೆಯ ಜಾತ್ರೆಗಳಲ್ಲಿ ಮುಸ್ಲಿಂ ಬಾಂಧವರು ಆಚರಿಸುವ 'ಉರುಸ್' ಜಾತ್ರೆಗಳು ಪ್ರಮುಖ ವಾದವು. ಮುಸ್ಲಿಂ ಬಾಂಧವರೊಂದಿಗೆ ಹಿಂದೂ ಸಹೋದರರೂ ಒಗ್ಗೂಡಿ ಅದ್ದೂರಿಯಾಗಿ 'ಉರುಸ್' ಜಾತ್ರೆಗಳನ್ನುನೆರವೇರಿಸುತ್ತಾರೆ.

ಮುಸ್ಲಿಂ ಜನಾಂಗದವರ ಉರುಸ್ ಜಾತ್ರೆಗಳು ಐತಿಹಾಸಿಕ ಪುರುಷರ, ಪವಾಡ ಪುರುಷರ, ದೈವಾಂಶ, ಸಂಭೂತರ, ಸಾಂಸ್ಕೃತಿಕ ವೀರರ ನೆನಪಿಗಾಗಿ ಇಡೀ ಸಮುದಾಯದ ಜನರು ಒಂದುಗೂಡಿ ಆಚರಿಸುವ ವಿಶಿಷ್ಟ ಸಾಮಾಜಿಕ ನಡಾವಳಿಗಳಾಗಿವೆ. ಈ ಹುತಾತ್ಮರನ್ನು ಮುಸ್ಲಿಂ ಬಾಂಧವರು 'ವಲಿ' ಎಂದು ಕರೆಯುತ್ತಾರೆ. ವಲಿ ಎಂಬ ಶಬ್ದವು ಉರ್ದು ಮತ್ತು ಅರಬ್ಬಿ ಭಾಷೆಯಿಂದ ಬಂದ ಶಬ್ದವಾಗಿದ್ದು ಇದಕ್ಕೆ ದೇವರ ಪ್ರವರ್ತಕ, ದೇವರ ಪ್ರತಿನಿಧಿ ಎಂಬ ಅರ್ಥವಿದೆ.

ವಲಿಯಾಗಿದ್ದವರು ಅವರ ಸುತ್ತಮುತ್ತಲಿನ ಪ್ರದೇಶದ ಜನರೊಂದಿಗೆ ಅನ್ಯೂನ್ಯ ಸಂಬಂಧವನ್ನು ಹೊಂದಿದ್ದು ತಮ್ಮ ಅನುಭವದಿಂದ ಸಮುದಾಯದ ಜನರ ಕಷ್ಟಕೋಟಲೆಗಳಿಗೆ ಪರಿಹಾರ ಸೂಚಿಸುತ್ತಿದ್ದರು. ಸಮುದಾಯದ ಎಲ್ಲ ಜಾತಿ ಮತ್ತು ಮತದ ಜನರು ಭೇದವಿಲ್ಲದೆ ವಲಿ ಸೂಚಿಸಿದ ಮಾರ್ಗಗಳನ್ನು ಅನುಸರಿಸಿ ಸುಖಕರವಾದ ಸಾಮಾಜಿಕ ಸಾಮ ರಸ್ಯದ ಜೀವನವನ್ನು ಸಾಗಿಸುತ್ತಿದ್ದರು. ವಲಿಯಾದವರು ತಮ್ಮ ಅನುಭವದ ದೂರದೃಷ್ಟಿಯ ಜೊತೆಗೆ ದೈವಿ ಕೃಪೆಯಿಂದ ಅಗಾಧವಾದ ಶಕ್ತಿಯನ್ನು ಪಡೆದು ಅನೇಕ ಪವಾಡಗಳನ್ನು ಮಾಡಿ ಜನಮಾನಸದಲ್ಲಿ ಬೇರೂರಿದರು. ಇವರ ಪವಾಡಗಳಿಂದ ಸಾಮಾಜಿಕ ಜನಜೀವನದಲ್ಲಿ ಪರಿಣಾಮಕಾರಿಯಾದ ಬದಲಾವಣೆಗಳಾದವು. ಕಾಲಕಳೆದಂತೆ ಇವರು ಈ ಭಾಗದ ಜನರ ದೇವರಾದರು.

ಮುಸ್ಲಿಂ ಈ ಬಗೆಯ ಸಂತರು (ವಲಿ) ಜನಸೇವೆಗಾಗಿ ತಮ್ಮ ಜೀವನವನ್ನು ಮುಡುಪಾಗಿಟ್ಟರು. ಈ ಕಾರಣಕ್ಕಾಗಿ ಇವರ ಸಮಾಧಿ ಸ್ಥಳವನ್ನು ಜನರು ಪವಿತ್ರಸ್ಥಳವೆಂದು ತಿಳಿದು ಆ ಸ್ಥಳಗಳಲ್ಲಿ ಅವರ ನೆನಪಿಗಾಗಿ 'ಉರುಸ್'ಎಂಬ ಜಾತ್ರೆಯನ್ನು ಆಚರಿಸಿಕೊಂಡು ಬರುತ್ತಿದ್ದಾರೆ. ಉರುಸ್

ಪದವು ಪಾರ್ಸಿಭಾಷೆಯಿಂದ ನಿಷ್ಪತ್ತಿಯಾಗಿದೆ. ಈ ಶಬ್ದಕ್ಕೆ ಜಾತ್ರೆ ಮಹೋತ್ಸವ ಆಚರಣೆ ಎಂಬ ಅರ್ಥವಿದೆ. ಈ ಬಗೆಯ ಜಾತ್ರೆಗಳು ಸರ್ವಮತ ಸಮನ್ವಯದ ಪ್ರತೀಕಗಳಾಗಿವೆ. ಹಿಂದು ಮತ್ತು ಮುಸ್ಲಿಂ ಬಾಂಧವರು ಅತ್ಯಂತ ಶ್ರದ್ಧಾ ಭಕ್ತಿಯಿಂದ ಈ ಜಾತ್ರೆಗಳನ್ನು ಆಚರಿಸುತ್ತಾರೆ. ಈ ಬಗೆಯ ಜಾತ್ರೆಗಳನ್ನು ಆಯಾಭಾಗದ ಮಳೆಗಾಲದ ಸಮಯವನ್ನು ಹೊರತುಪಡಿಸಿ ಸುಗ್ಗಿಮುಗಿದ ನಂತರ ಸಮುದಾಯದ ಜನರೆಲ್ಲ ಸೇರಿ ಆಚರಿಸುತ್ತಾರೆ. ಹಿಂದೂಗಳು ಪ್ರತೀ ವರ್ಷ ಜಾತ್ರೆ, ಹಬ್ಬ, ಉತ್ಸವ ಆಚರಿಸುವಂತೆ ಮುಸಲ್ಮಾನರೂ ಉರುಸ್ ಎಂಬ ಜಾತ್ರೆಯನ್ನು ಆಚರಿಸುತ್ತಾರೆ ಮುಸ್ಲಿಂ ನಂತರ ವಾರ್ಷಿಕ ಪುಣ್ಯತಿಥಿಯ ಸಂದರ್ಭದಲ್ಲಿ ಆಚರಿಸುವ ಉರುಸ್‌ಗಳು ಜಾತ್ರೆಗಳಾಗಿ ಕಂಡುಬರುತ್ತವೆ.

ಉರುಸ್ ಜಾತ್ರೆಗಳು ಗುರುವಾರದ ದಿನದಂದು ಆರಂಭವಾಗುವುದು ವಾಡಿಕೆ. ೩ ರಿಂದ ೭ ದಿನಗಳ ಕಾಲ ಈ ಬಗೆಯ ಜಾತ್ರೆಗಳು ನಡೆಯುತ್ತವೆ. ಜಾತ್ರೆಯ ಮೊದಲ ದಿನ ಸಂದಲ್ (ಗಂಧೋತ್ಸವ) ಆಚರಿಸಲಾಗುತ್ತದೆ. ಗಂಧವನ್ನು ತಮ್ಮ ಹರಕೆಯಂತೆ ಗುಡಿಗೆ ಅಂಜುಮನ್ ಮದರಸ (ದರ್ಗ)ಕ್ಕೆ ತರುತ್ತಾರೆ. ಭಕ್ತರು ತಂದ ಗಂಧವನ್ನು ಫಾತೇಹಾ ಓತಿಕ (ಪೂಜೆ) ಮಾಡಲಾಗುತ್ತದೆ. ಪೂಜೆಯ ನಂತರ ಭಕ್ತರು ತಂದ ಗಂಧವನ್ನು ಹೊತ್ತ ಭಕ್ತರು ಸಾಗುವ ದಾರಿಯುದ್ದಕ್ಕೂ ಅವರ ಕಾಲಿಗೆ ನೀರನ್ನು ಹಾಕಲಾಗುತ್ತದೆ. ಹಿಂದೂ ಮುಸ್ಲಿಂ ಭಕ್ತರೆಂಬ ಯಾವ ಭೇದ ಭಾವವಿಲ್ಲದೆ ಹರಕೆ ತೀರಿಸುವ ಭಕ್ತರ ಕಾಲಿಗೆ ನೀರನ್ನು ಹಾಕಲಾಗುತ್ತದೆ. ಹರಕೆ ಹೊತ್ತ ಭಕ್ತರಿಗೆ ಈ ಸಮಯದಲ್ಲಿ ಸಕ್ಕರೆ ಮತ್ತು ಊದು ಬತ್ತಿಗಳನ್ನು ನೀಡಲಾಗುತ್ತದೆ. ಹೀಗೆ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಸಾಗಿದ ಭಕ್ತ ಸಮೂಹವು ಕೊನೆಗೆ ಗುಡಿ ಸೇರುತ್ತದೆ. ಆ ಸಮಯದಲ್ಲಿ ಪವಾಡ ಪುರುಷನ ಸಮಾಧಿ ಬಳಿ ಗಂಧವಿಟ್ಟು ಪೂಜೆ ಮಾಡಲಾಗುತ್ತದೆ. ಈ ಗಂಧೋತ್ಸವ ಪೂಜೆಗೆ ರಾಜ್ಯ ಹಾಗೂ ಹೊರರಾಜ್ಯಗಳಿಂದಲೂ ಭಕ್ತರು ಬಂದು ಸೇರುತ್ತಾರೆ. ಈ ಜಾತ್ರೆಯ ಪ್ರದೇಶದಲ್ಲಿ ಅನೇಕ ರೀತಿಯ ವ್ಯಾಪಾರ ಮಳಿಗೆಗಳು ಸಾಲುಗಟ್ಟಿರುತ್ತವೆ. ಭಕ್ತರ ಗುಡಿಗೆ( ದರ್ಗ) ಕಾಣಿಕೆ ಸಲ್ಲಿಸುತ್ತಾರೆ. ತಲೆಕೂದಲು ಹರಕೆ ತೀರಿಸುವ, ಕಾರ್ಯವು ನಡೆಯುತ್ತದೆ. ಜೊತೆಗೆ ಮಕ್ಕಳಾಗದವರು ಹರಕೆ ಕಟ್ಟಿಕೊಳ್ಳುವುದನ್ನು ಈ ಜಾತ್ರೆಯ ಸಮಯದಲ್ಲಿ ಕಾಣಬಹುದು. ಹೀಗೆ ಭಕ್ತರು ಅವರ ಮನಸ್ಸಿನ ಇಚ್ಛೆಗಳ ಈಡೇರಿಕೆಗಾಗಿ ಹರಕೆ ಮಾಡಿಕೊಳ್ಳುತ್ತಾರೆ. ಈ ಸಮಯದಲ್ಲಿ ಚಾದರ್ (ಹೂವಿನ) ಉಡುಗೆಯನ್ನು ಗುಡಿಯ ವಲಿ ಸಮಾಧಿಯ ಮೇಲೆ ಹಾಕುತ್ತಾರೆ. ಇದರೊಂದಿಗೆ ಮೊದಲ ದಿನದಿಂದ ಜಾತ್ರೆಯ ಕಾರ್ಯಕ್ರಮಗಳು ಮುಕ್ತಾಯಗೊಳ್ಳುತ್ತವೆ.

ನಂತರದ ದಿನಗಳಲ್ಲಿ ದರೂದ್ ಓತಿಗೆ, ಸಲಾಂ ಓತಿಗೆಯಂತಹ ಆಚರಣೆಗಳು ನಡೆಯುತ್ತವೆ. ತಖ್ರೀರ್ ಅಥವಾ ಭಯಾನ್‌ನಂತಹ (ಮತವನ್ನು ಕುರಿತಾದ) ಉಪನ್ಯಾಸಗಳು ನಡೆಯುತ್ತವೆ. ಭಕ್ತರಿಗೆ ದಾಸೋಹ ವ್ಯವಸ್ಥೆಯನ್ನು ಮಾಡಲಾಗಿರುತ್ತದೆ ಖವಾಲಿ (ಸಂಗೀತ)ಯಂತಹ ಕಾರ್ಯಕ್ರಮಗಳಲ್ಲಿ ಜನರು ಹೆಚ್ಚಿನ ಸಂಖ್ಯೆಯಲ್ಲಿ ಸೇರುತ್ತಾರೆ.

**ಸಂದಲ್ (ಗಂಧೋತ್ಸವ)**

ಭಕ್ತರು ತಮ್ಮ ಹರಕೆಯಂತೆ ತಂದಂತಹ ಗಂಧವನ್ನು ಗುಡಿಯಲ್ಲಿ ಇಟ್ಟು ಫಾತೇಹಾ ಓತಿಗೆ ಮಾಡಿ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಸಾಗುವ ಆಚರಣೆಯಾಗಿದೆ. ಈ ಆಚರಣೆಯೊಂದಿಗೆ ಜಾತ್ರೆಯ ವಿಧಿ ವಿಧಾನಗಳಿಗೆ ಚಾಲನೆ ನೀಡಲಾಗುತ್ತದೆ.

**ಚಾದರ್ (ಪುಷ್ಪೋತ್ಸವ)**

ವಲಿಯ ಸಮಾಧಿಗೆ ಹೂವಿನಿಂದ ತಯಾರಿಸಿದ ೩ ಅಡಿ ಅಗಲದ ೬ ಅಡಿ ಉದ್ದದ ಉಡುಗೆಯನ್ನು ಹೊಸಬಟ್ಟೆಯ ಸಂಕೇತವಾಗಿ ಪೂಜೆ ಮಾಡಿಹೊದಿಸುವ ವಿಧಿಯಾಚಣೆಯಾಗಿದೆ.

**ತಖ್ರೀರ್ (ಉಪನ್ಯಾಸ)**

ಇದು ರಾತ್ರಿಯ ಸಮಯದಲ್ಲಿ ರಾತ್ರಿಪೂರ ನಡೆಯುವ ಮತ ವಿಚಾರ ವಿನಿಮಯದ

ಕಾರ್ಯಕ್ರಮವಾಗಿದೆ. ಜಾತ್ರೆಯಲ್ಲಿ ಎಲ್ಲಾ ಜಾತಿ ಮತ್ತು ಮತದ ಜನರು ಸೇರಿರುವುದರಿಂದ ಎಲ್ಲಾ ಮತದವರಿಗೂ ತಮ್ಮ ಮತದ ಸಾರವನ್ನು ತಿಳಿಸಲು, ಉಪನ್ಯಾಸ ನೀಡಲು, ಮತ ವಿಚಾರಗಳ ಕುರಿತಾಗಿ ಚರ್ಚಿಸಲು ಅವಕಾಶ ಮಾಡಿಕೊಡುವ ಆಚರಣೆಯಾಗಿದೆ.

**ಖವಾಲಿ ( ಸಂಗೀತ)**

ಖವಾಲಿ ಸಾಂಸ್ಕೃತಿಕ ಮತ್ತು ಮನೋರಂಜನೆಯನ್ನು ನಡೆಸಿಕೊಡುವ ಕಾರ್ಯಕ್ರಮವಾಗಿದೆ. ಈ ಆಚರಣೆಯಲ್ಲಿ ವಿವಿಧ ಮತದವರ ಕೀರ್ತನೆ, ಹರಿಕಥೆ, ಭಜನೆ, ಮೊದಲಾದ ಆಧ್ಯಾತ್ಮಿಕ ತತ್ವಗಳಿಗೆ ಆದ್ಯತೆ ನೀಡಲಾಗುತ್ತದೆ. ಈ ಆಚರಣೆಯ ಮೂಲಕ ಎಲ್ಲಾ ಮತದಲ್ಲಿಯ ಅಡಗಿರುವ ಮಾನವ ಸಮಾಜದ ಏಳಿಗೆಯ ಉದ್ದೇಶವನ್ನು ಮನವರಿಕೆ ಮಾಡಿಕೊಡಲಾಗುತ್ತದೆ.

**ಎಮ್ಮೆಮಾಡು ಉರುಸ್**

**ಉರುಸ್**

ಕರ್ನಾಟಕದ ಎಲ್ಲಾ ಪಟ್ಟಣಗಳಲ್ಲಿ ಹಾಗೂ ಕೆಲವು ಹಳ್ಳಿಗಳಲ್ಲಿ ಗೋರಿಗಳಿವೆ ಈ ಗೋರಿಗಳಲ್ಲಿ 'ವಲಿ' ಗಳೆಂದರೆ ಅಲ್ಲಾನ ಮಿತ್ರ ಎಂಬ ಅರ್ಥವಿದೆ. ಅನೇಕ ಸೂಫಿ ಸಂತರು ಇಸ್ಲಾಂಧರ್ಮ ಪ್ರಚಾರ ಮಾಡುತ್ತಾ ಭಾರತಕ್ಕೆ ಬಂದರು. ಇವರು ರಾಜಕೀಯವನ್ನು ತಿರಸ್ಕರಿಸಿದರು. ಹಿಂದೂ ಮುಸ್ಲಿಮ್ ಎಂಬ ಭೇದವಿಲ್ಲದೆ, ಜನಸಾಮಾನ್ಯರ ನಡುವೆ ಇರಲು ಬಯಸಿದರು. ಅಲ್ಲಾನ ಭಕ್ತಿಯಲ್ಲಿ ಪರವಶರಾಗಿ ಇಹವನ್ನು ಮರೆತು ಸಾಧನೆಯಲ್ಲಿ ತೊಡಗಿ ಅನೇಕ ಶಕ್ತಿಗಳನ್ನು ತಮ್ಮದಾಗಿಸಿಕೊಂಡು, ಪವಾಡಗಳನ್ನು ತೋರಿಸುತ್ತಿದ್ದರು. ಇದರಿಂದ ಆಕರ್ಷಿತರಾದ ಜನಪದರು ಇವರ ಹತ್ತಿರ ಬಂದು ತಮ್ಮ ಸಂಕಷ್ಟಗಳಿಗೆ ಪರಿಹಾರ ಪಡೆಯುತ್ತಿದ್ದರು. ಇವರನ್ನು 'ವಲಿ'ಗಳೆಂದು ಕರೆದದ್ದಲ್ಲದೆ ಅನೇಕರು

ಇವರ ಶಿಷ್ಯರಾದರು. ಹೀಗೆ ಗುರುಶಿಷ್ಯ (ಪೀರ್ ಮುರೀದ್) ಪರಂಪರೆ ಬೆಳೆಯಲು ಕಾರಣವಾಯಿತು. ಇಂತಹ 'ವಲಿ'ಗಳಲ್ಲಿ ಕೆಲವರು ಜೀವಂತ ಸಮಾಧಿಯಾದರೆಂದು, ಪವಾಡಗಳನ್ನು ಮೆರೆದಿದ್ದರೆಂದು, ಒಬ್ಬೊಬ್ಬ 'ವಲಿ'ಗಳ ಬಗೆಗೆ ಒಂದೊಂದು ಐತಿಹ್ಯಗಳಿವೆ. ವಲೀಗಳಲ್ಲಿ ಕೆಲಚರನ್ನು 'ಜಲಾಲುದ್ದೀನ್' ಎಂದು ಕರೆಯುತ್ತಾರೆ. 'ಜಲಾಲುದ್ದಿನ್' ಎಂದರೆ ಉಗ್ರಗಾಮಿಗಳು ಎಂದರ್ಥ. ಇಂತಹವರ ಗೋರಿಯ ಹತ್ತಿರ ಸ್ತ್ರೀಯರು ಹೋಗುವ ಹಾಗಿಲ್ಲ. ದೂರದಲ್ಲಿ ನಿಂತು ದರ್ಶನ ಪಡೆಯುತ್ತಾರೆ.

ವಲೀಗಳ ಹೆಸರಲ್ಲಿ ಹರಕೆ ಹೊತ್ತು ಪ್ರಾರ್ಥಿಸಿಕೊಂಡರೆ ಕಷ್ಟಗಳು ನಿವರಣೆಯಾಗುತ್ತದೆಂದು ಮುಸ್ಲಿಂ ಜನಪದರ ನಂಬಿಕೆ. ಇದಕ್ಕಾಗಿಯೇ ಕರ್ನಾಟಕದ ಹಲವಾರ ಕಡೆಗಳ 'ವಲೀ'ಗಳ ಹೆಸರುಗಳಲ್ಲಿ ಜಾತ್ರೆಗಳು, ಉರುಸ್‌ಗಳು ಜರುಗುತ್ತವೆ. ಅದರಂತೆ ಕರ್ನಾಟಕದ ಪ್ರಸಿದ್ಧ ಉರುಸ್‌ಗಳಲ್ಲಿ ಕೊಡುಗು ಜಿಲ್ಲೆಯ 'ಎಮ್ಮೆಮಾಡು' ಎಂಬಲ್ಲಿ ಜರುಗುವ ಉರುಸ್ ಕೂಡ ಪ್ರಸಿದ್ಧವಾಗಿದೆ. ಎಮ್ಮೆಮಾಡು ಮಡಿಕೇರಿ ತಾಲ್ಲೂಕು ನಾಲ್ಕು ನಾಡಿನ ಜೀವನದಿ ಕಾವೇರಿಯ ದಡದಲ್ಲಿರುವ ಗ್ರಾಮ. ದಕ್ಷಿಣಭಾರತ, ದಕ್ಷಿಣ ಕರ್ನಾಟಕದ ಮುಸ್ಲಿಂ ಪುಣ್ಯಕ್ಷೇತ್ರಗಳ ಪೈಕಿ ಎಮ್ಮೆಮಾಡು ಗ್ರಾಮಕ್ಕೆ ಅಗ್ರಸ್ಥಾನ. ಏಕೆಂದರೆ ಇಲ್ಲಿ ಸತ್ಯಸಂಧದೈವ ಭಕ್ತ ಪವಾಡಪುರುಷ ಸೂಫಿ ಶಹೀದ್ ಶಾವಲಿ ಚಿರವಿಶ್ರಾಂತಿ ಪಡೆಯುತ್ತಿದ್ದಾರೆ ಎಂಬ ನಂಬಿಕೆಯೇ ಇದಕ್ಕೆ ಕಾರಣ. ಮಡಿಕೇರಿಯಿಂದ ನಾಪೋಕ್ಲು ಮಾರ್ಗವಾಗಿ ತಂಗಳಲ್ಲಿ ಉರುಸ್ ನಡೆಯುತ್ತದೆ.

ಸಾವಿರಾರು ವರ್ಷಗಳ ಹಿಂದೆ ಸೂಫಿ ಶಹೀದ್ ಅವರು ಮರಣ ಶಯ್ಯೆಯಲ್ಲಿ ಬರಕೊಲ್ಲಿ ಎಂಬ ಜಾಗದಲ್ಲಿ ಬಂಡೆಯ ಮೇಲೆ ಜೀವನ್ಮರಣದ ಸ್ಥಿತಿಯಲ್ಲಿದ್ದಾಗ ನೆಲಜಿ ಗ್ರಾಮದ ಕೊಡವ ಜನಾಂಗಕ್ಕೆ ಸೇರಿದ ಮಣವಟ್ಟಿರ ಕುಟುಂಬವರಗೂ ಟಕ್ಕೆ ಕಟ್ಟಿಹಾಕಿದ ಹಸುವೊಂದು ಹಗ್ಗವನ್ನು ತುಂಡರಿಸಿಕೊಂಡು ಬಂದು ಮರಣ ಶಯ್ಯೆಯಲ್ಲಿದ್ದ ಸೂಫಿ ಶಹೀದ್‌ಗೆ ಹಾಲುಣಿಸಿತು ಎಂಬ ಪ್ರತೀತಿ ಇದೆ. ಇದಕ್ಕೆ ಪುಷ್ಟಿ ನೀಡುವಂತೆ ಎಮ್ಮೆಮಾಡುವಿನ ಬರಕೊಲ್ಲಿ ಎಂಬ ಜಾಗದಲ್ಲಿ ಕಲ್ಲು ಬಂಡೆಯ ಮೇಲೆ ಹಸು ಹಾಲುಣಿಸಿದ ಕುರುಹಾಗಿ ಹಸುವಿನ ಹೆಜ್ಜೆ ಮತ್ತು ಹಗ್ಗದ ಗುರುತಿದೆ. ಹೀಗಾಗಿ ಇದೊಂದು ಪ್ರಸಿದ್ಧ ತಾಣವಾಗಿದೆ. ಇಲ್ಲಿ ಗೋಹತ್ಯೆಯನ್ನು ನಿಷೇಧಿಸಲಾಗಿದ್ದು, ಗೋಹತ್ಯೆ ಮಾಡಿದವರಿಗೆ ಮಾರಾಣಾಂತಿಕ ಕಾಯಿಲೆ ಬಂದ ನಿದರ್ಶನವಿದೆ. ಇಲ್ಲಿ ಜಾನುವಾರುಗಳಿಗೆ ಬಂದ ರೋಗ ವಾಸಿಯಾಗುತ್ತದೆ ಎಂಬ ನಂಬಿಕೆಯಿದೆ.

ನೂರಾರು ವರ್ಷಗಳ ಹಿಂದೆ ಮಹಮ್ಮದ್ ಪೈಗಂಬರ್ ಅವರ ವಂಶಸ್ಥ ಅದೂರಿನ ಸಯ್ಯದ್–ಹಸನ್–ಸಖಾಫಿಲ್–ಅಲ್ಲರಮ್ಮಿ–ತಂಙಳ್ರವರು ಶಹಿದ್‌ರವರ ದರ್ಗಾ ಶರಿಫ್ಗೆ ಸಂದರ್ಶಕರಾಗಿ ಬಂದಿದ್ದರು ವೃದ್ಧರಾಗಿದ್ದ ಅವರು ನನಗೆ ನಿಮ್ಮೊಂದಿಗೆ ಅಂತಿಮ ವಿಶ್ರಾಂತಿಗೆ ಸ್ಥಳಾವಕಾಶ ಕಲ್ಪಿಸಿ ಎಂದು ಸೂಫಿ–ಶಹಿದ್ ಅವರನ್ನು ಕೋರಿಕೊಂಡರಂತೆ ತಂಙಳ್ ಅವರ ಕೋರಿಕೆಯನ್ನು ಮನ್ನಿಸಿದ ಸೂಫಿ ಶಹಿದ್ ಅವರು ಅಲ್ಲರಮ್ಮಿ ತಂಙಳ್ ಎತ್ತರವಾದ ದರ್ಗಾ ನೀಡಿ ಗೌರವಿಸಿದ್ದಾರೆ. ದರ್ಗಾ ಶರೀಫ್‌ಗೆ

ಮೆಟ್ಟಿಲಿಳಿದು ಸಾಗುವಾಗ ಮೊದಲು ದೊರಕುವ ಕಟ್ಟಡವೇ ಅಲ್ಲರಮ್ಮಿ-ಮೈಮೇಲಿರುವ ಭೂತಪಿಶಾಚಿ, ಗಾಳಿ ಸೋಂಕು ಬಿಡಿಸುವುದಾಗಿದೆ. ಆ ರೀತಿ ಸಮಸ್ಯೆ ಇರುವ ವ್ಯಕ್ತಿ ಗೋರಿಯ ಸುತ್ತ ಪ್ರದಕ್ಷಿಣೆ ಹಾಕುತ್ತಿದ್ದಂತೆಯೇ ವ್ಯಕ್ತಿಯ ಅಪ್ರಜ್ಞಾವಸ್ಥೆಯಲ್ಲಿ ಮೈಮೇಲಿರುವ ಅತಿಮಾನುಷ ಶಕ್ತಿ ಪ್ರಕಟವಾಗಿ ಕೈಕಾಲು ಮುದುರಿಕೊಳ್ಳುತ್ತಾ ಗೋರಿಯ ಸುತ್ತ ವೇಗವಾಗಿ ಓಡುತ್ತವೆ. ಅಲ್ಲಿನ ಗುರುಗಳು ತಮ್ಮ ಮಾಯಾ ಶಕ್ತಿಯಿಂದ ಕೇಳುವ ಪ್ರಶ್ನೆಗೆ ಉತ್ತರ ಕೊಡುತ್ತವೆ.

'ನೀನು ಎಷ್ಟು ಶಿಕ್ಷೆಕೊಟ್ಟರೂ ಹೋಗುವುದಿಲ್ಲ, ಅಯ್ಯೋ... ಹೀಗೆ ತೊಂದರೆ ಕೊಡಬೇಡ, ನಿಜವಾಗಲೂ ಬಟ್ಟು ಹೋಗುತ್ತೀನಿ' ಎಂದು ವಿಧ ವಿಧವಾಗಿ ಹೇಳುತ್ತವೆ. ಇದನ್ನು 'ತವ್ವಾಪ್' ಎಂದು ಕರೆಯುತ್ತಾರೆ. ಈ ದುಷ್ಟಶಕ್ತಿ ಮೈ ಬಿಟ್ಟು ಹೋಗುವವರೆಗೂ ಗುರುಗಳು ಘೋರ ಶಿಕ್ಷೆ ನೀಡುತ್ತಾರೆ. ಈ ಶಿಕ್ಷೆ ಸಹಿಸಲಾರದೆ ಪುನಃ ಮೈ ಮೇಲೆ ಬರುವುದಿಲ್ಲ ಎಂಬ ವಾಗ್ದಾನದೊಂದಿಗೆ ಬಿಟ್ಟು ಹೋಗುತ್ತವೆ ಎಂದು ಹೇಳುತ್ತಾರೆ. ಈ ಸ್ಥಳದಲ್ಲಿ ಭೂತಬಂದವರನ್ನು ಅಲ್ಲಿ ಕೂಡ ಹಾಕುತ್ತಾರೆ. ಅವರು ಸೂಫಿ ಶಹೀದ್‌ರವರ ಗೋರಿ ನೋಡುತ್ತ ಕಿರುಚಾಡುವುದು, ಗೋಳಾಡುವುದು ಎಲ್ಲರಿಗೂ ಭಯ ಹುಟ್ಟಿಸುವಂತೆ ಮಾಡುತ್ತದೆ. ಇಲ್ಲಿ ಹಿಂದೂ ಮುಸ್ಲಿಂ ಎಂಬ ಭೇದ ಭಾವವಿಲ್ಲದೆ ಎಲ್ಲಾ ಜಾತಿಧರ್ಮದವರು ಇಲ್ಲಿ ಬಂದು ತಮಗೆ ಬಂದಿರುವ ಸಮಸ್ಯೆಯನ್ನು ಬಗೆಹರಿಸಿಕೊಂಡು ನೆಮ್ಮದಿ ಜೀವನ ನಡೆಸಲು ಈ ಕ್ಷೇತ್ರ ಸಹಕಾರಿಯಾಗಿದೆ.

**ತಾಜೂಲ್ ಇಸ್ಲಾಂ ಜಮಾಅತ್ ಉರುಸ್ ಸಮಿತಿ:**

ಎಮ್ಮೆಮಾಡುವಿನಲ್ಲಿ ತಾಜೂಲ್ ಇಸ್ಲಾಂ ಜಮಾಅತ್ ಉರುಸ್ ಎಂಬ ಒಂದು ಸಮಿತಿಯನ್ನು ಇಲ್ಲಿನ ಮುಸ್ಲಿಂ ಬಾಂಧವರು ರಚಿಸಿಕೊಂಡಿದ್ದಾರೆ. ಈ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರು ಚುನಾವಣೆಯ ಮೂಲಕ ಇವರುಗಳೇ ಆಯ್ಕೆ ಮಾಡುತ್ತಾರೆ. ಈ ಸಮಿತಿಯು ಪ್ರತಿ ವರ್ಷ ನಡೆಯುವ ೫ ದಿನ ಉರುಸ್ ಅನ್ನು ಅಯೋಜಿಸುತ್ತಾರೆ. ಈ ೫ ದಿನಗಳಲ್ಲಿ ೫ ರೀತಿಯ ವಿಭಿನ್ನವಾದ ಕಾರ್ಯಕ್ರಮಗಳನ್ನು ಆಯೋಜಿಸುತ್ತಾರೆ. ಕರ್ನಾಟಕದ ಹಾಗೂ ನೆರೆ ಹೊರೆರಾಜ್ಯದ ಪ್ರಖ್ಯಾತ ಧರ್ಮಗುರುಗಳನ್ನು ಈ ಕಾರ್ಯಕ್ರಮಕ್ಕೆ ಅತಿಥಿಗಳಾಗಿ ಯಾವುದೇ ಜಾತಿಧರ್ಮದ ಅಡ್ಡಿ ಇಲ್ಲದೆ ಎಲ್ಲಾ ಕೋಮಿನ ಸನ್ಮಾನಿತರು ಹಾಗೂ ರಾಜಕೀಯ ಜನಪ್ರತಿನಿಧಿಗಳು ಭಾಗವಹಿಸುವುದು ಉರುಸ್‌ಗೆ ಮತ್ತಷ್ಟು ಕಳೆಕಟ್ಟಿದಂತೆ ಕಾಣುತ್ತದೆ.

ಇಲ್ಲಿ ಉರುಸ್ ಪ್ರಾರಂಭ ಆಗಿನಿಂದ ಮುಗಿಯುವವರೆಗೂ ಪ್ರತಿದಿನ ಕಾರ್ಯಕ್ರಮವಿದ್ದು ಅದರಂತೆ ಸಾಮೂಹಿಕ ವಿವಾಹ, ದುಆಮಜ್ಲೀಸ್, ಉರುಸ್ ಸಮ್ಮೇಳನ ಧಾರ್ಮಿಕ ಪ್ರವಚನ, ಸೂಫಿ ಶಹೀದ್ ಮಖಾಂ, ಜುಮುಅತ್ ಹೀಗೆ ೫ ದಿನಗಳವರೆಗೂ ಅಲ್ಲಿ ಜನಸಾಗರ ಸೇರಿದ್ದು ಈ ಎಲ್ಲಾ ಕಾರ್ಯಕ್ರಮವನ್ನು ಬಹಳ ವ್ಯವಸ್ಥಿತವಾಗಿ ಅಲ್ಲಿನ ಸಮಿತಿಯು ನಿರ್ವಹಿಸುತ್ತದೆ. ಅಲ್ಲದೆ ಈ ಸಮಿತಿಯು ತಮ್ಮದೇ ಆದ ಹಣಕಾಸಿನ ವ್ಯವಹಾರವನ್ನು ಹೊಂದಿಂದ ಅಲ್ಲಿನ ಬಡ ವಿದ್ಯಾರ್ಥಿಗಳಿಗೆ

ಉಚಿತ ಶಾಲೆ, ಹಾಸ್ಟೆಲ್ ನಿರ್ಮಿಸಿ ಉಚಿತವಾಗಿ ಶಿಕ್ಷಣ ನೀಡುತ್ತಿರುವುದು ಮತ್ತೊಂದು ಸೇವೆಯ ಭಾಗವಾಗಿದೆ. ಅಲ್ಲದೇ ಈ ಉರುಸ್‌ನಲ್ಲಿ ಪ್ರತಿ ವರ್ಷ ಬಡಜನರಿಗಾಗಿ ಉಚಿತ ಸಾಮೂಹಿಕ ವಿವಾಹ ಏರ್ಪಡಿಸುವುದರಿಂದ ಇಲ್ಲಿನ ಸುತ್ತಮುತ್ತಲಿನ ಹಲವಾರು ಬಡಜನರಿಗೆ ಇದು ವರದಾನವಾಗಿದೆ.

**ವ್ಯಾಪಾರ ವ್ಯವಹಾರ**

ಕರ್ನಾಟಕದಾದ್ಯಂತ ಎಲ್ಲೆ ಜಾತ್ರೆ, ಉತ್ಸವ ಮತ್ತು ಉರುಸ್ ನಡೆಯುವ ಸ್ಥಳಗಳಲ್ಲಿ ಯಾವುದೇ ಕೊರತೆ ಇದ್ದರೂ ಅಲ್ಲಿನ ವ್ಯಾಪಾರ ವ್ಯವಹಾರಕ್ಕೆ ಯಾವುದೇ ಕೊರತೆ ಇರುವುದಿಲ್ಲ. ಅಂತೆಯೆ ಎಮ್ಮೆಮಾಡುವಿನಲ್ಲಿ ವರ್ಷಕ್ಕೊಮ್ಮೆ ಜರುಗುವ ಈ ಉರುಸ್‌ನಲ್ಲಿ ವ್ಯಾಪಾರ ವ್ಯವಹಾರದ ಭರಾಟೆ ತುಂಬಾ ಜೋರಾಗಿಯೇ ನಡೆಯುತ್ತದೆ. ಇಲ್ಲಿ ಎಲ್ಲಿ ಕಣ್ಣಾಯಿಸಿದರೂ ಸುಗಂಧದ್ರವ್ಯದ ಅಂಗಡಿಗಳು ಸಿಹಿ ತಿಂಡಿ ಅಂಗಡಿಗಳು, ಬಟ್ಟೆ ಅಂಗಡಿಗಳು, ಮಣ್ಣಿನ ಮಡಿಕೆಯ ಅಂಗಡಿಗಳು, ಎಲ್ಲೆಡೆ ತೆರೆದಿರುತ್ತಾರೆ. ಇಲ್ಲಿ ಸುತ್ತ ಮುತ್ತ ಬೆಳೆಯುವ ಹಣ್ಣು-ತರಕಾರಿಯನ್ನು ಸುತ್ತಮುತ್ತಲಿನ ರೈತರು ತಂದು ಮಾರುತ್ತಾರೆ. ಬೆಳಿಗ್ಗೆಯಿಂದ ರಾತ್ರಿ ಪೂರ ಹೋಟೆಲ್ಗಳದ್ದೇ ಕಾರುಬಾರು. ಹೀಗೆ ೫ ದಿನಗಳವರೆಗೂ ಇಲ್ಲಿ ಕೊಳ್ಳುವ ಹಾಗು ಮಾರುವವರಿಗೆ ಒಳ್ಳೆಯ ಸ್ಥಳವಾಗಿದೆ. ಒಟ್ಟಾರೆಯಾಗಿ ಹೇಳುವುದಾದರೆ ಕೊಡುಗು ಜಿಲ್ಲೆಯಲ್ಲಿ ನಡೆಯುವ ಉರುಸ್‌ಗಳ ಪೈಕಿ ಬಹು ಪ್ರಸಿದ್ಧವಾದ ಹಾಗೂ ವಿಭಿನ್ನವಾದ ಉರುಸ್ ಇದಾಗಿದೆ. ಮನುಷ್ಯರಿಗೆ ಹಾಗು ಪ್ರಾಣಿಗಳಿಗೆ ಕಷ್ಟ ಬಂದಾಗ ಅದನ್ನು ಪಾರು ಮಾಡುವ ಪುಣ್ಯಸ್ಥಳವಾಗಿ, ಹಲವಾರು ಧರ್ಮಗಳ ಸಾರವನ್ನು ಬಿತ್ತರಿಸುವ ಸ್ಥಳವಾಗಿದೆ. ಈ ಉರುಸ್‌ನ ಬಗ್ಗೆ ಮಾಹಿತಿ ನೀಡಿದವರು ಈ ಸಮಿತಿಯ ಅಧ್ಯಕ್ಷರಾದ ಉಸ್ಮಾನ್ ರವರು.

**ಕರ್ನಾಟಕದ ಸೂಫಿಸಂತರ ದರ್ಗಾಗಳು:**

೧. ಅಬ್ದುಲಿ ರಹಮಾನ್ ವಲಿಯಲ್ಲ – ನಾಪೋಕ್ಲು(ಮಡಿಕೇರಿ)

೨. ಅಬ್ದುಲ್ ರಹೀಮ್ ಖಾನಿ – ಕರಡ(ಮಡಿಕೇರಿ)

೩. ಅಬ್ದುಲ್ಲಾಶಾವಲಿ ಬಿ.ದುರ್ಗಾ – ಕರ್ಣಂಗೇರಿ (ಮಡಿಕೇರಿ)

೪. ಅಲಶಾ – ಮಡಿಕೇರಿ

೫. ಕೊಡಹಮಾರ ಶೇಕಮಾರ – ಅಂಬಟ್ಟಿ (ಮಡಿಕೇರಿ)

೬. ಪಠಾನ್ ಶಾವಲಿ – ಕುಂಜಲ ಪರಂಬು(ಮಡಿಕೇರಿ)

೭. ಪಯನರಿವಲಿ – ಕುಂಜಲ ಪರಂಬು(ಮಡಿಕೇರಿ)

೮. ಫಕೀರ್ ಉಲ್ಲಾ – ಹಾಕತ್ತೂರು(ಮಡಿಕೇರಿ)

೯. ಫರೇರ್ ಬಾಬಾ – ಗುಡಗಳಲೆ (ಸೋಮವರಪೇಟೆ)

೧೦. ಮಲಂಗ್ ಶಾಲಾಲಿ – ಗುಡಗಳಲೆ (ಸೋಮವರಪೇಟೆ)

೧೧. ಸಿಕಂದರ್ ಶಾವಲಿ – ಮಡಿಕೇರಿ

೧೨. ಸುಲ್ತಾನ್ ಅಲಿಶಾಮದನಿ – ಮಡಿಕೇರಿ

೧೩. ಸೂಪಿಶಹೀದ್ ಶಾವಲಿ – ಎಮ್ಮೆಮಾಡು(ಮಡಿಕೇರಿ)

೧೪. ಸೈಯದ್ ಉಲ್ಲಾ – ಕರ್ಣಂಗೇರಿ (ಮಡಿಕೇರಿ)

ಕೊಡಗಿನಲ್ಲಿರುವ ಈ ಮೇಲ್ಕಂಡ ದರ್ಗಾಗಳಲ್ಲಿ ಉರುಸ್‌ಗಳು ಜರುಗುತ್ತವೆ.

ಹೀಗೆ ಉರುಸ್ ಜಾತ್ರೆಗಳು ಸರ್ವಮತದ ಜನರು ಸೇರಿ ಆಚರಿಸುವ ಜಾತ್ರೆಗಳಾಗಿವೆ. ಇವು ಜನರಲ್ಲಿ ಉತ್ತಮ ಬಾಂಧವ್ಯ ಮತ್ತು ಭ್ರಾತೃತ್ವವನ್ನು ಬೆಸೆಯುವ ವೇದಿಕೆಗಳಾಗಿವೆ. ಜಾತ್ರೆ ದಿನ ಹೊರತಾಗಿಯೂ ಈ ಪ್ರದೇಶಗಳಿಗೆ ಎಲ್ಲಾ ಜಾತಿ ಮತ್ತು ಮತದ ಜನರು ಬಂದು ಪೂಜೆ ಕೈಗೊಳ್ಳುವ, ಹರಕೆ ತೀರಿಸುವ ಕಾರ್ಯಗಳನ್ನು ನೆರವೇರಿಸುತ್ತಾರೆ. ಇಂತಹ ಜಾತ್ರೆಯ ಸ್ಥಳಗಳನ್ನು ಎಲ್ಲಾ ಕೋಮಿನ ಜನರು ಸೇರುವ ಸ್ವರ್ಗದ ತಾಣಗಳೆಂದು ಹೇಳಿದರೆ ತಪ್ಪಾಗಲಾರದು.

ಒಟ್ಟಿನಲ್ಲಿ ಜಾತ್ರೆಗಳನ್ನು ಅವುಗಳ ಸ್ವರೂಪಕ್ಕನುಗುಣವಾಗಿ ಹಲವು ವಿಧಗಳಾಗಿ ವಿಂಗಡಿಸಿ

ವಿದ್ವಾಂಸರು ಅಧ್ಯಯನ ಮಾಡಿದ್ದಾರೆ. ಐತಿಹಾಸಿಕ ಜಾತ್ರೆಗಳು, ಮತ್ತು ಪೌರಾಣಿಕ ಜಾತ್ರೆಗಳು ಎಂದು ಡಾ.ಜಗನ್ನಾಥ ಹೆಬ್ಬಾಳೆಯವರು ವರ್ಗೀಕರಿಸಿದ್ದಾರೆ ಪ್ರಸ್ತುತ ಹೆಚ್ಚುತ್ತಿರುವ ಜನರ ಬೇಡಿಕೆಗಳಿಗನು ಗುಣವಾಗಿ ಮತ್ತು ಅಲ್ಲಿಯ ಸಾಮಾಜಿಕ ಸನ್ನಿವೇಶಕ್ಕನಗುಣವಾಗಿ ಮೂಲ ಜಾತ್ರೆಯ ಒಂದು ಭಾಗವಾಗಿ ವಿವಿಧ ಬಗೆಯ ಜಾತ್ರೆಗಳು ಆಚರಣೆಗೊಳ್ಳುತ್ತಿವೆ. ಪ್ರಸ್ತುತ ದಿನಗಳಲ್ಲಿ ವಿಭಿನ್ನ ರೀತಿಯಲ್ಲಿ ಜಾತ್ರೆಗಳು ಸಾಮಾಜಿಕ ಪರಿವರ್ತನೆಗೆ ಒಳಗಾಗುತ್ತಿವೆ.

ಮೋಜನ್ನು ಕೇಂದ್ರಬಿಂದುವಾಗುಳ್ಳ ಮೋಜಿನ ಜಾತ್ರೆಗಳಲ್ಲಿ ಜನರಿಗೆ ಸಂತೋಷವನ್ನುಂಟು ಮಾಡುವ ದೃಷ್ಟಿಯಿಂದ ಪ್ರಾಣಿ ಪಕ್ಷಿಗಳನ್ನು ಕ್ರೀಡೆಗಾಗಿ ಸ್ಪರ್ಧೆಗಳಲ್ಲಿ ಬಳಸಿಕೊಳ್ಳಲಾಗುತ್ತಿತ್ತು. ಪ್ರಸ್ತುತ ಈ ಬಗೆಯ ಜಾತ್ರೆಗಳಲ್ಲಿ ಪ್ರಾಣಿ ಪಕ್ಷಿಗಳ ಜಾನಪದ ಕ್ರೀಡಾ ಸ್ಪರ್ಧೆಯು ಮೋಜಿಗಾಗಿ ಇರದೆ ಹಣಗಳಿಸುವ ದಂದೆಯಾಗಿ ಮಾರ್ಪಟ್ಟಿವೆ. ಪ್ರಕೃತಿ ಯಲ್ಲಿ ಸ್ವತಂತ್ರವಾಗಿ ಜೀವಿಸುತ್ತಿದ್ದ ಪ್ರಾಣಿಪಕ್ಷಿಗಳು ಇಂದು ಮನುಷ್ಯನ ಇಚ್ಚೆಯನ್ನು ಈಡೇರಿಸುವ ಕೈಗೊಂಬೆಗಳಾಗಿ ವರ್ತಿಸುವಂತಾಗಿದೆ. ಇದು ಬದಲಾದ ಜಾತ್ರೆಯ ಸ್ವರೂಪವನ್ನು, ಸಾಮಾಜಿಕ ವ್ಯವಸ್ಥೆಯನ್ನು ಹಾಗೂ ಮಾನವನ ಸ್ವಭಾವವನ್ನು ಸೂಚಿಸುತ್ತದೆ. ಇದು ಆಧುನಿಕ ಜೀವನ ಶೈಲಿಯ ಶ್ರಮರಹಿತ ದುಡಿಮೆಯನ್ನು ಅನುಕರಿಸುತ್ತದೆ.

ವಸ್ತುಪ್ರದರ್ಶನದ ಜಾತ್ರೆಗಳಲ್ಲಿ ಈ ಹಿಂದೆ ಆಯಾ ಸಮಾಜದ ಗುಡಿಕೈಗಾರಿಕೆಗಳಿಂದ ತಯಾರಿಸಿದ ಕರಕುಶಲ ವಸ್ತುಗಳನ್ನು ಪ್ರದರ್ಶನಕ್ಕಿಟ್ಟು ರಿಯಾಯಿತಿ ದರದಲ್ಲಿ ಮಾರಾಟ ಮಾಡಲಾಗುತ್ತಿತ್ತು.

ಮಣ್ಣಿನಿಂದ ತಯಾರಿಸಿದ ಮಡಿಕೆ ಕುಡಿಕೆಗಳು, ಉಡುಗೆ ತೊಡುಗೆಗಳ , ನೇಲುವು – ನೇಗಿಲುಗಳು, ಮಕ್ಕಳ ಆಟಿಕೆಯ ಸಾಮಾನುಗಳು ಇತ್ಯಾದಿ. ಇಂದು ವಸ್ತುಪ್ರದರ್ಶನದ ಜಾತ್ರೆಗಳು ಹಳ್ಳಿಯ ಜನರ ಕರಕುಶಲ ಕೌಶಲ್ಯಗಳನ್ನು ಕಡೆಗಣಿಸಿ ಯಂತ್ರೋತ್ಪಾದನೆಯ ವಸ್ತುಪ್ರದರ್ಶನದ ಜಾತ್ರೆಗಳಾಗಿ ಮಾರ್ಪಟ್ಟಿವೆ. ಇದರಿಂದಾಗಿ ಜನರು ನವೀನತೆಯ ವಸ್ತುಗಳಿಗೆ ಮಾರುಹೋಗಿ ಗ್ರಾಮೀಣ ಸಮುದಾಯ ಗುಡಿಕೈಗಾರಿಕೆಗಳು ಮೂಲೆಗುಂಪಾಗುತ್ತಿವೆ. ಇದಕ್ಕೆ ಪ್ರಧಾನ ಕಾರಣ ಆಧುನಿಕತೆ. ಮಣ್ಣಿನ ಮಡಿಕೆ ಕುಡಿಕೆಗಳ ಜಾಗದಲ್ಲಿ ಸ್ಟೀಲು, ಸಿಲ್ವರ್, ತಾಮ್ರ, ಕಂಚು ಹಾಗೂ ಪ್ಲಾಸ್ಟಿಕ್ ಉಪಯೋಗಿಸಿ ಯಂತ್ರಗಳಿಂದ ತಯಾರಿಸಿದ ಚಂಬು, ತಟ್ಟೆ, ಲೋಟ, ಪಾತ್ರೆ ಪಗಡಗಳು, ನೇಯ್ಗೆಯಿಂದ ತಯಾರಿಸಿದ ಉಡುಪುಗಳಿಗೆ ಬದಲಾಗಿ ಯಂತ್ರಗಳಿಂದ ತಯಾರಿಸಿದ ವಿವಿಧ ವಿನ್ಯಾಸದ ಉಡುಪುಗಳು ಹಾಗೂ ಸ್ತ್ರೀಯರ ಸೌಂದರ್ಯವರ್ಧಕ ವಸ್ತುಗಳು, ಗೃಹಾಲಂಕಾರಿಕ ವಸ್ತುಗಳು ಇತ್ಯಾದಿ ವಸ್ತುಪ್ರದರ್ಶನದ ಜಾತ್ರಾ ಪ್ರದೇಶವನ್ನಾವರಿಸಿವೆ.

ದನದ ಜಾತ್ರೆಗಳು ಹಿಂದೆ ಕಡಿಮೆ ಪ್ರಮಾಣದಲ್ಲಿ ಜನರನ್ನು ಆಕರ್ಷಿಸುತ್ತಿದ್ದವು. ಏಕೆಂದರೆ ದೂರದ ಜಾತ್ರಾ ಪ್ರದೇಶಕ್ಕೆ ಕಾಲ್ನಡಿಗೆಯಲ್ಲಿ ನಡೆದು ಬರಬೇಕಾಗಿತ್ತು. ಹಾಗಾಗಿ ಹೆಚ್ಚು ದನಗಳಾಗಲಿ, ಜನರಾಗಲಿ ಸೇರುವುದು ಕಷ್ಟವಾಗುತ್ತಿತ್ತು. ಅದರೂ ಈ ಬಗೆಯ ಜಾತ್ರೆಗಳು ರೈತರ ಅಗತ್ಯತೆಗಳನ್ನು ಈಡೇರಿಸುತ್ತಿದ್ದವು. ಆರ್ಥಿಕ ಅಂಶವನ್ನೇ ಪ್ರಧಾನವಾಗಿರಿಸದೆ ಸಾಟಿ ವಿನಿಯಮಯ ನಡೆಯುತ್ತಿತ್ತು. ಇಂದು ಈ ಬಗೆಯ ಜಾತ್ರೆಗಳು ರೈತರ ಅಗತ್ಯತೆಗಳನ್ನು ಈಡೇರಿಸುವ ಬದಲಿಗೆ ವ್ಯವಹಾರಿಕವಾಗಿ ಕಟುಕರ ಅಗತ್ಯತೆಗಳನ್ನು ಈಡೇರಿಸುವ ತಾಣಗಳಾಗುತ್ತಿವೆ. ಸಾಟಿ ವಿನಿಮಯ ಕಣ್ಮರೆಯಾಗಿ ಜನರ ಸಾಮಾಜಿಕ ಸಂಬಂಧಗಳು ಶಿಥಿಲಗೊಳ್ಳುತ್ತಿವೆ. ಅಲ್ಲದೆ ಕೃಷಿಯಲ್ಲಿನ ಜಾನುವಾರುಗಳ ಸ್ಥಾನವನ್ನು ಯಂತ್ರೋಪಕರಣಗಳು ಆಕ್ರಮಿಸುತ್ತಿವೆ.

ಶಿಷ್ಟ ಹಾಗೂ ಗ್ರಾಮೀಣ ದೇವರ ಜಾತ್ರೆಗಳು ದೈವಭಕ್ತಿ ಹಾಗೂ ನೈತಿಕತೆಯ ಪ್ರತೀಕವಾಗಿದ್ದವು. ಆಧುನೀಕರಣದ ಪ್ರಭಾವದಿಂದಾಗಿ ಈ ಜಾತ್ರಾ ಸ್ಥಳಗಳು ಢಾಂಬಿಕ ಭಕ್ತಿ ಹಾಗೂ ದರ್ಪ ಶ್ರೀಮಂತಿಕೆ ತೋರ್ಪಡಿಸುವ ಜನರ ತಾಣಗಳಾಗುತ್ತಿವೆ. ಅಲ್ಲದೆ ಜಾತ್ರಾ ಪ್ರದೇಶಗಳಲ್ಲಿ ಜೋಡೆತ್ತಿನ ಗಾಡಿಗಳ ಸ್ಥಳದಲ್ಲಿ ಮೋಟಾರು ಸೈಕಲ್, ಆಟೋರಿಕ್ಷ, ಟೆಂಪೋ, ಟ್ರ್ಯಾಕ್ಟರ್, ಕಾರು, ಬಸ್ಸು, ಇತ್ಯಾದಿಗಳು ಸಾಗರದೋಪಾದಿಯಲ್ಲಿ ಸೇರುತ್ತಿವೆ.

ಈ ಮೇಲ್ಕಂಡ ಅಂಶಗಳಿಂದ ಜಾತ್ರೆಯ ವಿಧಗಳ ಮೂಲ ಸ್ವರೂಪದಲ್ಲಿ ಸಾಕಷ್ಟು ಬದಲಾವಣೆಗಳಾಗುತ್ತಿವೆ ಎಂಬುದು ದೃಢಪಡುತ್ತದೆ. ಜಾತ್ರೆಗಳು ಸ್ವರೂಪದಲ್ಲಿ ಬದಲಾವಣೆಗಳು ಆಗುತ್ತಿರುವುದಷ್ಟೆ ಅಲ್ಲದೇ ಜನರ ಸಾಮಾಜಿಕ ಜೀವನ ಕ್ರಮದಲ್ಲೂ ಸಾಕಷ್ಟು ಪರಿವರ್ತನೆಗಳಾಗಿವೆ. ಇದಕ್ಕೆ ಆಧುನಿಕತೆ ಕಾರಣವೆಂದು ಹೇಳಬೇಕಾಗಿಲ್ಲವಷ್ಟೆ.

## ಅಡಿ ಟಿಪ್ಪಣಿ

೧. ಹೈದರಾಬಾದ ಕರ್ನಾಟಕದ ಜಾತ್ರೆಗಳು – ಒಂದು ಸಾಂಸ್ಕೃತಿಕ ಅಧ್ಯಯನ– ಜಗನ್ನಾಥ ಹೆಬ್ಬಾಳೆ, ಸತ್ಯಶ್ರೀಪ್ರಿಂಟರ್ಸ್ – ಬೆಂಗಳೂರು ೨೦೦೮, ಪುಟ –೧೬

೨. ಕೋಲಾರ ಜಿಲ್ಲೆಯ ಜಾತ್ರೆಗಳು – ಒಂದು ಅಧ್ಯಯನ – ಸಿ.ಎಂ.ಗೋವಿಂದ ರೆಡ್ಡಿ ಮೈಸೂರು ವಿ.ವಿ.ಗೆ ಸಲ್ಲಿಸಿದ ಪಿಹೆಚ್‌ಡಿ ಮಹಾಪ್ರಬಂಧ ಪುಟ –೭೫

೩. ತುಮಕೂರುಜಿಲ್ಲೆಯ ಜಾತ್ರೆಗಳು – ಗ್ರಾಮರಾಮ ಸಂಸ್ಕೃತಿ ಮಾಲೆ –೭ – ಚಿಕ್ಕಣ್ಣ ಯಣ್ಣೆಕಟ್ಟೆ, ಕನ್ನಡ ಪುಸ್ತಕ ಪ್ರಾಧಿಕಾರ ಸಿವಿಜಿ ಪಬ್ಲಿಕೇಷನ್ ಬೆಂಗಳೂರು –೨೦೦೩ ಪುಟ–೮

೪. ಅದೇ ಪುಟ–೮

೫. ಕೋಲಾರ ಜಿಲ್ಲೆಯ ಜಾತ್ರೆಗಳು ಒಂದು ಅಧ್ಯಯನ ಸಿ.ಎಂ.ಗೊವಿಂದರೆಡ್ಡಿ ಮೈಸೂರು ವಿವಿಗೆ ಸಲ್ಲಿಸಿದ ಮಹಾ ಪ್ರಬಂಧ ೨೦೦೪ –ಪುಟ ೭೭

೬. ಅದೇ ಪುಟ –೭೮

೭. ಸಂಕ್ಷಿಪ್ತ ಕನ್ನಡ ನಿಘಂಟು – ಕನ್ನಡ ಸಾಹಿತ್ಯ ಪರಿಷತ್ತು – ಬಿ.ಎಂ.ಶ್ರೀ ಅಚ್ಚುಕೂಟ ಆಫ್‌ಸೆಟ್, ಬೆಂಗಳೂರು೨೦೧೦ ಪುಟ ೧೬೦

೮. ಅದೇ ಪುಟ ೧೯೬

೯. ಅದೇಪುಟ ೬೨೭

೧೦. ಕೋಲಾರಜಿಲ್ಲೆಯ ಜಾತ್ರೆಗಳು ಒಂದು ಅಧ್ಯಯನ – ಸಿ.ಎಂ.ಗೋವಿಂದರೆಡ್ಡಿ ಮೈಸೂರು ವಿ.ವಿ.ಗೆ ಸಲ್ಲಿಸಿದ ಮಹಾಪ್ರಬಂಧ ೨೦೦೪ ಪುಟ ೧೮೮

೧೧. ಕರಗಶಕ್ತಿ ನೃತ್ಯ ಸಾಧನೆ – ಕೆ.ಎಸ್.ರಾಮಮೂರ್ತಿ, ಬೆಂಗಳೂರು ವಿವಿ ಪುಟ ೧೧೬

೧೨. ಕೋಲಾರ ಜಿಲ್ಲೆಯ ಜಾತ್ರೆಗಳು ಒಂದು ಅಧ್ಯಯನ ಸಿ.ಎಂ.ಗೋವಿಂದರೆಡ್ಡಿ ಮೈಸೂರು ವಿವಿಗೆ ಸಲ್ಲಿಸಿದ ಮಹಾಪ್ರಬಂಧ ೨೦೦೪ ಪುಟ ೨೪೬

೧೩. ಕರಗ ಸಂಪ್ರದಾಯ ಸುಮಿತ್ತ ಪುರ ೭೪

೧೪. ಕನ್ನಡ ರತ್ನಕೋಶ – ಹಾ.ಮಾ.ನಾಯಕ (ಪ್ರ.ಸಂ)ಸರ್ಕಾರಿ ಮುದ್ರಣಾಲಯ, ಬೆಂಗಳೂರು ೧೯೯೪, ಪುಟ ೪೦

೧೫. ಕರಗ ಸಂಪ್ರದಾಯ, ಸುಮಿತ್ರ ಪು ೫೩

೧೬. ಬೆಂಗಳೂರು ಕರಗ – ಎಸ್.ಕೆ.ರಾಮಚಂದ್ರರಾವ್ ಪುಟ ೩೯

೧೭. ಕೋಲಾರ ಜಿಲ್ಲೆಯ ಜಾತ್ರೆಗಳು ಒಂದು ಅಧ್ಯಯನ, – ಸಿ.ಎಂ.ಗೋವಿಂದರೆಡ್ಡಿ, ಮೈಸೂರು ವಿ.ವಿಗೆ ಸಲ್ಲಿಸಿದ ಮಹಾಪ್ರಬಂಧ ೨೦೦೪ ಪುಟ ೨೪೯

೧೮. ಅದೇ ಪುಟ ೨೫೦

೧೯. ಅದೇ ಪುಟ ೧೮೬

## ಅಧ್ಯಾಯ–೬

# ಜಾತ್ರೆಗಳ ಸಾಂಸ್ಕೃತಿಕ ದೃಷ್ಟಿಕೋನ

೬.೧ ಸಾಂಪ್ರದಾಯಿಕ ವಿಧಿ ಆಚರಣೆಗಳು

೬.೨ ಮತಾಚರಣೆಗಳು

೬.೩ ಸಂಘಟನಾ ಕಾರ್ಯ

೬.೪ ಸಮಷ್ಟಿಯ ಹಿತರಕ್ಷಣಾ ಪ್ರವೃತ್ತಿ

೬.೫ ಸಾಮಾಜಿಕ ಹೊಣೆಗಾರಿಕೆ

೬.೬ ನೈತಿಕ ಪ್ರಜ್ಞೆ ಮೂಡಿಸುವುದು

೬.೭ ಸಾಂಸ್ಕೃತಿಕತೆ

೬.೮ ಆರ್ಥಿಕತೆ

೬.೯ ರಾಜಕೀಯತೆ

೬.೧೦ ಮನರಂಜನೆ

ಅಧ್ಯಾಯ–೬

# ಜಾತ್ರೆಗಳ ಸಾಂಸ್ಕೃತಿಕ ದೃಷ್ಟಿಕೋನ

ಜಾತ್ರೆ ಅಲೌಕಿಕ ಉದ್ದೇಶವನ್ನು ಒಳಗೊಂಡಿದೆ. ಇದು ಜನರ ನೈತಿಕತೆಯನ್ನು ಎತ್ತಿ ಹಿಡಿಯುತ್ತದೆ. ಈ ಕಾರಣಕ್ಕಾಗಿಯೇ ಗ್ರಾಮೀಣ ಸಮುದಾಯದ ಜನಸಾಮಾನ್ಯರ ಜೀವನದ ಅವಿಭಾಜ್ಯ ಅಂಗವಾಗಿದೆ. ಜಾತ್ರೆಗಳಲ್ಲಿ ವ್ಯಾಪಾರಿ ಚಟುವಟಿಕೆಗಳು ಬಿರುಸಿನಿಂದ ಸಾಗುತ್ತವೆ. ಜನರು ಬರುವುದು ಭಕ್ತಿ ಸಮರ್ಪಣೆಗೆ, ಇದಕ್ಕೆ ಜಾತ್ರೆಗಳ ಹಿಂದೆ ಇರುವ ಮತವಾದ ಭಾವನಾತ್ಮಕ ಹಿನ್ನೆಲೆಯೇ ಕಾರಣ. ಸುಗ್ಗಿ ಮುಗಿದ ನಂತರ ಜಾತ್ರೆಗಳು ನಡೆಯುತ್ತವೆ. ''ನಿರಂತರ ದುಡಿಮೆಯ ಯಾಂತ್ರಿಕ ಬದುಕಿನಲ್ಲಿ ರೈತರ ದಣಿವನ್ನು ಮರೆಸುವ ಇಂತಹ ಸಾಂಸ್ಕೃತಿಕ ಉತ್ಸವದ ಪರಿಕಲ್ಪನೆಯನ್ನು ನಮ್ಮ ಪೂರ್ವಿಕರು ಮಾಡಿದ್ದು ಒಂದು ಅಮೃತಗಳಿಗೆ''[೧] ಎಂಬ ಟಿ.ಆರ್.ಮಹದೇವಯ್ಯ ಅವರ ಮಾತು ಜಾತ್ರೆಗಳು ವಿಶ್ರಾಂತಿಯ ಜೊತೆಗೆ ಮನರಂಜನೆಯನ್ನು ಒದಗಿಸುತ್ತವೆ ಎಂಬುದನ್ನು ತಿಳಿಸುತ್ತದೆ. ಜಾತ್ರೆಗಳು ಜನಸಾಮಾನ್ಯರ ಸೇವಾಕೇಂದ್ರಗಳಾಗಿ ಕಾರ್ಯನಿರ್ವಹಿಸುವುದರ ಜೊತೆಗೆ ಸಮುದಾಯದ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ವಿಶಿಷ್ಟತೆಗಳಲ್ಲಿ ವಿಶೇಷತೆಯನ್ನು ಮೈಗೂಡಿಸಿಕೊಂಡಿರುವ ಸಾಧನಗಳಾಗಿವೆ.

ಜಾತ್ರೆಗಳು ಸಮಾಜದ ಪ್ರತಿಯೊಬ್ಬ ವ್ಯಕ್ತಿಯ ಸಾಮಾಜಿಕ ಅವಶ್ಯಕತೆಗಳ ಈಡೇರಿಕೆಯ ಜೀವಂತ ಸಾಧನಗಳಾಗಿವೆ. ಚಲನಶೀಲ ಸಮಾಜದ ಪ್ರಧಾನ ಅಂಶಗಳಾದ ವ್ಯಕ್ತಿ, ಸಮಷ್ಠಿ, ಭಾವೈಕ್ಯತೆ, ಮತಿತ್ವ, ಅಧ್ಯಾತ್ಮಿಕತೆ, ರಕ್ಷಣೆ, ವಿಶ್ರಾಂತಿಯ ಜೊತೆಗೆ ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ಹಾಗೂ ಮನರಂಜನೆಯಂತಹ ವಿಭಿನ್ನ ಮೂಲಭೂತ ಅವಶ್ಯಕತೆಗಳನ್ನು ಒದಗಿಸುತ್ತವೆ. ''ಜಾತ್ರೆಗೆ ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಮುಖಗಳಿವೆ''[೨] ಎಂದಿರುವ ಹಂಪ ನಾಗರಾಜಯ್ಯ ಅವರ ಮಾತು ಜಾತ್ರೆಗಳ ಅನೇಕ ಕಾರ್ಯವಿಶೇಷತೆಗಳಿಗೆ ಪುಷ್ಟಿ ನೀಡುತ್ತದೆ.

ಭಾರತೀಯ ಸಮಾಜದಲ್ಲಿ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಜಾತ್ರೆಗಳು ಆಚರಣೆಯಲ್ಲಿವೆ. ಕರ್ನಾಟಕದಲ್ಲಿ ಸಂಸ್ಕೃತಿಯ ಪ್ರಕಟಿತ ರೂಪಗಳಾಗಿ ಜಾತ್ರೆಗಳು ದಿನನಿತ್ಯವೂ ಆಚರಣೆಯಲ್ಲಿವೆ. ಸಾಮಾಜಿಕ ಉಪಯುಕ್ತತೆಗಳನ್ನು ಒದಗಿಸುವಲ್ಲಿ ಜಾತ್ರೆಗಳ ಆಚರಣೆಯ ಸಾರ್ಥಕತೆಯಿದೆ. ''ಜಾತ್ರೆಗಳ ಆಚರಣೆಯಲ್ಲಿ ಧಾರ್ಮಿಕ, ಶೈಕ್ಷಣಿಕ, ಹಾಗೂ ಸಂಸ್ಕೃತಿ ಮೌಲ್ಯಗಳಿವೆ''[೩] ''ಬರಡೆನಿಸುವ ಶ್ರಮಜೀವನದಲ್ಲಿ

ಸಂತಸದ ಕಾರಂಜಿಯನ್ನು ಪುಟಿಸುವ ಶಾಂತಿಮಂತ್ರ ಬೋಧಿಸುವ ಜಾತ್ರೆಗಳು ಜನರಿಗೆ ಜೀವಧಾತುವನ್ನು ಒದಗಿಸುತ್ತವೆ. ಅವರು ಮೌಲ್ಯಾರಾಧಕ ರಾಗುವಂತೆ ಮಾಡುತ್ತವೆ"[೪] ಮನೆಯ ಯೋಗಕ್ಷೇಮವನ್ನು ನೋಡಿಕೊಳ್ಳಲು ತಾಯಿ ಇರುವಂತೆ ಊರಿನ ಯೋಗಕ್ಷೇಮವನ್ನು ನೋಡಿಕೊಳ್ಳಲು ದೇವರು ಇರಬೇಕೆಂಬ ಹಿನ್ನೆಲೆಯಲ್ಲಿ ಎಲ್ಲಾ ಸಮಾಜಗಳಲ್ಲಿ ದೇವರ ಜಾತ್ರೆಗಳು ನಡೆಯುತ್ತಿವೆ. ಈ ಕಾರಣಕ್ಕಾಗಿಯೇ ಜಾತ್ರೆಗಳ ಕುರಿ ತಾದ ಅಧ್ಯಯನವೆಂದರೆ ಅಲ್ಲಿನ ಜನ ಸಮುದಾಯಗಳ ಅಧ್ಯಯನ ಎಂದಾಗುತ್ತದೆ. ಈ ಬಗೆಯ ಅಧ್ಯಯನದಲ್ಲಿ ಸಮಾಜದ ಮೂಲ ಬೇರುಗಳಂತಿರುವ ನಂಬಿಕೆ ಮತ್ತು ದೇವರ ಕಲ್ಪನೆ ಕುರಿತಾಗಿ ತಿಳಿಯುತ್ತೇವೆ. ದೇವರನ್ನು ಕುರಿತಾದ ಜಾತ್ರೆಯು ಜನರ ಬಾಹ್ಯ ನಡ ವಳಿಕೆಯ ಜೀವನವನ್ನು ನಿಯಂತ್ರಿಸಿದರೆ, ದೇವರ ಕಲ್ಪನೆ ಜನರ ಆಂತರ್ಯದಲ್ಲಿ ಕಾರ್ಯ ನಿರ್ವಹಿಸುತ್ತದೆ. ಒಟ್ಟಾರೆ ಹಲವು ಆಶಯಗಳನ್ನೊಳಗೊಂಡ ಜಾತ್ರೆಯ ವಿವಿಧ ಕಾರ್ಯಗಳನ್ನು ಈ ರೀತಿ ತಿಳಿಯಬಹುದು.

- ಸಾಂಪ್ರದಾಯಿಕ ವಿಧಿ ಆಚರಣೆಗಳು
- ಮತಾಚರಣೆಗಳು
- ಸಂಘಟನಾ ಕಾರ್ಯ
- ಸಮಷ್ಟಿಯ ಹಿತರಕ್ಷಣಾ ಪ್ರವೃತ್ತಿ
- ಸಾಮಾಜಿಕ ಹೊಣೆಗಾರಿಕೆ
- ನೈತಿಕ ಪ್ರಜ್ಞೆ ಮೂಡಿಸುವುದು
- ಸಾಂಸ್ಕೃತಿಕತೆ
- ಆರ್ಥಿಕತೆ
- ರಾಜಕೀಯತೆ
- ಮನರಂಜನೆ

## ೬.೧ ಸಾಂಪ್ರದಾಯಿಕ ವಿಧಿ ಆಚರಣೆಗಳು

ಸಮಾಜದ ಸಾಂಪ್ರದಾಯಿಕ ನಿಯಮಗಳಿಗನುಗುಣವಾಗಿ ಜಾತ್ರೆಗಳು ನಡೆಯುತ್ತವೆ. ಜಾತ್ರೆಯ ಸಮಯದಲ್ಲಿ ವ್ಯಕ್ತಿಗಳು ಹೇಗೆ ನಡೆದುಕೊಳ್ಳಬೇಕು ಎಂಬುದನ್ನು ಸಂಪ್ರದಾಯಗಳು ತಿಳಿಸುತ್ತವೆ. ಅಲ್ಲದೆ ಜಾತ್ರೆಯಲ್ಲಿ ವ್ಯಕ್ತಿಯ ವರ್ತನೆಯನ್ನು ಸಂಪ್ರದಾಯಗಳು ನಿಯಂತ್ರಿಸುತ್ತವೆ. ಹಿರಿಯರಿಂದ ನಡೆದುಬಂದ ವಿಧಿ ನಿಯಮಗಳಿಗೆ ಅನುಗುಣವಾಗಿ ಜಾತ್ರೆಯ ಕಾರ್ಯಗಳು ನಡೆಯಲು ಸಂಪ್ರದಾಯಗಳು ಪೋಷಕವಾಗಿವೆ. ಸಮಾಜವು ಹಾಕಿಕೊಟ್ಟ ಜೀವನದ ವಿಧಿವಿಧಾನ ಮತ್ತು

ಆಚರಣೆಗಳ ಮೊತ್ತವೆ ಸಂಪ್ರದಾಯವಾಗಿದೆ. ಜಾತ್ರೆಯ ಸಮಯದಲ್ಲಿ ಸಮಾಜ ಒಪ್ಪಿತ ಆಚರಣಾ ವಿಧಾನಗಳನ್ನು ಸಂಪ್ರದಾಯಗಳು ನಿರ್ಧರಿಸುತ್ತವೆ. ಸಾಂಪ್ರದಾಯಿಕ ಆಚರಣೆಗಳು ಸಮುದಾಯ ಜಾತ್ರೆಗಳ ಸಮಯದಲ್ಲಿ ಪುನರಾವರ್ತನೆಗೊಳ್ಳುತ್ತವೆ. ಸಂಪ್ರದಾಯಗಳು ಜಾತ್ರೆಗಳ ಸಮಯದಲ್ಲಿನ ವಿಧಿ ವಿಧಾನಗಳ ಆಚರಣೆಯ ಮಾರ್ಗಸೂಚಿಗಳಾಗಿವೆ. ಜಾತ್ರೆಯ ವಿಧಿ ವಿಧಾನಗಳನ್ನು ಪೀಳಿಗೆಯಿಂದ ಪೀಳಿಗೆಗೆ ಸಾಗಿಸುವ ಕಾರ್ಯವನ್ನು ಸಂಪ್ರದಾಯಗಳು ನೆರವೇರಿಸುತ್ತವೆ. ಸಮಾಜದ ಪ್ರತಿಯೊಬ್ಬ ವ್ಯಕ್ತಿಯು ಜಾತ್ರೆಯ ಸಮಯ ದಲ್ಲಿ ಸಂಪ್ರದಾಯಬದ್ಧವಾಗಿ ನಡೆದುಕೊಳ್ಳುತ್ತಾನೆ. ಇಂತಹ ಸಂಪ್ರದಾಯಗಳು ಪ್ರತಿ ಸಾಮಾ ಜಿಕ ವ್ಯವಸ್ಥೆಯ ಅವಿಭಾಜ್ಯ ಅಂಗಗಳಾಗಿ ಅಸ್ತಿತ್ವದಲ್ಲಿವೆ. ಜಾತ್ರೆಯ ಸಮಯದಲ್ಲಿ ಆಚರಣೆಯಲ್ಲಿರುವ ಪ್ರಮುಖ ಸಾಂಪ್ರದಾಯಕ ವಿಧಿ ಆಚರಣೆಯ ಕಾರ್ಯಗಳೆಂದರೆ, ಹರಕೆ, ಸಿಡಿ, ಬೇವಿನುಡಿಗೆ, ಬಾಯಿಬೀಗ, ಉರುಳು ಸೇವೆ, ಕೆಂಡಹಾಯುವುದು, ತೇರು ಎಳೆಯುವುದು, ಆರತಿ ಸೇವೆ, ಬೆತ್ತಲ ಸೇವೆ, ಕುಲದೇವತಾ ಪದ್ಧತಿ, ವಂಶಪಾರಂಪರ್ಯ ಪೂಜಾರಿಕೆ, ವ್ರತಾಚರಣೆ , ಕುರಿ ಕೋಣಗಳ ಬಲಿ, ಮೊದಲಾದ ಸಾಂಪ್ರದಾಯಕ ಆಚರಣೆಗಳನ್ನು ನೆರವೇರಿಸುವ ಕಾರ್ಯಗಳು ಜಾತ್ರೆಯ ಸಮಯದಲ್ಲಿ ಕಂಡುಬರುತ್ತವೆ. " ನಮ್ಮ ಪೂರ್ವಿಕರು ಜಾತ್ರೆಯ ಪರಿಕಲ್ಪನೆಗೆ ಒತ್ತುಕೊಟ್ಟು ಅದನ್ನು ಕಾಲೋಚಿತಗೊಳಿಸುತ್ತಾ ಬರುತ್ತಿರುವ ಎಲ್ಲಾ ಜಾತ್ರೆಗಳ ವ್ಯವಸ್ಥೆಗೆ ನಾವೆಲ್ಲಾ ಋಣಿಯಾಗಿರಬೇಕು."[೫]

## ೬.೨ ಮತಾಚರಣೆಗಳು

ಜಾತ್ರೆಯ ಕುರಿತಾದ ಮತಾಚರಣೆಯ ಕಾರ್ಯಗಳು ಪುರಾತನವಾದವುಗಳು ಮತ್ತು ಸಾರ್ವತ್ರಿಕ ವಾದವುಗಳು. ಎಲ್ಲಾ ಸಮಾಜಗಳಲ್ಲೂ ಆಚರಣೆಯಲ್ಲಿರುವ ಜಾತ್ರೆಗಳು ಮತಾಚರಣೆಯ ಕಾರ್ಯ ಸಾಧನೆಯ ಉದ್ದೇಶವನ್ನು ಒಳಗೊಂಡಿದೆ. ದೇವರನ್ನು ಕುರಿತಾಗಿ ಜನರಲ್ಲಿರುವ ನಂಬಿಕೆಯೇ ಮತ. ನಿಸರ್ಗದ ಪ್ರತಿಯೊಂದು ಕ್ರಿಯೆಯನ್ನು ನಿಯಂತ್ರಿಸುವ ಮತ್ತು ನಿರ್ದೇಶಿಸುವ ಶ್ರೇಷ್ಠ ಶಕ್ತಿಯನ್ನು ಹಾಗೂ ತಮಗೆ ಯಾವುದೇ ಅಪಾಯವನ್ನು ಕೊಡದಂತೆ ರಕ್ಷಿಸು ಎಂದು ಪೂಜಿಸುವಂತಹ ಪರಿಪಾಠ ಬೆಳೆಸಿಕೊಂಡ ನಂಬಿಕೆಯಲ್ಲಿ ಮತ, ದೇವರು, ಜಾತ್ರೆಯ ಆಚರಣೆಗಳು ಅಸ್ತಿತ್ವಕ್ಕೆ ಬಂದಿದೆ.

ತಮ್ಮ ಇಷ್ಟ ದೇವರುಗಳನ್ನು ಸಂತೃಪ್ತಿಗೊಳಿಸುವುದರಿಂದ ತಮ್ಮ ಇಷ್ಟಾರ್ಥಗಳು ಸಿದ್ಧಿಯಾಗುತ್ತವೆ ಎಂಬ ಭಾವನೆ ಜನರಲ್ಲಿ ಅಪಾರವಾಗಿದೆ. ಈ ಕಾರಣಕ್ಕಾಗಿ ಜನರು ಜಾತ್ರೆಯ ಸಮಯದಲ್ಲಿ ಕಟ್ಟುನಿಟ್ಟಿನ ನಿಯಮಗಳನ್ನು ಪಾಲಿಸುತ್ತಾರೆ. ಅಲ್ಲದೆ ತನು, ಮನ, ಧನ, ಶ್ರದ್ಧಾಪೂರ್ವಕ ಭಕ್ತಿಗಳಿಂದ ಮತ ಪೂಜಾಕಾರ್ಯಗಳಲ್ಲಿ ಭಾಗಿಯಾಗುತ್ತಾರೆ. ಸಾಮಾಜಿಕ ಜನಜೀವನದ ಮೇಲೆ ಮತ್ತು ದೇವರ ಪ್ರಭಾವ ಮಹತ್ವದ್ದಾಗಿದೆ. ಜನರು ಜಾತ್ರೆಯ ಸಮಯದ ದಾಸೋಹ ಕಾರ್ಯ, ಪಾನಕ, ನೀರು, ಮಜ್ಜಿಗೆ, ಮೊದಲಾದುವುಗಳನ್ನು ಭಕ್ತರಿಗೆ ಉಚಿತವಾಗಿ ಹಂಚುವ ಕಾರ್ಯದಲ್ಲಿ ಭಾಗಿಯಾಗುವ

ಮೂಲಕ ತಮ್ಮ ಭಕ್ತಿಯನ್ನು ಸಮರ್ಪಿಸುತ್ತಾರೆ. ಗ್ರಾಮೀಣ ಪ್ರದೇಶಗಳಲ್ಲಿ ಗುಡಿಗಳಲ್ಲದೆ ಯಾವುದೇ ಶುಭಕಾರ್ಯಗಳು ನಡೆಯುವುದಿಲ್ಲ. ಉತ್ತಮ ಆರೋಗ್ಯ, ಭಯಾನಕ ಕಾಯಿಲೆಗಳಿಂದ ರಕ್ಷಣೆ, ಮೊದಲಾದ ಕಾರ್ಯಗಳ ನಿಮಿತ್ತ ಸಮುದಾಯದ ಜನರು ಒಂದುಗೂಡಿ ಉತ್ಸಾಹದಿಂದ ಜಾತ್ರೆಯ ಕಾರ್ಯಗಳಲ್ಲಿ ಭಾಗಿಯಾಗಿರುತ್ತಾರೆ. ಜಾತ್ರೆಯ ಸನ್ನಿವೇಶಗಳು ಮಾನವ ಮತವನ್ನು ಸಾರುವ ಕಾಯಕವನ್ನು ಸಮರ್ಥವಾಗಿ ನಿರ್ವಹಿಸಿಕೊಂಡು ಬಂದಿವೆ.

"ಧರ್ಮ ಎಂದರೆ ಧಾರಣಾತ್ ಧರ್ಮ ಸಮಾಜವನ್ನು ಅಂದರೆ ಜನರನ್ನು ಯಾವ ವಸ್ತು ಸಂರಕ್ಷಿಸುವುದೋ, ಒಳಗೊಳ್ಳುವುದೋ ಅದೇ ಧರ್ಮವಾಗುವುದು. ಇಲ್ಲಿ ಧರ್ಮವೆಂದರೆ ಪೂಜೆ ಮಾಡುವುದು, ಸ್ತುತಿಸುವುದು, ಭಜನೆ ಮಾಡುವುದು, ಹರಕೆ ಹೊರುವುದು, ಬಲಿಕೊಡುವುದು, ಉಪವಾಸವಿರುವುದು, ಜನರನ್ನು ಆಚಾರ, ವಿಚಾರ, ಊಟ, ಉಡುಗೆ, ಆನಂದ ಸಂಭ್ರಮಗಳಿಂದ ಸಂರಕ್ಷಿಸುವುದು, ಬೆಳೆಸುವುದು ಹೀಗೆ ಇಂತಹ ಅನಂತ ಚಟುವಟಿಕೆಗಳನ್ನು ಒಳಗೊಂಡ ಮೊತ್ತವೇ ಧರ್ಮ. ದೇವಿಯ ಜಾತ್ರೆ, ಉತ್ಸವ ಪೂಜಾ ಕಾರ್ಯಗಳನ್ನು ಮಾಡುವಾಗ ಎಲ್ಲರೂ ಸೇರಿ ಕೆಲಸಗಳನ್ನು ಹಂಚಿಕೊಂಡು ಆಚರಿಸುವಾಗ ಸೌಹಾರ್ದ, ಸಹಕಾರ, ಸಹಿಷ್ಣುತಾ, ಭಾವನೆಗಳಿಂದ, ಧರ್ಮದ ಪ್ರಮುಖ ಅಂಗಗಳಾದ ಪ್ರೀತಿ, ಪ್ರೇಮ, ವಿಶ್ವಾಸ , ಸಹಾಯ, ಸಹಕಾರ, ದಯಾಗುಣಗಳು ಹುಟ್ಟಿಕೊಳ್ಳಲು ಕಾರಣವಾದವು. ಸಂಜೆ ಮಲಗುವಾಗ, ಮುಂಜಾನೆ ಏಳುವಾಗ ದೇವರನ್ನು ನೆನೆಯುವುದರಿಂದ, ಪ್ರತಿವಾರಕ್ಕೆ, ಹಬ್ಬ ಹುಣ್ಣಿಮೆಗೆ , ದೇವರ ಜಾತ್ರೆ ಆಚರಿಸುವುದರಿಂದ ಪ್ರತಿವರ್ಷಕ್ಕೆ ಬರುವ ಉತ್ಸವದಲ್ಲಿ ಪಾಲ್ಗೊಂಡು ಹೊತ್ತ ಹರಕೆ ಮಾಡತೊಡಗುವುದರಿಂದ ಧರ್ಮದ ಶಿಖರಗಳಾದ ಕರ್ಮ, ಭಕ್ತಿ, ತ್ಯಾಗ, ವೈರಾಗ್ಯ, ಜ್ಞಾನ, ನಂಬಿಕೆಗಳು, ಸಂಸ್ಕೃತಿಯ ಬೇರಾಗಿ ನಿಂತುಕೊಂಡವು"[೬] ಎಂಬ ಚೆನ್ನಣ್ಣವಾಲೀಕಾರ ಅವರ ಮಾತುಗಳು ಜಾತ್ರೆಗಳ ಧಾರ್ಮಿಕ ಕಾರ್ಯಗಳನ್ನು ಸ್ಪಷ್ಟಪಡಿಸುತ್ತವೆ. "ಜಾತ್ರೆಯ ಸಮಯದಲ್ಲಿ ಈ ಧಾರ್ಮಿಕ ಭಾವನೆ ಜಾತ್ರೆಗಳ ಆಚರಣೆಗಳ ವಿಧಿವಿಧಾನಗಳಲ್ಲಿ ಪ್ರಕಟಗೊಳ್ಳುತ್ತದೆ"[೭] ಎಂಬ ಸಿ.ಎಂ.ಗೋವಿಂದರೆಡ್ಡಿಯವರ ಮಾತು ಜಾತ್ರೆಗಳು ಮತಕಾರ್ಯಸಾಧನೆಯ ಉದ್ದೇಶವನ್ನು ಒಳಗೊಂಡಿರುತ್ತದೆ ಎಂಬುದನ್ನು ತಿಳಿಸುತ್ತದೆ.

## ೬.೩ ಸಂಘಟನಾ ಕಾರ್ಯ

ಜಾತ್ರೆಯು ಸಮುದಾಯದ ಜನರನ್ನು ವ್ಯವಸ್ಥಿತವಾಗಿ ಒಂದುಗೂಡಿಸುವ ಕಾರ್ಯವನ್ನು ಮಾಡುತ್ತದೆ. ಈ ಸಮಯದಲ್ಲಿ ಜನರು ತಮ್ಮ ಎಲ್ಲಾ ಬಗೆಯ ಭೇದಭಾವಗಳನ್ನು, ದ್ವೇಷ, ಅಸೂಯೆ, ಸ್ವಾರ್ಥ ಮನೋಭಾವ ಮೊದಲಾದವುಗಳಿಂದ ಹೊರತಾಗಿ ಪ್ರೀತಿ, ವಿಶ್ವಾಸ, ಮಮತೆ, ವಾತ್ಸಲ್ಯಗಳಿಂದೊಡಗೂಡಿ ದೇವತಾಕಾರ್ಯದ ಯಶಸ್ವಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಾರೆ. ದೇವರ ಜಾತ್ರೆ ಪವಿತ್ರವೆಂಬ ಭಾವನೆ ಜನರಲ್ಲಿರುವುದೇ ಇದಕ್ಕೆ ಪ್ರಮುಖ ಕಾರಣವಾಗಿದೆ. ಜಾತ್ರೆಯ

ಸಮಯದಲ್ಲಿ ಜಾತಿ,ಮತ, ಪಂಥ, ಪಂಗಡ, ವರ್ಣ, ವರ್ಗ ಭೇದವಿಲ್ಲದೆ ಸಮುದಾಯದ ಎಲ್ಲಾ ಜನರು ಸಾಮರಸ್ಯದಿಂದೊಡಗೂಡಿ ದೇವರ ಕಾರ್ಯಗಳನ್ನು ಭಕ್ತಿಭಾವದಿಂದ ನೆರವೇರಿಸುತ್ತಾರೆ. “ದೇವರಸೇವೆ ಎಂಬ ಹೆಸರಿನಲ್ಲಿ ಪರಸ್ಪರ ಸಹಕಾರ ಧನ್ಯತೆಯ ಭಾವದ ಜೊತೆ ಜೊತೆಗೆ ಗ್ರಾಮಾಭ್ಯುದಯದ ಕನಸು ಕೂಡಿರುತ್ತದೆ”[೮] ಎಂಬ ಚಿಕ್ಕಣ್ಣಯಣ್ಣೆಕಟ್ಟೆ ಅವರ ಮಾತು ಸಮಾಜದ ಸಂಘಟನೆಯ ಕಾರ್ಯವನ್ನು ಜಾತ್ರೆಗಳು ನಿರ್ವಹಿಸುತ್ತವೆ ಎಂದು ತಿಳಿಸುತ್ತವೆ.

“ಮೊದಲು ಪಶುಗಳಂತಿದ್ದ ಜನ ದೇವರ ಪೂಜೆ, ಉತ್ಸವಗಳಲ್ಲಿ ಸೇರಿ ಕೆಲಸ ಮಾಡತೊಡಗಿದ ಮೇಲೆ ತಾವೆಲ್ಲ ಒಂದೇ ಗುಂಪಿಗೆ ಸೇರಿದವರೆಂಬ ಸಂಘಟನಾ ಮನೋಭಾವ ಅವರಲ್ಲಿ ಬೆಳೆಯಿತು. ಗ್ರಾಮ ದೇವರುಗಳ ಆಚಾರ ವಿಚಾರ, ನೀತಿ ನಿಯಮ, ಕಟ್ಟುಪಾಡು ಅವರನ್ನು ಐಕ್ಯತೆಯ ಸೂತ್ರದಲ್ಲಿ ಬಂಧಿಸಿತು. ದೇವರ ಉತ್ಸವದಲ್ಲಿ ಕೂಡಿಮಾಡುವುದೇ ಬದುಕಿನಲ್ಲಿ ಒಂದುಗೂಡಿ ದುಡಿಯುವ, ಉಣ್ಣುವ, ಆಡುವ, ಕುಣಿಯುವ, ಬಾಳುವ ಸಂಘಟನಾ ಮನೋಭಾವ ಅವರಲ್ಲಿ ಬಂತು”[೯] ಎಂಬ ವಾಲೀಕಾರರ ಮಾತು ಜಾತ್ರೆಗಳು ಸಾಮಾಜಿಕ ಸಾಮರಸ್ಯ ಮತ್ತು ಸಾಮಾಜಿಕ ಐಕ್ಯತೆಯ ಕಾರ್ಯದಲ್ಲಿ ಜನರನ್ನು ತೊಡಗಿಸು ತ್ತವೆ ಎನ್ನುವ ಅಂಶವನ್ನು ಮನವರಿಕೆ ಮಾಡಿಸುತ್ತದೆ. ದಾಸೋಹ ಮತ್ತು ರಥ ಎಳೆಯುವ ಕಾರ್ಯದಲ್ಲಿ ಜನರು ಲಿಂಗಭೇದ, ಜಾತಿ ಭೇದ ಮರೆತು ಒಂದುಗೂಡುತ್ತಾರೆ.

## ೬.೪ ಸಮಷ್ಟಿಯ ಹಿತರಕ್ಷಣಾ ಪ್ರವೃತ್ತಿ

ಜಾತ್ರೆಗಳ ಆಚರಣೆಯಲ್ಲಿ ಕೇವಲ ವೈಯಕಿಕ ಹಿತಕರರಕ್ಷಣೆ ಮಾತ್ರ ಅಡಗಿದೆ ಸಮಷ್ಟಿಯ ಹಿತವೂ ಅಡಗಿದೆ. ಇಡೀ ಗ್ರಾಮಕ್ಕೆ ಒಳ್ಳೆಯದೇ ಆಗುತ್ತದೆ ಎಂಬ ದೂರದೃಷ್ಟಿ ಇದೆ. ಒಂದು ನೆಲೆಯಲ್ಲಿ ವಾಸಿಸುವ ಜನರೆಲ್ಲ ಮಳೆ ಬೆಳೆ ಚೆನ್ನಾಗಿ ಆಗಲೆಂದು ತಮ್ಮ ದನಕರುಗಳು ವೃದ್ಧಿಸಲೆಂದು, ಇಷ್ಟದೈವದ ಮೊರೆ ಹೋಗುತ್ತಾರೆ. ಇವರ ಕೋರಿಕೆಯಂತೆ ಎಲ್ಲವೂ ನೆರವೇರಿದಾಗ ಮಾನವನ ಮನಸ್ಸು ಸಂತುಷ್ಟಗೊಂಡು, ಇದಕ್ಕೆ ತಾವು ನಂಬಿದ ದೈವವೇ ಕಾರಣವೆಂದು ಇಡೀ ಸಮುದಾಯದ ಜನರು ಅದರ ಆರಾಧನೆಯ ಕಾರ್ಯದಲ್ಲಿ ಪಾಲ್ಗೊಂಡು ತಮ್ಮ ಋಣ ತೀರಿಸುತ್ತಾರೆ.

ಜಾತ್ರೆಯ ಸಮಯದಲ್ಲಿ ಜರುಗುವ ಮನರಂಜನಾ ಕಾರ್ಯಗಳು ಸಮಾಜಕ್ಕೆ ತಿಳುವಳಿಕೆ, ಮಾರ್ಗದರ್ಶನ ನೀಡುತ್ತವೆ. ಇದರಿಂದಾಗಿ ಸಾಮಾಜಿಕ ಸಂಬಂಧಗಳು ಸಂಕುಚಿತತೆಯಿಂದ ಹೊರಬಂದು, ಸಾಮಾಜಿಕ ಸಾಮರಸ್ಯಗೊಂಡು ಸಮುದಾಯದ ಅಭಿವೃದ್ಧಿಯಾಗುತ್ತದೆ. ಸಾಮೂಹಿಕ ಕಷ್ಟಗಳ ನಿವಾರಣೆಗೆ ಮಾನವ ಹಿಂದಿನಿಂದಲೂ ಎಲ್ಲಾ ಸಮಾಜಗಳಲ್ಲೂ ದೈವದ ಮೊರೆ ಹೋಗುತ್ತಿರುವುದು ಕಟು ಸತ್ಯ. ದೇವರ ಅನುಗ್ರಹದಿಂದ ಸಾಮಾಜಿಕ ದುಷ್ಟಶಕ್ತಿಗಳು ದಮನವಾಗಿ, ಸಮುದಾಯದ ಜನರ ಕಷ್ಟಗಳು ನಿವಾರಣೆಯಾಗಿ, ಸುಖ, ಶಾಂತಿ, ಸಂಪತ್ತು, ಸಮೃದ್ಧಿಯಾಗಿ

ಮಾನವ ಕಲ್ಯಾಣವಾಗಿದೆ. ಈ ನಂಬಕೆಯ ಹಿನ್ನೆಲೆಯಲ್ಲಿ ಬಲಿಕೊಡುವ ಪದ್ಧತಿ ಜಾರಿಗೊಂಡಿದೆ.

"ಪ್ರಕೃತಿ ವೈಚಿತ್ರ್ಯಗಳಿಂದ ತಮ್ಮನ್ನು ಉಳಿಸಲು, ಕಾಡುಪ್ರಾಣಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು, ಭೂತಪ್ರೇತಗಳ ಭಯದಿಂದ, ಸಾವು ನೋವಿನ ಭೀತಿಯಿಂದ ಪಾರಾಗಲು ಶಕ್ತಿಸ್ವರೂಪ ದೇವರುಗಳ ಮೊರೆ ಹೋಗಿದ್ದಾರೆ" ಇಲ್ಲಿ ವೈಯಕ್ತಿಕ ಹಿತರಕ್ಷಣೆಗಿಂತ ಸಮಷ್ಟಿಯ ಹಿತರಕ್ಷಣೆ ಮುಖ್ಯವಾಗಿದೆ ಎಂಬುದು ವೇದ್ಯವಾಗುತ್ತದೆ"[೧೦] ಬುಡಕಟ್ಟು ಜನಾಂಗಗಳೂ ಒಕ್ಕಲುತನದ ಶೋಧನೆಯ ನಂತರ ಒಂದೆಡೆ ಸೇರಿ ಕಟ್ಟಿಕೊಂಡ ಗ್ರಾಮಗಳ ರಕ್ಷಣೆಗಾಗಿ ದೇವರುಗಳನ್ನು ಸ್ಥಾಪಿಸಿದರು."[೧೧] ಎಂಬ ಮಾತಿನಲ್ಲಿ ಸಮಷ್ಟಿಯ ಹಿತವೇ ಪ್ರಧಾನವಾಗಿದೆ. ಅಲ್ಲದೆ ಇಂದಿಗೂ ಈ ಕಲ್ಪನೆ ಮುಂದುವರೆದು ಬಂದಿದೆ.

## ೬.೫ ಸಾಮಾಜಿಕ ಹೊಣೆಗಾರಿಕೆ

ಜಾತ್ರೆಗಳು ಆಯಾ ಊರಿನ ಹೆಸರಿನಿಂದಲೇ ಕರೆಯಲ್ಪಡುತ್ತವೆ. ಊರಿನ ಎಲ್ಲಾ ಜನಾಂಗದವರು ಮತ್ತು ಸುತ್ತಮುತ್ತಲ ಊರಿನ ಅನೇಕರು ಜಾತ್ರೆಗಳಲ್ಲಿ ಸೇರುವುದರಿಂದ ಬದುಕಿನ ಏಕತಾನತೆಯನ್ನು ಮರೆತು ಜನರು ನಲಿಯುತ್ತಾರೆ. ಜನಸಾಮಾನ್ಯರ ಸಾಮಾಜಿಕ ಸೇವಾ ಕೇಂದ್ರಗಳಾಗಿ ಜಾತ್ರೆಗಳು ಕಾರ್ಯ ನಿರ್ವಹಿಸುತ್ತವೆ. ಜಾತ್ರೆಗಳಿಂದ ವಿವಿಧ ಸಮುದಾಯಗಳ ಮಧ್ಯೆ ಸಾಮಾಜಿಕ ಸಂಫರ್ಕವೇರ್ಪಟ್ಟು ಸಾಮಾಜಿಕ ಪರಿವರ್ತನೆಗೂ ಕಾರಣವಾಗುತ್ತದೆ. ಜಾತ್ರೆಗಳಲ್ಲಿ ವಿಭಿನ್ನ ವೇಷಭೂಷಣಗಳಿಂದ ಅಲಂಕೃತಗೊಂಡ ಹೆಂಗಸರು, ಗಂಡಸರು, ಮಕ್ಕಳು ಸೇರಿರುತ್ತಾರೆ. ಸಮಾಜದ ವೈವಿಧ್ಯತೆ ಮುಖಗಳ ಅಧ್ಯಯನಕ್ಕೆ ಜಾತ್ರೆ ಒಂದು ವೇದಿಕೆಯನ್ನು ಒದಗಿಸುತ್ತದೆ. ಸಾಮಾಜಿಕ ವ್ಯವಸ್ಥೆಗೆ ಅನುಗುಣವಾಗಿ ಜಾತ್ರೆಯಲ್ಲಿ ದೇವರಗುಡಿ, ರೀತಿ–ನೀತಿ, ಆಚಾರ–ವಿಚಾರ, ಮೊದಲಾದ ಕಾರ್ಯಗಳು ನಡೆಯುತ್ತವೆ. ಜಾತ್ರೆಗಳು ಬಂಧು–ಬಾಂಧವರನ್ನು, ಮಿತ್ರರನ್ನು ಒಂದುಗೂಡಿಸುವ ಕಾರ್ಯವನ್ನು ಮಾಡುತ್ತವೆ. ಜಾತ್ರೆಯಲ್ಲಿ "ಸೂಕ್ಷ್ಮವಾಗಿ ಗಮನಿಸುತ್ತ ಹೋದರೆ ವಿಚಿತ್ರ ಜನ, ವಿಲಕ್ಷಣ ಪ್ರಸಂಗಗಳೂ, ನಮಗೆ ಕಾಣಸಿಗುತ್ತವೆ. ಕುತೂಹಲಿಗಳಾದ ಚಿಣ್ಣರು, ಗ್ರಾಮೀಣ ಸೊಗಡಿದ ಮುಗ್ಧ ಹೆಣ್ಣುಮಕ್ಕಳು, ವ್ಯವಹಾರ ಕುಶಲ ವ್ಯಾಪಾರಿಗಳು, ಭಕ್ತ ಸಂಪನ್ನ ನಿಜಭಕ್ತರು,, ಸೇವಾ ಮನೋಭಾವದ ಯುವಜನ, ಪ್ರದರ್ಶನ ಪ್ರಿಯರಾದ ಶೋಕಿಲಾಲರು, ಸಮಯ ಸಾಧಕರು, ಎಷ್ಟೊಂದು ವೈವಿಧ್ಯ! ಜಾತ್ರೆಗೆ ನೆರೆದ ಜನರಲ್ಲಿದೆ"[೧೨] ಹೀಗೆ ವಿಭಿನ್ನ ಜಾತಿ, ವರ್ಗ, ಬುಡಕಟ್ಟು ಜನಸಮುದಾಯಗಳನ್ನು ಒಂದೇ ನೆಲೆಯಲ್ಲಿ ಸೇರಿಸುವಂತೆ ಮಾಡುವ ಜಾತ್ರೆಗಳ ಪಾತ್ರ ಮಹತ್ವದ್ದು. "ಮನುಷ್ಯನಿಂದ ಹುಟ್ಟಿದ ದೇವರು ಮನುಷ್ಯನ ಇಡೀ ಬದುಕನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಸಾಮಾಜಿಕ ಸ್ವಾಸ್ಥ್ಯ ಕಾಪಾಡಿಕೊಂಡು ಬಂದದ್ದು"[೧೩] ಜಾತ್ರೆಯ ಪ್ರಮುಖ ಕಾರ್ಯಗಳಲ್ಲಿ ಒಂದಾಗಿದೆ.

ಜಾತ್ರೆಗಳು ಸಮಾಜದ ಮಾನವ ಸಹಜವಾದ ಎಲ್ಲಾ ಸಾಮಾಜಿಕ ಬಯಕೆಗಳನ್ನು ಈಡೇರಿಸುತ್ತವೆ. "ಮಕ್ಕಳಿಗೆ ಮನರಂಜನೆ, ಸಿಹಿತಿಂಡಿ, ಆಟಿಕೆಗಳ ಲಾಭ, ಪ್ರೇಮಿಗಳಿಗೆ ಉಲ್ಲಾಸದ

ಸಂಭ್ರಮ, ವೃದ್ಧರಿಗೆ ದೇವರ ದರ್ಶನದಿಂದ ಪುಣ್ಯಪ್ರಾಪ್ತಿಯ ತೃಪ್ತಿ ಹೀಗೆ ಗ್ರಾಮದ ಒಗ್ಗಟ್ಟು ಸಮಗ್ರತೆ, ಅಭಿಮಾನ ಜಾತ್ರೆಗಳಲ್ಲಿ ಜಾಗೃತವಾಗುತ್ತದೆ. ಜಾತ್ರೆಯ ನೆಪದಿಂದ ಬಂಧುಬಾಂಧವರು ಒಟ್ಟಿಗೆ ಸೇರಿ, ಪರಸ್ಪರ ಕಷ್ಟಸುಖಗಳನ್ನು ಹಂಚಿಕೊಳ್ಳುವರು, ಹೊಸಬರ ಜೊತೆಯಲ್ಲಿ ಸ್ನೇಹ, ಸೌಹಾರ್ದ ಬೆಸೆಯುಲು ಜಾತ್ರೆ ಅನುಕೂಲ ವಾತಾವರಣವನ್ನು ಕಲ್ಪಿಸುತ್ತದೆ''[೧೪] ಡಾ.ಸಿ.ಎಸ್.ಶಿವಕುಮಾರಸ್ವಾಮಿ ಅವರ ಮಾತಿನಲ್ಲಿ ಜಾತ್ರೆಗಳು ಸಮಾಜ ಕಲ್ಯಾಣ ಕಾರ್ಯೋದ್ದೇಶವನ್ನು ಒಳಗೊಂಡಿದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಜಾತ್ರೆಗಳ ಸಮಯದಲ್ಲಿ ''ಎಲ್ಲ ಜಾತಿ ವರ್ಗದವರೂ ತಾರತಮ್ಯಭಾವವಿಲ್ಲದೆ ಬೇರೆ ದೇವತೆಗಳಿಗೆ ಸಲ್ಲಿಸಬೇಕಾದ ಸೇವೆಗಳನ್ನು ಸಲ್ಲಿಸುತ್ತಾರೆ. ಜಾತ್ರೆಗಳಲ್ಲಿನ ತೇರೆಳೆಯುವಿಕೆ, ಅನ್ನ ಸಂತರ್ಪಣೆ, ಪಾನಕ ಸೇವೆ ಮುಂತಾದ ಕಾರ್ಯಕ್ರಮಗಳು ಎಲ್ಲರನ್ನೂ ಒಂದುಗೂಡಿಸಿ ಸಾಂಘಿಕ ಬದುಕು ಸಾಗಿಸುವತ್ತ ಪ್ರೇರಣೆ ನಿಡುತ್ತವೆ.''[೧೫] ಎಂಬ ಸಿ.ಎಂ.ಗೋವಿಂದರೆಡ್ಡಿ ಅವರ ಮಾತು ಜಾತ್ರೆಗಳ ಪ್ರಮುಖ ಕಾರ್ಯ ಸಾಮಾಜಿಕ ಸಾಮರಸ್ಯ ಮತ್ತು ಸಾಮಾಜಿಕ ಐಕ್ಯತೆ ಮೂಡಿಸುವುದೇ ಆಗಿದೆ. ವಧುವರರ ಆಯ್ಕೆಯ ವೇದಿಕೆಗಳಾಗಿಯು ಸಾಮಾಜಿಕ ಅವಶ್ಯಕತಗಳನ್ನು ಪೂರೈಸುವ ಕೆಲಸವನ್ನು ಜಾತ್ರೆಗಳು ಸಮರ್ಪಕವಾಗಿ ನಿರ್ವಹಿಸಿಕೊಂಡು ಬಂದಿದೆ.

## ೬.೬ ನೈತಿಕ ಪ್ರಜ್ಞೆ ಮೂಡಿಸುವುದು

ಜಾತ್ರೆಯ ಕ್ರಿಯಾವಿಧಿ ವಿಧಾನಗಳು ಸಮಾಜ ಒಪ್ಪಿತ ನಿಯಮದಂತೆ ಕಾರ್ಯನಿರ್ವ

ಹಿಸುತ್ತವೆ. ಸಮಾಜ ಒಪ್ಪಿತ ಕಾರ್ಯ ವಿಧಾನವೇ ನೈತಿಕತೆ. ಜಾತ್ರೆಯ ಆಚರಣೆಯು ಸಮಾಜ ಒಂದರಲ್ಲಿ ಭದ್ರವಾಗಿ ನೆಲೆಗೊಳ್ಳಲು, ಆ ಸಮಾಜದ ನೈತಿಕತೆಗೆ ಅನುಗುಣವಾಗಿ ನಡೆಯುವುದೇ ಕಾರಣವಾಗಿದೆ. ಜಾತ್ರೆಯ ಸಮಯದಲ್ಲಿನ ನೈತಿಕ ಕಾರ್ಯವಿಧಾನಗಳನ್ನು ಆ ಸಮಾಜದ ಬಹುದಿನಗಳ ಅನುಭವದ ಫಲಶೃತಿಯಾಗಿರುತ್ತವೆ. ಜಾತ್ರೆಯ ಸಮಯದಲ್ಲಿ ಆಚರಿಸಲ್ಪಡುವ ಕೆಲವು ಮೌಲ್ಯಗಳನ್ನು ತಮ್ಮ ಜೀವನದ ವಿಧಿ ನಿಯಮಗಳಾಗಿ ವಿಧಿಸಿ ಕೊಳ್ಳುವ ಇಚ್ಚೆಯನ್ನು ಹೊಂದುವ ಅಂಶಗಳೇ ನೈತಿಕತೆ. ಜಾತ್ರೆಗಳನ್ನು ಆಚರಿಸುವುದರಿಂದ ವ್ಯ ಕ್ತಿಯ ಜೀವನ ಮೌಲ್ಯಯುತವಾಗುತ್ತದೆ ಎಂದು ಜನ ನಂಬುತ್ತಾರೆ. ಜಾತ್ರೆಯ ಆಚರಣೆಯ ಸಮಯದಲ್ಲಿ ಜನರ ನಡವಳಿಯನ್ನು ನಿರ್ಧರಿಸುವ ಮತ್ತು ತಪ್ಪಿ ನಡೆದಾಗ ಅವರ ವರ್ತನೆ ಯನ್ನು ನಿಯಂತ್ರಿಸುವ ಕಾರ್ಯವೆ ನೈತಿಕ ಪ್ರಜ್ಞೆ ಮೂಡಿಸುವ ಕಾರ್ಯವಾಗಿದೆ.

ಅಂಬಳಿಕೆ ಹಿರಿಯಣ್ಣನವರು''ಜಾತ್ರೆಗಳ ನಿಜವಾದ ಕಾರ್ಯವೆಂದರೆ ಜನರಲ್ಲಿ ನೈತಿಕ ಪ್ರಜ್ಞೆ ಮೂಡಿಸಿ, ಶೀಲ–ವರ್ತನೆಗಳು ಉತ್ತಮಗೊಳ್ಳುವಂತೆ ಮಾಡಿ, ಬದುಕಿಗೆ ಭರವಸೆಯ ಸ್ಫೂರ್ತಿಯನ್ನು ಒದಗಿಸಿ, ಜಡತೆಯನ್ನು ಹೋಗಲಾಡಿಸಿ, ಅವರನ್ನು ಜಾಗೃತ ಗೊಳಿಸುವುದೇ ಆಗಿದೆ.''[೧೬] ಎಂದು

ಹೇಳಿದ್ದಾರೆ.  ಸಾಮಾಜಿಕ ಸಾಮರಸ್ಯವನ್ನು ಸಾಧಿಸಲು ಕೆಲವು ಅಂಶಗಳನ್ನು ತರಬಲ್ಲ ಸಮಾಜ ಒಪ್ಪಿತ ಜನಪ್ರಿಯ ಪದ್ದತಿ ಮತ್ತು ಪರಂಪರೆಗಳ ನಂಬಿಕೆ ಹಾಗೂ ಆಚರಣೆಗಳ ಮೊತ್ತವೇ  ನೈತಿಕ ಪ್ರಜ್ಞೆಯ ಕಾರ್ಯ.

ಜಾತ್ರೆಯ ಆಚರಣೆಯನ್ನು ಈ ಜಾತಿಯವರೇ ಮಾಡಬೇಕು. ಈ ವಂಶದವರಿಂದಲೇ ಈ ಕಾರ್ಯನಡೆಯ ಬೇಕೆಂಬ ಪಾರಂಪರಿಕ ಕಾರ್ಯವಿಧಾನವನ್ನು ಅನುಸರಿಸಿ ನಡೆಯುವುದು ನ್ಯಾಯ – ಅನ್ಯಾಯ, ಸರಿ–ತಪ್ಪು, ಒಳಿತು –ಕೆಡುಕುಗಳನ್ನು ನಿರ್ಧರಿಸುವ ಕಾರ್ಯವನ್ನು ನೈತಿಕ ಪ್ರಜ್ಞೆಯ ಕಾರ್ಯನಿರ್ವಹಿಸುತ್ತದೆ.  ಇದು ಸಮೂಹದ ಜನಜೀವನದ ಮೌಲ್ಯಗಳನ್ನುನಿರ್ಧರಿಸುತ್ತದೆ.

## ೬.೭ ಸಾಂಸ್ಕೃತಿಕತೆ

ಜಾತ್ರೆಯ ಸಮಯದಲ್ಲಿ ಸಾಂಸ್ಕೃತಿಕ ಕಾರ್ಯಗಳು ಮತ, ಸಾಮಾಜಿಕ, ಆರ್ಥಿಕ ಆಯಾಮಗಳೊಡನೆ, ಸೇರಿಕೊಂಡಿವೆ. ಜಾತ್ರೆಯ ಹಿಂದಿರುವ ಸಾಂಸ್ಕೃತಿಕ ಅನನ್ಯತೆಯ ಕುರುಹುಗಳಾಗಿ ಆಯಾ ಸಮಾಜದಲ್ಲಿರುವ ಗುಡಿ ಗೋಪುರಗಳು, ಮಠಮಾನ್ಯಗಳು ಕಾರ್ಯನಿರ್ವಹಿಸುತ್ತಿವೆ.  ಜಾತ್ರೆಗಳ ಅಂಗವಾಗಿ ಏರ್ಪಡುವ ಸಾಂಸ್ಕೃತಿಕ ಕಾರ್ಯದಲ್ಲಿ ಸಮಾಜದ ಆರೋಗ್ಯವೃದ್ಧಿ, ಮಾನಸಿಕ ಶಾಂತಿ ಮತ್ತು ನೆಮ್ಮದಿ ಹಾಗೂ ಸಕಲೈಶ್ವರ್ಯಗಳು ಅಡಕವಾಗಿವೆ. ಸಮುದಾಯವೊಂದರ ಭಕ್ತಿಭಾವಗಳು, ರೀತಿ–ನೀತಿಗಳು ಮತ್ತುಹರಕೆಗಳು ಜಾತೆಯ ಸಮಯದಲ್ಲಿ ಸಾಂಸ್ಕೃತಿಕ ಅಂಶಗಳಾಗಿ ಕಾರ್ಯಗತಗೊಳ್ಳುತ್ತವೆ. ಸಮುದಾಯದ ಸಂಸ್ಕೃತಿಯ ಕ್ರೌರ್ಯದ ಮುಖಗಳೆಂಬಂತೆ ಬಸವಿ ಪದ್ಧತಿ, ಬೆತ್ತಲಸೇವೆಗಳಂತಹ ಸಾಮಾಜಿಕ ಅನಿಷ್ಟ ಪದ್ದತಿಗಳ ಆಚರಣೆಗೂ ಜಾತ್ರೆ ವೇದಿಕೆಯಾಗಿದೆ.

"ಜಾತ್ರೆಗಳು ಸಾಂಸ್ಕೃತಿಕ ಮೌಲ್ಯಗಳ ಪುನರ್‌ಸ್ಥಾಪನೆಗೆ ಪ್ರಯತ್ನಪಡುತ್ತವೆ. ಜಾತ್ರೆ ಗಳಲ್ಲಿ ಆಚರಣೆಗಳು ಹೀಗೆಯೇ ನಡೆಯಬೇಕು, ಇಂತವರೇ ಸೇವೆ ಸಲ್ಲಿಸಬೇಕು ಎಂಬ ನಿರ್ಬಂಧಗಳ ಹಿನ್ನಲೆಯಲ್ಲಿ ಅಂದಿನ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ಹಾಗೆಯೇ ಉಳಿಸಿಕೊಂಡು ಮುಂದಿನ ತಲೆಮಾರಿಗೆ ಸಾಗಿಸುವ ಕಾರ್ಯವನ್ನು ಕಾಣಬಹುದು.  ಜಾತ್ರೆಗಳಲ್ಲಿ ಮನರಂಜನೆ ಕಾರ್ಯಕ್ರಮಗಳು, ಕಲಾಪ್ರದರ್ಶನಗಳೂ, ಸಾಮಾಜಿಕ ಸಂಘಟನೆಗಳು, ಧಾರ್ಮಿಕ ಆಚರಣೆಗಳು ಮುಂತಾದ ಬಹುಮುಖಿ ಲಕ್ಷಣಗಳಿಂದಾಗಿ ಜಾತ್ರೆಗಳಿಗೆ ಸಾಂಸ್ಕೃತಿಕ ಮಹತ್ವ ಲಭಿಸಿದೆ. ಜಾತ್ರೆಗಳ ಬೀಜಾಶಯಗಳು, ಕ್ರಿಯಾವಿಧಿ, ಆಚರಣೆಗಳು, ಅಸಾಂಗತ್ಯ ಮೌಢ್ಯಗಳು, ಸಾದೃಶ್ಯ ವೈದೃಶ್ಯಗಳು. ಅವುಗಳ ವೈಶಿಷ್ಟ್ಯಗಳು  ಜಾತ್ರೆಗಳ ಸಾಂಸ್ಕೃತಿಕ ಮುಖವನ್ನು ಸ್ಪಷ್ಟಪಡಿಸುತ್ತವೆ"[೯೭] ಎಂಬ ಡಾ. ಸಿ.ಎಂ.ಗೋವಿಂದರೆಡ್ಡಿಯವರ ಮಾತು ಜಾತ್ರೆಗಳ ಸಾಂಸ್ಕೃತಿಕ ಕಾರ್ಯಗಳ ಸಕರಾತ್ಮಕ ಮತ್ತು ನಕರಾತ್ಮಕ ಕಾರ್ಯಗಳ ಮುಖಗಳನ್ನು ಸ್ಪಷ್ಟಪಡಿಸುತ್ತದೆ.

## ೬.೮ ಆರ್ಥಿಕತೆ

ಸುಗ್ಗಿಮುಗಿದ ನಂತರ ಜಾತ್ರೆಗಳು ನಡೆಯುವುದರಿಂದ ಜನರು ತಾವು ಬೆಳೆದಿರುವುದನ್ನು ಜಾತೆಯಲ್ಲಿ ತಮಗೆ ಬೇಕಾದ ವಸ್ತುಗಳನ್ನು ಕೊಳ್ಳುವರು. ಈ ಹಿಂದೆ ಸಮಾಜದಲ್ಲಿ ವಸ್ತು ವಿನಿಮಯ ಪದ್ಧತಿ ಜಾರಿಯಲ್ಲಿತ್ತು. ನಂತರದ ದಿನಗಳಲ್ಲಿ ಹಣದ ಪ್ರಾಧಾನ್ಯತೆ ಹೆಚ್ಚಿದಂತೆ ವ್ಯಾವಹಾರಿಕ ಚಟುವಟಿಕೆಗಳು ಜಾತ್ರೆಯನ್ನು ಆರ್ಥಿಕ ಕೇಂದ್ರವನ್ನಾಗಿ ಮಾಡಿಕೊಂಡವು. ಎಲ್ಲಾ ಬಗೆಯ ವಸ್ತುಗಳು ಜಾತ್ರೆಗಳಲ್ಲಿ ದೊರೆಯುವುದರಿಂದ ಆರ್ಥಿಕ ಚಟುವಟಿಕೆಗಳು ಬಿರುಸಿನಿಂದ ನಡೆಯುತ್ತವೆ. ಜಾತ್ರೆಯ ಸ್ಥಳದಲ್ಲಿ ದೇವರು ಪ್ರತಿಷ್ಠಾಪನೆಗೊಂಡಾಗ ಪೂಜಾ ಸಾಮಾಗ್ರಿ ಮತ್ತು ಹಣ್ಣಿನ ಅಂಗಡಿಗಳು ಮೊದಲು ಕಾಣಿಸಿಕೊಳ್ಳುತ್ತವೆ. ವಿವಿಧ ಊರುಗಳಿಂದ ಜಾತ್ರೆಗೆ ಜನರು ಬರಲಾರಂಭಿಸಿದಂತೆ ಜನರ ಅಭಿರುಚಿಗೆ ತಕ್ಕಂತೆ ವಿವಿಧ ಬಗೆಯ ಅಂಗಡಿಗಳು ತಲೆ ಎತ್ತುತ್ತವೆ. ರೈತರಿಗೆ ಒಕ್ಕಲುತನಕ್ಕೆ ಬೇಕಾದ ಸಲಕರಣೆಗಳನ್ನು ಒದಗಿಸುವ ಅಂಗಡಿಗಳು ಭೂರಹಿತರಿಗೆ ಧಾನ್ಯಗಳನ್ನು ಒದಗಿಸುವ ಅಂಗಡಿಗಳು, ಎಲ್ಲಾ ವಯೋಮಾನದವರ ದಿನನಿತ್ಯದ ಜೀವನಕ್ಕೆ ಅವಶ್ಯಕವಾದ ಬಟೆಯನ್ನು ಒದಗಿಸುವ ಅಂಗಡಿಗಳು, ಹಸಿದವರಿಗೆ ಊಟವನ್ನೊದಗಿಸುವ ಹೋಟೆಲುಗಳು, ದಾಹವಾದವರಿಗೆ ತಂಪುಪಾನೀಯವನ್ನು ಒದಗಿಸುವ ಅಂಗಡಿಗಳು, ಬಿಸಿಲಿನ ಝಳಪಿಗೆ ಬಸವಳಿದವರನ್ನು ತಂಪಾಗಿಸುವ ಸೌತೆಕಾಯಿ, ಕರಬೂಜ, ಕಲ್ಲಂಗಡಿ ಹಣ್ಣುಗಳನ್ನು ಒದಗಿಸುವ ಅಂಗಡಿಗಳು, ಮಕ್ಕಳಿಗೆ ಆಟಿಕೆಗಳನ್ನು ಒದಗಿಸುವ ಬೊಂಬೆಯ ಅಂಗಡಿಗಳು ಹಾಗೂ ತಿಂಡಿ ತಿನಿಸಿನ ಅಂಗಡಿಗಳೂ, ಹೆಜ್ಜೆ ಹಾಗೂ ಮೆಹಂದಿ ಅಂಗಡಿಗಳು, ಹೆಣ್ಣುಮಕ್ಕಳಿಗೆ ಸೌಂದರ್ಯವರ್ಧಕ ಅಂಗಡಿಗಳು ಮೊದಲಾದ ಬಗೆಯ ಅಂಗಡಿಗಳು ಜಾತ್ರೆಯಲ್ಲಿ ಕಾಣಿಸಿಕೊಳ್ಳುತ್ತವೆ, ಎಲ್ಲಾ ಜಾತಿ ಮತ್ತು ಮತದವರು ಜಾತ್ರೆಗಳಲ್ಲಿ ಪಾಲ್ಗೊಳ್ಳುತ್ತಾರೆ. ಈ ಕಾರಣಕ್ಕಾಗಿಯೆ “ ಎಲ್ಲಾ ಅಗತ್ಯವಸ್ತುಗಳು ದೊರೆಯುವ ಏಕೈಕ ತಾಣಗಳಾಗಿ ಜಾತ್ರೆಗಳು ಕಾರ್ಯನಿರ್ವಹಿಸುತ್ತವೆ”[೧೮] ದೇವರ ಜಾತ್ರೆಯ ನಿಮಿತ್ತ ದಿನದ ಜಾತ್ರೆಗಳು ನಡೆಯುತ್ತವೆ. ಈ ಕಾರಣಕ್ಕಾಗಿ ರೈತಾಪಿ ವರ್ಗದವರು ಹೆಚ್ಚಾಗಿ ಬರುವುದರಿಂದ ವ್ಯಾಪಾರ ಚಟುವಟಿಕೆಗಳು ಚುರುಕಿನಿಂದ ನಡೆಯುತ್ತವೆ.

ಪ್ರಸ್ತುತ ಆಧುನಿಕತೆಯ ಪ್ರಭಾವದಿಂದ ಸಾರಿಗೆ ಸಂಪರ್ಕಗಳು ವೃದ್ಧಿಯಾಗಿದ್ದು “ ಜಾತ್ರೆಗಳಲ್ಲಿ ಜನರ ಗುಂಪು ಅಧಿಕವಾಗಿ ಸೇರುವುದರಿಂದ ವ್ಯಾಪಾರಿಗಳಿಗೆ ಅದೊಂದು ಒಳ್ಳೆಯ ಕಾಲ, ಆಯಾ ಸ್ಥಳದ ವಿಶೇಷ ಪದಾರ್ಥಗಳು ವಿಲೇವಾರಿಯಾಗಲು ಜಾತ್ರೆಗಳು ಸಹಾಯ ಮಾಡುತ್ತವೆ”[೧೯] ಜಾತ್ರೆ ನಡೆಯುವ ಸ್ಥಳಗಳು ಮುಖ್ಯ ವ್ಯಾಪಾರ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತವೆ.

## ೬.೯ ರಾಜಕೀಯತೆ

ಜಾತ್ರೆ ಸಾಮಾಜಿಕ ಆಚರಣೆಗಳ ರಾಜಕೀಯ ಆಡಳಿತಾತ್ಮಕ ಕಾರ್ಯ ರಾಜಕೀಯ ಧುರೀಣರು ಸಮಾಜವನ್ನಾಳುವಂತೆ ಗೌಡ, ಶಾನುಭೋಗ, ತಳವಾದ ಮೊದಲಾದವರು ಜಾತ್ರೆಯ ಆಡಳಿತ ಕಾರ್ಯವನ್ನು ನಿರ್ವಹಿಸುತ್ತಾರೆ. ಜಾತ್ರೆಯ ಸಮಯದಲ್ಲಿ ತಲೆದೋರುವ ವ್ಯಾಜ್ಯಗಳ ಇತ್ಯರ್ಥ, ಭಕ್ತರಿಂದ ಕಾಣಿಕೆ, ಕರವಸೂಲಿಯಂತಹ ಕಾರ್ಯಗಳನ್ನು ಜಾತ್ರೆಯ ಮುಖ್ಯಸ್ಥರು ನಿರ್ವಹಿಸುತ್ತಾರೆ. ಖಾಸಾ ರಾಜಕೀಯ ನಾಯಕರು ಜಾತ್ರೆಯ ಪ್ರದೇಶಗಳನ್ನು ತಮ್ಮ ರಾಜಕೀಯ ಬದುಕಿನ ಸಭೆ ಸಮಾರಂಭಗಳ ವೇದಿಕೆಯಾಗಿ, ಮತ ಬ್ಯಾಂಕಿನ ಕೇಂದ್ರಗಳನ್ನಾಗಿ ಮಾಡಿಕೊಳ್ಳುವ ಕಾರ್ಯಚಟುವಟಿಕೆಗಳ ತಾಣಗಳಾಗಿಯೂ ಕಾರ್ಯ ನಿರ್ವಹಿಸಿವೆ. ಕೆಲವೊಮ್ಮೆ ರಾಜಕೀಯ ವ್ಯಕ್ತಿಗಳು ಜಾತ್ರೆಯ ಪ್ರದೇಶದಲ್ಲಿ ತಮ್ಮ ವರ್ಚಸ್ಸು ಬೀರುವುದನ್ನು ಕಾಣುತ್ತೇವೆ.

## ೬.೧೦ ಮನೋರಂಜನೆ

ಜಾತ್ರೆಗಳಲ್ಲಿ ಜೀವನೋತ್ಸಾಹದ ಚಿಲುಮೆಗಳಂತೆ ಮನೋರಂಜನಾ ಕಾರ್ಯಗಳು ಜರುಗುತ್ತವೆ. ಮಾನವ ಸಮಾಜಕ್ಕೆ ಮನೋರಂಜನೆಯು ಆಹಾರದಷ್ಟೆ ಮುಖ್ಯ. ವರ್ಷವಿಡೀ ಕೃಷಿ ಚಟುವಟಿಕೆಯಲ್ಲಿ ತೊಡಗಿದ ರೈತರ ಬೇಸರಿಕೆಗಳನ್ನು ದುಡಿದು ಬೆಂಡಾದ ದೇಹ ಮತ್ತು ಮನಸ್ಸುಗಳಿಗೆ ಶಕ್ತಿ ಚೈತನ್ಯಗಳನ್ನು ಪಡೆಯಲು ಸಮುದಾಯದ ಸದಸ್ಯರೆಲ್ಲರು ಒಂದುಗೂಡಿ ಜಾತ್ರೆಯ ಸಮಯದಲ್ಲಿ ಆಟನೋಟಗಳಲ್ಲಿ ವಿನೋದ ಸನ್ನಿವೇಶಗಳಲ್ಲಿ ತೊಡಗುತ್ತಾರೆ.

ಜಾತ್ರೆಯ ಸ್ಥಳದಲ್ಲಿ ನಿರ್ಮಿಸಲಾದ ರಂಗಮಂಟಪದಲ್ಲಿ ಸಂಗೀತ, ಹರಿಕಥೆ, ನಾಟಕ, ನೃತ್ಯ, ಪ್ರವಚನ, ಚರ್ಚೆಯಂತಹ ಮನೋರಂಜನಾ ಕಾರ್ಯಗಳು ಜರುಗುತ್ತವೆ. ದೇವರ ಉತ್ಸವಮೂರ್ತಿಯನ್ನು ಕುರಿತಾಗಿ ಭಕ್ತ ಕಲಾವಿದರು ಹಾಡುವ ಜನಪದಗೀತೆ, ದೇವರಸ್ತೋತ್ರ, ಮಂತ್ರಪಠಣದಂತಹ ಕಾರ್ಯಗಳೂ, ಭಜನೆ, ಕೋಲಾಟ, ವೇಷಧಾರಿಗಳ ಕುಣಿತ, ಕೀಲು ಕುದುರೆ, ನಂದಿಕೋಲು, ಮರಗಾಲು ಕುಣಿತ,ಹಾವಾಡಿಗರು ಕೋತಿ ಕುಣಿಸುವವರು, ವಿವಿಧ ವಾದ್ಯಗೋಷ್ಠಿಗಳು ಡೊಳ್ಳುಕುಣಿತ, ಪೂಜಾಕುಣಿತ, ಮಾರಿಕುಣಿತ, ಕತ್ತಿವರಸೆ, ವೀರಗಾಸೆ ತಾಳಮದ್ದಳೆ, ಯಕ್ಷಗಾನ, ತೊಗಲುಗೊಂಬೆಯಾಟ, ಕುಸ್ತಿ, ಮಲ್ಲಯುದ್ಧ, ಕೋಳಿಕಾಳಗ, ಟಗರು, ಕಾಳಗ ಕಬಡ್ಡಿಯಂತಹ ವಿವಿಧ ಬಗೆಯ ಕ್ರೀಡೆಗಳು ರಸಮಂಜರಿ ಕಾರ್ಯಕ್ರಮಗಳು ಜನಸಾಮಾನ್ಯರಿಗೆ ಜಾತ್ರೆಯಲ್ಲಿ ಮನೋರಂಜನೆಯನ್ನು ಒದಗಿಸುತ್ತವೆ.

“ಸಿನಿಮಾ, ನಾಟಕಮುಂತಾದ ಮನರಂಜನೆಗಳು ದೊರೆಯುವುದರಿಂದ ಸಹಜವಾಗಿಯೇ ಜನರಲ್ಲಿ ಆಕರ್ಷಣೆ ಉಂಟಾಗಿ”[೨೦] ಜನರಲ್ಲಿ ಹೊಸಚೇತನ , ಹುಮ್ಮಸ್ಸು, ಉರುಪುಗಳನ್ನು, ಸಾಂಸ್ಕೃತಿಕ ಪರಂಪರೆಯ ಆದರ್ಶಗಳನ್ನು ಮನವರಿಕೆ ಮಾಡಿಕೊಡುವ ಮೂಲಕ ಸ್ವಾಸ್ಥ್ಯ ಸಮಾಜದ ಮುಂದುವರಿಕೆಗೆ ಸಹಕರಿಸುತ್ತವೆ.

ಸಾಂಪ್ರದಾಯಿಕ ವಿಧಿಯಾಚರಣೆ ಮತ್ತು ಮತಾಧಾರಿತ ಕಾರ್ಯಗಳು ಬಹುತೇಕ ಪರಂಪರಾನುಗತವಾಗಿ ನಡೆಯುತ್ತಿದ್ದು, ಸಂಘಟನಾ ಕಾರ್ಯದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಜಾತ್ರೆಗೆ ಜನರನ್ನು ಒಗ್ಗೂಡಿಸುವ ಕಾರ್ಯವು ಪರಂಪರಾನುಗತವಾಗಿದ್ದು ಟಾಮ್ ಒಡೆಯುವುದು, ಸಾರುವುದರ ಮೂಲಕ ಕಾರ್ಯನಿರ್ವಹಿಸಲಾಗುತ್ತಿತ್ತು. ಪ್ರಸ್ತುತ ಯಂತ್ರಗಳ ಸಹಾಯದಿಂದ, ಮುದ್ರಿಸಲಾದ ಕರಪತ್ರ, ದಿನಪತ್ರಿಕೆಗಳು ಮತ್ತು ದೂರದರ್ಶನಗಳು ಈ ಕಾರ್ಯವನ್ನು ಸಮರ್ಥವಾಗಿ ನಿರ್ವಹಿಸುತ್ತಿವೆ. ಜೊತೆಗೆ ಅಪಾರ ಸಂಖ್ಯೆಯ ಜನರನ್ನು ಜಾತ್ರಾ ಸ್ಥಳಗಳಿಗೆ ಶೀಘ್ರವಾಗಿ ಮತ್ತು ಸುರಕ್ಷಿತವಾಗಿ ಸೇರಿಸುವ ಕಾರ್ಯವನ್ನು ಆಧುನಿಕ ಸಾರಿಗೆ ಸಂಪರ್ಕ ಸಾಧನಗಳು ಮಾಡುತ್ತಿವೆ. ಜಾತ್ರೆಗಳಲ್ಲಿ ಜಾತಿಯಾಧಾರಿತ ವಿಧಿ ವಿಧಾನಗಳ ಕಾರ್ಯಗಳನ್ನು ಕೈಗೊಳ್ಳುವಾಗ ಜಾತಿ ಭಾವನೆ ಜಾಗೃತಗೊಂಡು ಸಾಮಾಜಿಕ ವಿಸಂಘಟನೆಗೆ ಕಾರಣವಾಗುತ್ತಿದೆ. ಇಂತಹ ಸನ್ನಿವೇಶಗಳು ಸಾಮಾಜಿಕ ಸಾಮರಸ್ಯಕ್ಕೆ ಧಕ್ಕೆಯನ್ನುಂಟು ಮಾಡುತ್ತವೆ. ಇದರಿಂದ ಸಾಮಾಜಿಕ ನೈತಿಕತೆಯು ಕ್ಷೀಣಿಸುತ್ತದೆ.

ಆರ್ಥಿಕ ಕಾರ್ಯಗಳು ಜಾತ್ರಾ ಪ್ರದೇಶವನ್ನು ವಾಣಿಜ್ಯೀಕರಣಗೊಳಿಸಿದ್ದು ಇದಕ್ಕೆ ಆಧುನಿಕ ಸಾರಿಗೆ ಸಂಪರ್ಕ ಸಾಧನಗಳು ಕಾರಣವಾಗಿವೆ. ಇದರಿಂದಾಗಿ ಜಾತ್ರಾ ಪ್ರದೇಶದಲ್ಲಿ ದೈವಿಕ ಭಾವನೆಗಿಂತ ಮಿಗಿಲಾಗಿ ವ್ಯಾವಹಾರಿಕ ಉದ್ದೇಶದ ಸಂಗತಿಗಳು ಹೆಚ್ಚುತ್ತಿವೆ. ಅಲ್ಲದೆ ಜಾತ್ರೆಯ ಆಡಳಿತ ನಿರ್ವಹಣಾ ಕಾರ್ಯವು ಹಿಂದೆ ಸಂಪ್ರದಾಯಬದ್ಧವಾಗಿದ್ದು, ಪ್ರಸ್ತುತದಲ್ಲಿ ರಾಜಕೀಯ ಧುರೀಣರ ಕಪಿ ಮುಷ್ಟಿಗೆ ಸಿಲುಕಿದ್ದು ಸಾಂಪ್ರದಾಯಿಕ ನಿಯಮಗಳಿಗೆ ಧಕ್ಕೆ ಯುಂಟಾಗಿದೆ.

ಪರಂಪರಾನುಗತವಾಗಿ ನಡೆದು ಬಂದ ಮನೋರಂಜನಾ ಕಾರ್ಯಗಳು ಕಣ್ಮರೆಯಾಗುತ್ತಿವೆ. ಇವುಗಳ ಸ್ಥಾನವನ್ನು ಆರ್ಕೆಸ್ಟ್ರಾ, ಚಲನ ಚಿತ್ರಮಂದಿರಗಳು ತುಂಬುತ್ತಿದ್ದು ಜಾತ್ರೆಯ ಮೂಲ ಕಾರ್ಯಗಳನ್ನು ಸಾಕಷ್ಟು ವೈಪರೀತ್ಯಗಳುಂಟಾಗಿವೆ. ಜನರು ಸಹ ಸಾಂಪ್ರದಾಯಿಕ ಮನೋರಂಜನೆಯ ಕಾರ್ಯಗಳಿಗಿಂತ ಆಧುನಿಕ ಮನೋರಂಜನೆಯ ಕಡೆಗೆ ಹೆಚ್ಚು ಒಲವುಳ್ಳವರಾಗಿದ್ದಾರೆ. ಜಾತ್ರೆಗಳು ಪ್ರಾಚೀನಕಾಲದಿಂದಲೂ ತನ್ನದೇ ಆದ ಅನೇಕ ಕಾರ್ಯಗಳನ್ನು ನಿರ್ವಹಿಸಿಕೊಂಡು ಬಂದಿವೆಯಾದರೂ ತನ್ನ ಸಂಪ್ರದಾಯಬದ್ಧವಾದ ಕಾರ್ಯಗಳ ಸ್ವರೂಪವನ್ನು ಕಳೆದುಕೊಳ್ಳುತ್ತ ಆಧುನಿಕ ಸ್ವರೂಪನ್ನು ಪಡೆದುಕೊಳ್ಳುತ್ತಿವೆ.

ಒಟ್ಟಾರೆ ಜಾತ್ರೆಗಳು ಸಾಮಾಜಿಕ ಸಾಮರಸ್ಯದ ಚಿಲುಮೆಗಳಾಗಿದ್ದು, ಪ್ರಾಚೀನದಿಂದಲೂ ಅನೇಕ ಸಾಮಾಜಿಕ ಉಪಯುಕ್ತ ಕಾರ್ಯಗಳನ್ನು ನಿರ್ವಹಿಸಿಕೊಂಡು ಬಂದಿವೆ. ಹಿಂದಿನಿಂದಲೂ ಜಾತ್ರೆಯ ಕಾರ್ಯಗಳು ಸಂಪ್ರದಾಯಬದ್ಧವಾಗಿ ನಡೆಯುತ್ತಿದ್ದವು. ಪ್ರಸ್ತುತ ಪಾಶ್ಚಾತ್ಯ ಸಂಸ್ಕೃತಿ ಮತ್ತು ಆಧುನೀಕತೆಗಳಿಂದಾಗಿ ಜಾತ್ರೆಯ ಕಾರ್ಯಗಳಲ್ಲಿ ಬದಲಾವಣೆಗಳಾಗಿವೆ.

## ಅಡಿ ಟಿಪ್ಪಣಿ

೧. ಸಿದ್ದಗಂಗಾ ಮಾಸಪತ್ರಿಕೆ (ಸಂ)ಹೆಚ್.ವಿ.ವೀರಭದ್ರಪ್ಪ ಶ್ರೀ ಸಿದ್ದಲಿಂಗೇಶ್ವರ ಸ್ವಾಮಿ ಆಫ್‌ಸೆಟ್‌ಮುದ್ರಣಾಲಯ ತುಮಕೂರು ಫೆಬ್ರವರಿ ೨೦೧೧ ಸಂಪುಟ ೪೭ ಸಂಚಿಕೆ – ಪುಟ ೭

೨. ಕರ್ನಾಟಕದ ಜಾತ್ರೆಗಳು(ಲೇ) ಹಂಪ ನಾಗರಾಜಯ್ಯ ಪುಟ–೧೭

೩. ಸಿದ್ಧಗಂಗಾ ಮಾಸ ಪತ್ರಿಕೆ (ಸಂ) ಹೆಚ್.ವಿ.ವೀರಭದ್ರಪ್ಪ ಶ್ರೀ ಸಿದ್ದಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ, ತುಮಕೂರು, ಫೆಬ್ರವರಿ ೨೦೧೧ ಸಂಪುಟ –೪೭ ಸಂಚಿಕೆ –೨ ಪುಟ–೮

೪. ಅದೇ ಪುಟ –೧೦

೫. ಅದೇ ಪುಟ –೧೦

೬. ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ – ಅಪ್ಪಸಾಹೇಬ ವಾಲೀಕಾರ ವಿರಸಂ ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ ಗುಲ್ಬರ್ಗ–೧೯೯೮ ಪುಟ ೨೨೬–೭

೭. ಕೋಲಾರ ಜಿಲ್ಲೆಯ ಜಾತ್ರೆಗಳು ಒಂದು ಅಧ್ಯಯನ ಡಾ॥ಸಿ.ಎಂ.ಗೋವಿಂದರೆಡ್ಡಿ ಮೈ.ವಿ.ವಿ.ಗೆ ಸಲ್ಲಿಸಿದ ಪಿಹೆಚ್.ಡಿ ಮಹಾಪ್ರಬಂಧ –೨೦೦೪ ಪುಟ ೨೮

೮. ತುಮಕೂರು ಜಿಲ್ಲೆಯ ಜಾತ್ರೆಗಳು ಗ್ರಾಮ ಸಂಸ್ಕೃತಿಮಾಲೆ –೭ ಚಿಕ್ಕಣ್ಣಯಣ್ಣೇಕಟ್ಟೆ, ಕನ್ನಡ ಪುಸ್ತಕ ಪ್ರಾಧಿಕಾರ, ಸಿವಿಜಿ ಪಬ್ಲಿಕೇಷನ್ ಬೆಂಗಳೂರು –೨೦೦೩

೯. ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳು ಜಾನಪದೀಯ ಅಧ್ಯಯನ – ಚಿನ್ನಣ್ಣ ವಾಲೀಕಾರ ಅಪ್ಪ ಸಾಹೇಬ ವಾಲೀಕಾರ ವಿರಸಂ ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ ಗುಲ್ಬರ್ಗ ೧೯೯೮ ಪುಟ–೮೨

೧೦. ಹೈದರಾಬಾದ್ ಕರ್ನಾಟಕದ ಗ್ರಾಮ ದೇವತೆಗಳು ಜಾನಪದೀಯ ಅಧ್ಯಯನ – ಚಿನ್ನಣ್ಣ ವಾಲೀಕಾರ ಅಪ್ಪ ಸಾಹೇಬ ವಾಲೀಕಾರ ವಿರಸಂ ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ ಗುಲ್ಬರ್ಗ ೧೯೯೮ ಪುಟ–೮೨

೧೧. ಅದೇ ಪುಟ –೮೪

೧೨. ಸಿದ್ಧಗಂಗಾ ಮಾಸ ಪತ್ರಿಕೆ (ಸಂ) ಹೆಚ್.ವಿ.ವೀರಭದ್ರಪ್ಪ ಶ್ರೀ ಸಿದ್ದಲಿಂಗೇಶ್ವರಸ್ವಾಮಿ ಆಫ್‌ಸೆಟ್‌ಮುದ್ರಣಾಲಯ, ತುಮಕೂರ, ಫೆಬ್ರವರಿ ೨೦೧೧ ಸಂಪುಟ –೪೭ ಸಂಚಿಕೆ –೨ ಪುಟ–೯

೧೩. ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳು ಜಾನಪದೀಯ ಅಧ್ಯಯನ – ಚಿನ್ನಣ್ಣ ವಾಲೀಕಾರ ಅಪ್ಪ ಸಾಹೇಬ ವಾಲೀಕಾರ ವಿರಸಂ ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ ಗುಲ್ಬರ್ಗ ೧೯೯೮ ಪುಟ–೨೨೯

೧೪. ಕರ್ನಾಟಕ ಜಾತ್ರೆಗಳು (ಸಂ) ಸಿ.ಎಸ್.ಶಿವಕುಮಾರಸ್ವಾಮಿ ಪುಟ–೧೭೦

೧೫. ಕೋಲಾರ ಜಿಲ್ಲೆಯ ಜಾತ್ರೆಗಳು ಒಂದು ಅಧ್ಯಯನ ಸಿ.ಎಂ.ಗೋವಿಂದರೆಡ್ಡಿ ಮೈ.ವಿ.ವಿ.ಗೆ ಸಲ್ಲಿಸಿದ ಪಿಹೆಚ್.ಡಿ ಮಹಾಪ್ರಬಂಧ –೨೦೦೪ ಪುಟ ೨೯

೧೬. ಮಲೆನಾಡು ಜಾನಪದ (ಸಂ) ಹೆಚ್.ಲಕ್ಕಪ್ಪಗೌಡ ಪುಟ ೪೯

೧೭. ಕೋಲಾರ ಜಿಲ್ಲೆಯ ಜಾತ್ರೆಗಳು ಒಂದು ಅಧ್ಯಯನ ಸಿ.ಎಂ.ಗೋವಿಂದರೆಡ್ಡಿ ಮೈ.ವಿ.ವಿ.ಗೆ ಸಲ್ಲಿಸಿದ ಪಿಹೆಚ್.ಡಿ ಮಹಾಪ್ರಬಂಧ –೨೦೦೪ ಪುಟ ೨೯

೧೮. ಅದೇ ಪುಟ –೩೦

೧೯. ಕನ್ನಡ ಮಾಧುರ್ಯ An Internediate course Reader in Kannada (ಸಂ) ಎಂಎಸ್ ಲೀಲಾವತಿ – ಭಾರತೀಯ ಭಾಷಾ ಸಂಸ್ಥಾನ ಮೈಸೂರು ೨೦೦೪ ಪುಟ –೧೦

೨೦. ಕೋಲಾರ ಜಿಲ್ಲೆಯ ಜಾತ್ರೆಗಳು ಒಂದು ಅಧ್ಯಯನ ಸಿ.ಎಂ.ಗೋವಿಂದರೆಡ್ಡಿ ಮೈ.ವಿ.ವಿ.ಗೆ ಸಲ್ಲಿಸಿದ ಪಿಹೆಚ್.ಡಿ ಮಹಾಪ್ರಬಂಧ –೨೦೦೪ ಪುಟ ೭೫

ಅಧ್ಯಾಯ–೭

# ಉಪಸಂಹಾರ

೭.೧ ಅಧ್ಯಯನದ ಫಲಿತಗಳು

೭.೨ ಅಧ್ಯಯನದ ಸಾಧ್ಯತೆಗಳು

೭.೩ ಸಲಹೆಗಳು

ಅಧ್ಯಾಯ -೭

# ಉಪಸಂಹಾರ

ನಮ್ಮ ಬಹುಮುಖಿ ಸಂಸ್ಕೃತಿಯ ಸಾಮಾಜಿಕ ವ್ಯವಸ್ಥೆಯಲ್ಲಿ ಆಚರಣೆಗಳಿಗೆ ಕೊನೆಯಿಲ್ಲ ಪ್ರಪಂಚದಲ್ಲಿ ಅತಿಹೆಚ್ಚು ವಾರ್ಷಿಕ ಆಚರಣೆಗಳು ಇಲ್ಲಿ ಜರುಗುವುದನ್ನು ಅಂಕಿಅಂಶಗಳು ದೃಢಪಡಿಸುತ್ತವೆ. ಆಚರಣೆಗಳು ಮತದ ಹಿನ್ನೆಲೆಯನ್ನು ಒಳಗೊಂಡಿರುವುದರಿಂದ ಅಸಂಖ್ಯಾತ ಜನರು ಈ ಕಾರ್ಯಗಳಲ್ಲಿ ಭಾಗವಹಿಸುವುದರಿಂದ ಈ ಬಗೆಯ ಆಚರಣೆಗಳೇ ಜಾತ್ರೆಗಳಾಗಿವೆ. ಇಂತಹ ಜಾತ್ರೆಗಳು ಜನರನ್ನು ಪರಸ್ಪರ ಅಂತಃಕ್ರಿಯೆಗೆ ಒಳಪಡಿಸಿ ಸ್ಥಳೀಯ ವಿಶೇಷತೆಗಳನ್ನು ಅಳವಡಿಸಿಕೊಳ್ಳಲು ಸಹಾಯಕವಾಗುತ್ತದೆ.

ನಂಬಿಕೆ ಮತ್ತು ಸಾಂಪ್ರದಾಯಿಕ ಆಚರಣೆಗಳು ಹಬ್ಬ ಮತ್ತು ಜಾತ್ರೆಗಳ ಹುಟ್ಟಿಗೆ ಕಾರಣವಾಗಿದೆ. ಪ್ರಕೃತಿಯ ಕೂಸಾಗಿದ್ದ ಮಾನವನಿಗೆ ಪ್ರಕೃತಿಯೇ ದೇವರು. ಈ ಕಾರಣಕ್ಕಾಗಿಯೇ ಅವನು ಪರಿಸರದ ಚರಾಚರಗಳನ್ನು ದೇವರೆಂದು ನಂಬಿದ. ಅಲ್ಲಿ ಅವನಿಗಾದ ಜೀವದ ಮೇಲಿನ ಭಯ ಅಂದರೆ ಗಾಳಿ, ಮಳೆ, ಭೂಕಂಪ, ಅತಿವೃಷ್ಟಿ, ಅನಾವೃಷ್ಟಿ ಭಯಾನಕ ರೋಗಗಳು ಅವನಲ್ಲಿ ಭಯವನ್ನುಂಟು ಮಾಡಿದವು. ಈ ಘಟನೆಗಳ ಹಿಂದೆ ಯಾವುದೋ ಮಹಾಶಕ್ತಿ ಅಡಗಿದೆ ಎಂದು ಯೋಚಿಸಿದ. ಪ್ರಕೃತಿಯ ಜೊತೆ ಸಹಜ ಹೊಂದಾಣಿಕೆ ಮಾಡಿಕೊಳ್ಳಲು ಆ ಶಕ್ತಿಗಳಿಗೆ ಗುಡಿಕಟ್ಟಿ ಪೂಜಿಸಿ ಅವುಗಳಿಂದ ರಕ್ಷಣೆ ಪಡೆಯಲು ಬಯಸಿದ. ಇಡೀ ಸಮುದಾಯದ ಜನರು ಶಕ್ತಿಯ ಪ್ರತೀಕವಾಗಿದ್ದ ಗುಡಿಯಲ್ಲಿನ ಪ್ರತಿಮೆಯಲ್ಲಿನ ಸಾಮೂಹಿಕವಾಗಿ ಪೂಜಿಸತೊಡಗಿದರು. ಈ ಬಗೆಯ ಆಚರಣೆಗಳೇ ಜಾತ್ರೆಗಳ ಹುಟ್ಟಿಗೆ ಕಾರಣವಾದುವು. ಗ್ರಾಮೀಣ ಪ್ರದೇಶಗಳಲ್ಲಿ ಜನಸಾಮಾನ್ಯರ ಕಷ್ಟಕೋಟಲೆಗಳನ್ನು ತನ್ನ ಪವಾಡಗಳ ಮೂಲಕ ಬಗೆ ಹರಿಸುವ ಜನಾಂಗೀಯ ನಾಯಕರು ಕ್ರಮೇಣ ಸಾಂಸ್ಕೃತಿಕ ವೀರರಾಗಿ ಆ ಭಾಗದ ಜನರ ಆರಾಧ್ಯ ದೈವಗಳಾದ್ದಾರೆ. ಇವರ ಮರಣದ ನಂತರ ಅವರ ಹೆಸರಿನಲ್ಲಿ ಗುಡಿಗಳನ್ನು ಕಟ್ಟಿ ಅವರ ಮೂರ್ತಿಯನ್ನು ಪ್ರತಿಷ್ಠಾಪಿಸಿ ಜಾತ್ರೆಗಳನ್ನು ಆಚರಿಸಲಾಗುತ್ತದೆ.

ಜನರ ಅಭಿರುಚಿ, ಕನಸು, ಕಲ್ಪನೆ, ನಂಬಿಕೆಗಳಿಗೆ ತಕ್ಕಂತೆ ಜಾತ್ರೆಗಳು ಆಚರಣೆಯಲ್ಲಿದ್ದು, ಇವುಗಳನ್ನು ಒಂದು ಸಾಮಾಜಿಕ ನೆಲೆಯಲ್ಲಿ ವಿಂಗಡಿಸುವುದು ಕಷ್ಟದ ಕೆಲಸ. ಏಕೆಂದರೆ ಜಾತ್ರೆಗಳು ವೇದಕಾಲದಷ್ಟು ಪ್ರಾಚೀನ, ಐತಿಹಾಸಿಕ, ಪೌರಾಣಿಕ ಹಿನ್ನಲೆಯನ್ನೊಳಗೊಂಡಿದೆ. ದೇವರ ಕಲ್ಪನೆ, ಮತದ ವಿಧಿವಿಧಾನ, ಸಮಾಜದ ರೀತಿ ನೀತಿ, ಆಚಾರ ವಿಚಾರ, ರೂಢಿ ಪದ್ಧತಿ, ಸಂಪ್ರದಾಯ

ಸಂಸ್ಕೃತಿ, ಜೀವನ ಪದ್ಧತಿ ಮತ್ತು ಜೀವನ ವಿಧಾನಗಳೊಂದಿಗೆ ಹೆಣೆದುಕೊಂಡಿರುವ ಜಾತ್ರೆಗಳನ್ನು ಯಾವ ಆಯಾಮದಿಂದ ವರ್ಗೀಕರಿಸಿದರೂ ಅಂತಹ ವರ್ಗೀಕರಣ ಅಪೂರ್ಣವಾಗುವುದು. ಏಕೆಂದರೆ ಜಾತ್ರೆ ಎಂಬ ಪದವು ಸಾಮಾಜಿಕ ಕಲ್ಪನೆಯಷ್ಟೇ ಸಂಕೀರ್ಣ. ಆದರೂ ಜಾತ್ರೆಗಳ ಸಾಮಾಜಿಕ ಸ್ವರೂಪ ಮತ್ತು ಹಲವು ಕಾರಣ ಆಧಾರದ ಮೇಲೆ ಹಾಗೂ ಅವುಗಳ ಆಚರಣೆಯ ಸಾಮಾಜಿಕ ನಿಯಮಗಳ ಶೈಕ್ಷಣಿಕ, ರಾಜಕೀಯ ಹಾಗೂ ಸಾಮಾಜಿಕ ಅವಶ್ಯಕತೆಗಳಿವೆ. ಇವುಗಳ ಈಡೇರಿಕೆಯ ಕಾರಣಗಳಿಂದಾಗಿ ಇಂದಿಗೂ ಜಾತ್ರೆಗಳು ಅಗತ್ಯವಾದುವುಗಳೆನಿಸಿವೆ. ಮೋಜಿನ ಜಾತ್ರೆಗಳು, ವಸ್ತುಪ್ರದರ್ಶನದ ಜಾತ್ರೆಗಳು, ದನದ (ಪಶುಗಳ) ಜಾತ್ರೆಗಳು, ದೇವದೇವಿಯರ ಆರಾಧನಾ ಜಾತ್ರೆಗಳು ಎಂದು ವರ್ಗೀಕರಿಸಿ, ದೇವಾದೇವಿಯರ ಆರಾಧನಾ ಜಾತ್ರೆಗಳಲ್ಲಿ ಶಿಷ್ಟ, ಗ್ರಾಮೀಣ, ಕರಗ, ಉರುಸ್, ಮೊದಲಾದವುಗಳಾಗಿ ವಿಂಗಡಿಸಿಕೊಳ್ಳಲಾಗಿದೆ.

ಈ ಬಗೆಯ ಜಾತ್ರೆಯ ವರ್ಗೀಕರಣ ಮಾಡಲಾಗಿದ್ದಾಗ್ಯೂ ಇವುಗಳ ಆಚರಣೆಯ ಸಮಯದಲ್ಲಿ ಕಂಡು ಬರುವ ವಿಧಿಯಾಚರಣೆಗಳು ಪರಸ್ಪರ ಪೂರಕ ಸಂಬಂಧವನ್ನು ಒಳಗೊಂಡಿದ್ದು ಇವುಗಳ ಸಾಂಸ್ಕೃತಿಕ ಅನನ್ಯತೆಗೆ ಗೆರೆ ಎಳೆದು ನಿರ್ದಿಷ್ಟವಾಗಿ ವಿಭಾಗಿಸುವುದು ಅಸಾಧ್ಯ ಎಂಬ ಸಂಗತಿಯನ್ನು ಒಪ್ಪಿಕೊಳ್ಳಲೇಬೇಕು. ಆದರೂ ಪ್ರತಿ ಜಾತ್ರೆಯ ಹಿನ್ನೆಲೆಯನ್ನು ಅವುಗಳಲ್ಲಾಗಿರುವ ರೂಪಾಂತರಗಳನ್ನು ಹಾಗೂ ಪ್ರಸ್ತುತ ಸಮಾಜಕ್ಕೆ ಅವುಗಳ ಆಶಯವನ್ನು ತಿಳಿಯುವ ದೃಷ್ಟಿಯಿಂದ ಈ ಬಗೆಯ ವರ್ಗೀಕರಣ ಸಹಾಯಕವಾಗಿದೆ.

ಶಿಷ್ಟ ದೇವರ ಜಾತ್ರೆಗಳು ಪುರುಷ ಪ್ರಧಾನವಾದುವುಗಳಾಗಿದ್ದು ಇವುಗಳಲ್ಲಿ ವೈಷ್ಣವ ಸಂಬಂಧಿ ಮತ್ತು ಶೈವ ಸಂಬಂಧಿ ಜಾತ್ರೆಗಳು ಎಂದು ವಿಭಾಗಿಸಲಾಗಿದೆ. ಗ್ರಾಮೀಣ ದೇವರ ಜಾತ್ರೆಗಳಲ್ಲಿ ವೈವಿಧ್ಯತೆಯ ವಿಭಿನ್ನ ಆಚರಣೆಗಳಿವೆಯಾದರೂ ಈ ಜಾತ್ರೆಗಳು ಮೇಲೆ ಆಗಿರುವ ಶಿಷ್ಟ ಪ್ರಧಾನತೆಯನ್ನು ಗುರುತಿಸಬಹುದು. ಗ್ರಾಮೀಣ ಜಾತ್ರೆಗಳು ಕೂಡಿ ದುಡಿಯುವ ಕೂಡಿ ಆಡುವ ಕೂಡಿ ತಿನ್ನುವ ವಿಶಿಷ್ಟ ವಿಧಿಯಾಚರಣೆಗಳನ್ನು ಒಳಗೊಂಡಿದೆ. ಈ ಬಗೆಯ ಜಾತ್ರೆಗಳಲ್ಲಿ ಸಾಂಸ್ಕೃತಿಕ ವೀರನ ಉತ್ಸವಗಳೂ ಸೇರಿರುವುದರಿಂದ ಇವುಗಳನ್ನು ಜನಪದರ ಜಾತ್ರೆಗಳು ಎಂದು ಕರೆಯಲಾಗಿದೆ.

ಮೋಜಿನ ಪಾತ್ರೆಗಳು ಯುವಕರನ್ನು ಪ್ರಮುಖವಾಗಿ ಆಕರ್ಷಿಸುತ್ತದೆ. ಜೊತೆಗೆ ಗ್ರಾಮೀಣ ಜನರಿಗೆ ಮನರಂಜನೆ, ಕ್ರೀಡೆಯ ಅನುಭವವನ್ನು ನೀಡುತ್ತದೆ. ಅಲ್ಲದೆ ಸ್ಪರ್ಧೆ ಮತ್ತು ಸಾಹಸನ ಪ್ರದರ್ಶನ ಈ ಜಾತ್ರೆಗಳಲ್ಲಿ ಪ್ರಧಾನವಾಗಿ ಕಂಡುಬರುತ್ತದೆ. ವಸ್ತುಪ್ರದರ್ಶನದ ಜಾತ್ರೆಗಳು ಸಮಾಜದ ಸರ್ವಸದಸ್ಯರಿಗೂ ಅತ್ಯಗತ್ಯದ ಗೃಹಬಳಕೆಯ ವಸ್ತುಗಳು,ಅಲಂಕಾರಿಕ ವಸ್ತುಗಳು, ಸಿದ್ಧ ಉಡುಪುಗಳು ಕೃಷಿ ಉತ್ಪನ್ನಗಳು ಗೃಹ ಕೈಗಾರಿಕೆಯ ಉತ್ಪನ್ನಗಳು, ಕೃಷಿ ಬಳಕೆಯ ಉಪಕರಣಗಳನ್ನು ಒದಗಿಸಿಕೊಡುತ್ತವೆ.

ದನದ ಜಾತ್ರೆಗಳು ದೇವದೇವಿಯರ ಹೆಸರಿನಲ್ಲಿ ಆಚರಿಸಲ್ಪಡುವ ಜಾತ್ರೆಗಳಲ್ಲಿ ಬೆರೆತು ಹೋಗಿದೆ. ಇವುಗಳನ್ನು ಪ್ರತ್ಯೇಕವಾಗಿ ವರ್ಗೀಕರಿಸುವುದು ಕಷ್ಟ. ಆದರೂ ಅಧ್ಯಯನ ದೃಷ್ಟಿಯಿಂದ ಈ ಬಗೆಯ ಜಾತ್ರೆಯ ವರ್ಗೀಕರಣ ಅಗತ್ಯವೆಂದೇ ಹೇಳಲಾಗಿದೆ. ಕೃಷಿ ಚಟುವಟಿಕೆಗಳಲ್ಲಿ ದುಡಿಯುವ ರೈತರು ದನಗಳು ಕೊಡುಕೊಳ್ಳುವಿಕೆ ಈ ಗ್ರಾಮೀಣ ಜಾತ್ರೆಯ ಅನುಕೂಲವನ್ನು ಒದಗಿಸುತ್ತದೆ.

ಕರಗ ಜಾತ್ರೆಗಳು ಸ್ತ್ರೀ ಪ್ರಧಾನವಾದವುಗಳಾಗಿದ್ದು ಜಾತ್ರೆಯ ಸಮಯದಲ್ಲಿ ಸ್ತ್ರೀಯರ ಭಾಗವಹಿಸುವಿಕೆ, ಜಾತ್ರೆಯ ಸಮಯದಲ್ಲಿ ಸ್ತ್ರೀಯರಿಗೆ, ವಿಧಿಯಾಚರಣೆಗಳನ್ನು ನೆರವೇರಿಸಲು ನೀಡಿರುವ ಸ್ವಾತಂತ್ರ್ಯ ಮತ್ತು ಅವರಿಗೆ ಉತ್ತಮ ಸಾಮಾಜಿಕ ಸ್ಥಾನಮಾನಗಳನ್ನು ನೀಡಿರುವುದರ ಸಂಕೇತವೆಂಬಂತೆ ಈ ಬಗೆಯ ಜಾತ್ರೆಗಳು ಕಂಡುಬರುತ್ತವೆ. ಉರುಸ್ ಜಾತ್ರೆಗಳು ಹೆಸರಿಗೆ ಮುಸ್ಲಿಂ ಮತಸ್ಥರ ಜಾತ್ರೆ ಎಂಬಂತೆ ಕಂಡುಬರುತ್ತದೆ. ಆದರೆ ಉರುಸ್ ಆಚರಣೆಯ ಸಮಯದಲ್ಲಿ ಮತಭೇದವಿಲ್ಲದೆ ಹಿಂದು, ಮುಸ್ಲಿಂ, ಕ್ರೈಸ್ತ, ಎಲ್ಲರೂ ಭಾಗವಹಿಸಲು ಮುಕ್ತ ಅವಕಾಶ ನೀಡಿ ಸರ್ವಮತ ಸಮನ್ವಯ ತತ್ವವನ್ನು ಪಾಲಿಸುವುದು ಕಂಡುಬರುತ್ತದೆ. ಜಾತ್ರೆಗಳು ಸಾಂಪ್ರದಾಯಿಕ, ಮತ, ಸಂಘಟನಾ, ಸಮಷ್ಟಿ ಹಿತರಕ್ಷಣೆ, ಸಾಮಾಜಿಕ, ನೈತಿಕಪ್ರಜ್ಞೆ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ, ಮನರಂಜನಾ ಕಾರ್ಯಗಳಂತಹ ಹಲವು ಆಶಯಗಳನ್ನು ಪ್ರಸ್ತುತ ಪಡಿಸುತ್ತದೆ. ಈ ಕಾರ್ಯಾತ್ಮಕ ಅವಶ್ಯಕತೆಗಳ ಈಡೇರಿಕೆಯ ಕಾರಣದಿಂದಾಗಿ ಜಾತ್ರೆಗಳು ಪ್ರಸ್ತುತವೆನಿಸಿವೆ.

ಒಟ್ಟಾರೆ ಜಾತ್ರೆಗಳ ಸಮಯದಲ್ಲಿ ವಿಭಿನ್ನ ಸಂಸ್ಕೃತಿಗಳ ಸಮಾಗಮವನ್ನು ಕಾಣಬಹುದು. ಅಲ್ಲದೆ ಇವುಗಳ ಮಧ್ಯದಲ್ಲಿ ಹೊಂದಾಣಿಕೆ ಮತ್ತು ಸಾಮ್ಯತೆಯನ್ನು ಗುರುತಿಸಲು ಸಾಧ್ಯ. ಪ್ರಸ್ತುತ ಸಮಾಜಕ್ಕೆ ಜಾತ್ರೆಗಳ ಅವಶ್ಯಕತೆಯಿದೆಯೇ ಎಂಬ ವಿಷಯವಾಗಿ ಅಧ್ಯಯನದಲ್ಲಿ ತೊಡಗಿದಾಗ ಪ್ರತಿ ಸಮಾಜ, ಸಮುದಾಯ, ಮತ, ಜಾತಿ, ಜನಾಂಗ, ವರ್ಗ ಹಾಗೂ ಪಂಗಡಗಳೂ ಸಹ ತಮ್ಮ ತನವನ್ನು ಹೇಗೆ ಸಂಪ್ರದಾಯದೊಂದಿದೆ ಸಮ್ಮಿಳಿತ ಗೊಳಿಸಿಕೊಂಡಿದೆ ಎಂಬ ಅಂಶಗಳು ತಿಳಿದುಬರುತ್ತದೆ. ಈ ಅಧ್ಯಯನವು ಜಾತ್ರೆಗಳ ಅಧ್ಯಯನದ ಸಾಮಾಜಿಕ, ಭಾವನಾತ್ಮಕ ಹಾಗೂ ಸಾಂಸ್ಕೃತಿಕ ಸಂಗತಿಗಳ ದೃಷ್ಟಿಯಿಂದ ಮಹತ್ವದ್ದಾಗಿದೆ.

## ೭.೧ ಅಧ್ಯಯನದ ಫಲಿತಗಳು

ಈ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಅಧ್ಯಯನದ ಫಲಿತಗಳನ್ನು ಈ ಕೆಳಕಂಡಂತೆ ತಿಳಿಸಲಾಗಿದೆ.

- ಜಾತ್ರೆಗಳ ಜೀವಪರವಾದ, ಮಾನವಪರವಾದ ನಂಬಿಕೆಗಳು ಹಾಗೂ ಸಾಂಪ್ರದಾಯಿಕ ಆಚರಣೆಗಳು ಯಥಾಸ್ಥಿತಿಯಲ್ಲಿ ಮುಂದುವರಿದಿದೆ.
- ಜಾತ್ರೆಗಳ ವೈಭವದ ಮೇಲೆ ಮತ್ತು ಅಲ್ಲಿಯ ಜನರ ಸಾಮಾಜಿಕ ಜೀವನದ ಮೇಲೆ ಆಧುನೀಕರಣ, ಪಾಶ್ಚಾತೀಕರಣ ಮತ್ತು ವೈಚಾರಿಕತೆಗಳು ಹೆಚ್ಚಿನ ಪರಿಣಾಮ ಬೀರಿವೆ.

- ಜಾತ್ರೆಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆ ನಿಧಾನಗತಿಯಲ್ಲಿ ಸಾಗಿದೆ.
- ಹಿಂದೆಂದಿಗಿಂತಲೂ ಇಂದು ಜಾತ್ರೆಗೆ ಬರುವ ಜನರ ಸಂಖ್ಯೆ ಗಣನೀಯವಾಗಿ ಹೆಚ್ಚಳವಾಗಿದೆ.
- ಜನಸಮುದಾಯಗಳ ಸಾಮಾಜಿಕ ಸಂಬಂಧವನ್ನು ಬೆಸೆಯುವ ಜಾತ್ರೆಗಳು ಇಂದು ವ್ಯಾವಹಾರಿಕ ಕೇಂದ್ರ ತಾಣಗಳಾಗಿ ಬದಲಾಗಿದೆ.
- ಜಾತ್ರೆಗಳು ದೈವ ಭಕ್ತಿಯ ಪ್ರತೀಕವಾಗಿಯೇ ಮುಂದುವರಿದಿದೆ.
- ಜಾತ್ರೆಗಳಲ್ಲಿ ರಾಜಕೀಯ ಧುರೀಣರ ಕೈವಾಡ ಇಂದು ಹೆಚ್ಚಾಗಿದೆ.
- ಮತ ಪ್ರಚಾರಕ ಮತಮಾನ್ಯಗಳು ರಾಜಕೀಯ ವ್ಯಕ್ತಿಗಳ ಪ್ರಭಾವಕ್ಕೆ ಒಳಗಾಗುತ್ತಿವೆ.
- ಸರ್ಕಾರದ ಕಾನೂನು ನೀತಿ ನಿಯಮಗಳನ್ನು ಲೆಕ್ಕಿಸದೆ ಜಾತ್ರೆಗಳ ಸಮಯದಲ್ಲಿ ಪ್ರಾಣಿಬಲಿ ಆಚರಣೆ ಮುಂದುವರಿದೆ.
- ಜಾತ್ರೆಗಳ ಆಚರಣೆಯಲ್ಲಿ ಮಹಿಳೆಯರ ಭಾಗವಹಿಸುವಿಕೆ ( ಪ್ರಾತಿನಿಧ್ಯ) ಹೆಚ್ಚಿದೆ.

## ೭.೨ ಅಧ್ಯಯನದ ಸಾಧ್ಯತೆಗಳು

ಕೊಡಗಿನ ಮೂರು ತಾಲೂಕುಗಳಲ್ಲಿ ಬರುವ ಜಾತ್ರೆಗಳನ್ನು ನಾನು ಧಾರ್ಮಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಿ ವಿಶ್ಲೇಷಿಸಿದ್ದೇನೆ. ಈ ಜಾತ್ರೆಗಳನ್ನು ಕೆಳಗೆ ತಿಳಿಸಿರುವ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಬಹುದು.

- ಈ ಜಾತ್ರೆಗಳಲ್ಲಿ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಬಹುದು.
- ಈ ಜಾತ್ರೆಗಳಲ್ಲಿ ಕಂಡುಬರುವ ಪ್ರದರ್ಶನ ಕಲೆಗಳ ಬಗ್ಗೆ ಅಧ್ಯಯನ ನಡೆಸಬಹುದು.
- ಸ್ತ್ರೀ ದೈವ ಹಿನ್ನೆಲೆ ಮತ್ತು ಪುರುಷ ದೈವ ಹಿನ್ನೆಲೆಯಲ್ಲಿ ಜರುಗುವ ಜಾತ್ರೆಗಳನ್ನು ಅಧ್ಯಯನ ಮಾಡಬಹುದು.
- ಕೊಡಗಿನಲ್ಲಿ ಕಣ್ಮರೆಯಾಗುತ್ತಿರುವ ಜಾತ್ರೆಗಳ ಬಗ್ಗೆ ಅಧ್ಯಯನ ಮಾಡಬಹುದು.

## ೭.೩ ಸಲಹೆಗಳು

೧. ಆಧುನಿಕತೆಯ ಭರಾಟೆಯಲ್ಲಿ ಸಾಮಾಜಿಕ ಸಂಬಂಧಗಳು ಸಡಿಲಗೊಳ್ಳುತ್ತಿದ್ದು ಜಾತ್ರೆಗಳ ಆಚರಣೆಗಳ ಮೂಲಕ ಸಂಬಂಧಗಳನ್ನು ಗಟ್ಟಿಗೊಳಿಸಬೇಕು.

೨. ಜಾತ್ರೆಗಳಲ್ಲಿ ಎಲ್ಲಾ ವರ್ಗದ ಜನರಿಗೂ ಸಮಾನ ಅವಕಾಶಗಳನ್ನು ನೀಡಬೇಕು.

೩. ಜಾತ್ರೆಯ ಸಮಯದಲ್ಲಿ ಗ್ರಾಮೀಣ ಸಮುದಾಯದ ಸಾಂಸ್ಕೃತಿಕ ಕ್ರೀಡೆಗಳನ್ನು ಪ್ರೋತ್ಸಾಹಿಸುವ ಮೂಲಕ ಅವುಗಳನ್ನು ಬೆಳಕಿಗೆ ತರಬೇಕು.

೪. ಜಾನಪದ ಸಾಹಿತ್ಯ, ಆಚರಣೆಗಳು ನಶಿಸುತ್ತಿದ್ದು ಅವುಗಳನ್ನು ಪುನಶ್ಚೇತನಗೊಳಿಸಬೇಕು.

೫. ಜಾತ್ರೆಗಳಲ್ಲಿ ಸ್ತ್ರೀ ಪುರುಷರ ನಡುವಿನ ತಾರತಮ್ಯದ ಆಚರಣೆಗಳನ್ನು ತಪ್ಪಿಸಬೇಕು.

೬. ಗ್ರಾಮೀಣ ಸಮುದಾಯದಲ್ಲಿನ ಜಾನಪದ ಹಾಡುಗಳು ಕಣ್ಮರೆಯಾಗಿದ್ದು ಅವುಗಳ ಉಳಿವಿಗೆ ಆದ್ಯತೆ ನೀಡಬೇಕು.

೭. ಪ್ರಸ್ತುತ ಆಧುನಿಕ ಸಮಾಜದಲ್ಲಿ ಜಾತ್ರೆಗಳ ಮೂಲ ಸೊಗಡು ಮರೆಯಾಗುತ್ತಿರುವುದನ್ನು ತಪ್ಪಿಸಬೇಕು.

೮. ಜಾತ್ರೆಯ ನೆಪದಲ್ಲಿ ಮೂಕ ಪ್ರಾಣಿಗಳ ಬಲಿಯನ್ನು ಕಡಿಮೆಗೊಳಿಸುವುದು.

## ಅನುಬಂಧಗಳು

# ಅನುಬಂಧ–೧

## ಪರಾಮರ್ಶನ ಗ್ರಂಥಗಳು


೧. ಅಂತರಗಟ್ಟಮ್ಮನ ಜಾತ್ರೆ – ಸುಶೀಲ ನೆಲ್ಲಿಸರ – ಕನ್ನಡ ಭಾರತಿ– ಕುವೆಂಪು ವಿವಿ ೨೦೦೪

೨. ಆದಿಚುಂಚನಗಿರಿ ಒಂದು ಸಾಂಸ್ಕೃತಿಕ ಅಧ್ಯಯನ – ಕೆ.ರಾಜೇಶ್ವರಿಗೌಡ– ಅಭಿಮಾನ ಪ್ರಕಾಶನ ರಾಜಾಜಿನಗರ, ಬೆಂಗಳೂರು ೨೦೦೦. ಆಧುನಿಕ ಕೊಡವ ಸಾಹಿತ್ಯ– ಎಂ.ಪಿ.ರೇಖಾ– ಮೈಸೂರು ವಿ.ವಿ.ಗೆ ಪಿಹೆಚ್.ಡಿ ಪದವಿಗೆ ಸಾದರಪಡಿಸಿದ ಸಂಶೋಧನಾ ಪ್ರಬಂಧ – ೨೦೦೯

೩. ಇತಿಹಾಸಕಾರ ಹೆಚ್.ವಿ.ವೀರನಾಯಕ ಹರತಿ – ಪ್ರೊ.ಲಕ್ಷ್ಮಣ್ ತೆಲಗಾವಿ – ವಾಲ್ಮೀಕಿ ಸಾಹಿತ್ಯ ಸಂಪದ ೨೦೦೪

೪. ಉಜ್ಜನಿ ಚೌಡಮ್ಮ – ಹಿ.ಚಿ.ಬೋರಲಿಂಗಯ್ಯ – ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ೧೯೭೯

೫. ಏಳು ಊರಿನ ದೇವತೆಗಳು ಒಂದು ಅಧ್ಯಯನ–.ಸಿ.ಟಿ. ಗುರುಪ್ರಸಾದ್– ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೫

೬. ಕರ್ನಾಟಕದ ಜಾತ್ರೆಗಳು – ಹಂಪ ನಾಗರಾಜಯ್ಯ – ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೪

೭. ಕರ್ನಾಟಕದ ಜಾತ್ರೆಗಳು (ಸಂ) ಸಿ.ಎಸ್.ಶಿವಕುಮಾರಸ್ವಾಮಿ – ಸ್ನಾತಕೋತ್ತರ ಕೇಂದ್ರ, ಬಿ.ಆರ್.ಪ್ರಾಜೆಕ್ಟ್ ಮೈಸೂರು ೧೯೮೮

೮. ಕರ್ನಾಟಕದ ಜಾತ್ರೆಗಳು – . ಹಂಪ ನಾಗರಾಜಯ್ಯ – ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೫

೯. ಕರ್ನಾಟಕದ ಜನಪದ ಕಲೆಗಳು (ಸಂ) ಗೋ.ರು.ಚನ್ನಬಸಪ್ಪ– ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೭೭

೧೦. ಕರ್ನಾಟಕ ಜಾನಪದ (ಸಂ) .ಜಿ.ಶಂ.ಪರಮಶಿವಯ್ಯ – ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೧. ಕರ್ನಾಟಕ ಜಾನಪದ ಕಲೆಗಳ ಕೋಶ (ಸಂ) ಹಿ.ಚಿ.ಬೋರಲಿಂಗಯ್ಯ – ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೧೯೯೬

೧೨. ಕರ್ನಾಟಕ ಜಿಲ್ಲಾ ದರ್ಶನ ಮತ್ತು ಪ್ರೇಕ್ಷಣೀಯ ಸ್ಥಳಗಳು ೨೯ ಜಿಲ್ಲೆಗಳ ಕಿರು ಪರಿಚಯದೊಂದಿಗೆ (ಸಂ) ಬೇಂದ್ರೆ ಮಂಜುನಾಥ – ಕರಾವಳಿ ಪ್ರಕಾಶನ– ಮಂಗಳೂರು ೨೦೦೭

೧೩. ಕರ್ನಾಟದ ಗ್ರಾಮದೇವತೆಗಳು – ಲಿಂಗಯ್ಯ – ಐ.ಬಿ.ಹೆಚ್ ಪ್ರಕಾಶನ, ಬೆಂಗಳೂರು ೧೯೮೪

೧೪. ಕರ್ನಾಟಕದ ಶಕ್ತಿ ದೇವತೆಗಳು – ಎನ್.ಆರ್. ನಾಯಕ – ಐ.ಹೆಚ್.ಬಿ ಪ್ರಕಾಶನ ಬೆಂಗಳೂರು ೧೯೮೩

೧೫. ಕರ್ನಾಟಕ ಜಾನಪದ (ಪ್ರ.ಸಂ) .ಎಸ್.ಕರೀಂಖಾನ್ ಡಾ.ಜಿ.ಶಂ.ಪ – ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ, ಬೆಂಗಳೂರು ೧೯೮೯

೧೬. ಕರ್ನಾಟಕದ ಜನಪದ ಆಚರಣೆಗಳು – ಸ.ಚಿ.ರಮೇಶ್– ಪ್ರಸಾರಾಂಗ, ಕನ್ನಡ ವಿವಿ ಹಂಪಿ ೨೦೧೦

೧೭. ಕರ್ನಾಟಕ ಜನಗಣತಿ ೨೦೧೧ – ಡಾ.ಟಿ.ಆರ್.ಚಂದ್ರಶೇಖರ – ಪ್ರಸಾರಾಂಗ ಕನ್ನಡ ವಿವಿ ಹಂಪಿ ೨೦೦೨

೧೮. ಕರ್ನಾಟಕದ ಬುಡಕಟ್ಟುಗಳು – ಪ್ರಚಾರ ಪುಸ್ತಕಮಾಲೆ ೨೮೭ ಆರ್.ರಾಮಕೃಷ್ಣ – ಪ್ರಸಾರಾಂಗ ಮಾನಸ ಗಂಗೋತ್ರಿ, ಮೈಸೂರು

೧೯. ಕರ್ನಾಟಕ ರಾಜ್ಯ ಗೆಜೆಟಿಯರ್ ಭಾಗ–೧ (ಸಂ) ಸೂರ್ಯನಾಥ ಯು.ಕಾಮತ್ ೧೯೮೪

೨೦. ಕನ್ನಡ ಜಾನಪದ ಕಥೆಗಳು –ಡಾ.,ಕೆ.ಆರ್.ಸಂಧ್ಯಾರೆಡ್ಡಿ – ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೮೨

೨೧ ಕರ್ನಾಟಕದಲ್ಲಿ ಸಾಕ್ಷರತೆಯ ಲಿಂಗ ಸಂಬಂಧಿ ಸ್ವೂಪ – ಮಂಟಪ ಮಾಲೆ –೧೬ .ಟಿ.ಆರ್.ಚಂದ್ರಶೇಖರ್ – ಪ್ರಸಾರಾಂಗ ಕನ್ನಡ ವಿ.ವಿ.ಹಂಪಿ ೨೦೧೦

೨೨. ಕನ್ನಡ ವಿಷಯ ವಿಶ್ವಕೋಶ (ಸಂ) ಅರವಿಂದ ಮಾಲಗತ್ತಿ – ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿವಿ ಮೈಸೂರು ೨೦೦೬

೨೩. ಕನ್ನಡ ಜನಪದ ಕಥೆಗಳ ನೆಲೆ – .ಹಿ.ಸಿ.ರಾಮಚಂದ್ರೇಗೌಡ– ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೨೦೦೨

೨೪. ಕನ್ನಡ ವಿಶ್ವಕೋಶ ಸಂಪುಟ ೭– ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿವಿ ೧೯೭೪

೨೫. ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ–೪ ತಂಬಂಡ ವಿಜಯ್ ಪೂಣಚ್ಚ – ಕನ್ನಡ ವಿ.ವಿ. ಹಂಪಿ ೨೦೦೧

೨೬ ಕನ್ನಡ ವಿಶ್ವಕೋಶ ಸಂಪುಟ ೮ – ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿವಿ ೧೯೭೭

೨೭. ಕನ್ನಡ ವಿಷಯ ವಿಶ್ವಕೋಶ – ಮೈಸೂರು ವಿವಿ

೨೮. ಕನ್ನಡ ರತ್ನಕೋಶ (ಪ್ರ.ಸಂ) ಹಾ.ಮಾ.ನಾ–ಸರ್ಕಾರಿ ಮುದ್ರಣಾಲಯ ಬೆಂಗಳೂರು ೧೯೯೪
೨೯. ಕರಗ ಸಂಪ್ರದಾಯ – .ಎಂ.ಸುಮಿತ್ರ – ಅಂಕಿತ ಪ್ರಕಾಶನ ಬೆಂಗಳೂರು ೨೦೦೨
೩೦. ಕೊಡಗಿನ ಬುಡಕಟ್ಟುಗಳು – ಪ್ರಚಾರ ಪುಸ್ತಕಮಾಲೆ ೨೮೭ ಡಾ.ಭಾಮಿನಿ ರಾಘವಯ್ಯ – ಪ್ರಸಾರಾಂಗ
೩೧. ಕಾವೇರಿ ಸಿರಿ – ಸ್ಮರಣ ಸಂಚಿಕೆ – ೮೦ನೇ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನ ೨೦೧೪
೩೨. ಕೊಡಗು ಜನಪದ ಸಂಸ್ಕೃತಿ ಲೇಖನ ಸಂಕಲನ– ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಡಿಕೇರಿ ೨೦೧೪
೩೩. ಕೊಡಗಿನ ಧಾರ್ಮಿಕ ಕೇಂದ್ರಗಳು ಮತ್ತು ಧಾರ್ಮಿಕ ಉತ್ಸವಗಳು – ಸಿ.ಎಸ್.ರಮೇಶ್– ಕನ್ನಡ ಸಾಹಿತ್ಯ ಪರಿಷತ್ತು, ಮಡಿಕೇರಿ ೨೦೧೪
೩೪. ಕೊಡವರು ಮತ್ತು ಅರೆಭಾಷೆ ಗೌಡರ ಸಂಸ್ಕೃತಿ – ತೌಲನಿಕ ಅಧ್ಯಯನ – ಎ.ಸಿ.ಶೈಲಜಾ ಮೈಸೂರು ವಿ.ವಿ.ಗೆ ಸಾಧರಪಡಿಸಿದ ಪಿಹೆಚ್.ಡಿ ಪ್ರಬಂಧ ೨೦೧೪
೩೫. ಕೊಡಗಿನ ಬುಡಕಟ್ಟುಗಳು – ಪ್ರಚಾರ ಪುಸ್ತಕಮಾಲೆ ೨೮೭ ಡಾ.ಭಾಮಿನಿ ರಾಘವಯ್ಯ – ಪ್ರಸಾರಾಂಗ ಮಾನಸ ಗಂಗೋತ್ರಿ ಮೈಸೂರು ೨೦೦೭.
೩೬ ಕೊಪ್ಪಳ ಜಿಲ್ಲೆಯ ಜಾತ್ರೆಗಳು –ಗ್ರಾಮ ಸಂಸ್ಕೃತಿ ಮಾಲೆ–೫ – ಎಸ್.ಎಸ್.ಹಿರೇಮಠ– ಕನ್ನಡ ಪುಸ್ತಕ ಪ್ರಾಧಿಕಾರ– ಬೆಂಗಳೂರು ೨೦೦೦
೩೭. ಕೋಲಾರ ಜಿಲ್ಲೆಯ ಜಾತ್ರೆಗಳು – ಒಂದು ಅಧ್ಯಯನ – ಸಿ.ಎಂ.ಗೋವಿಂದ ರೆಡ್ಡಿ – ಮೈಸೂರು ವಿ.ವಿ.ಗೆ ಸಲ್ಲಿಸಿದ ಪಿಎಚ್.ಡಿ ಮಹಾಪ್ರಬಂಧ ೨೦೦೪
೩೮. ಕರ್ನಾಟಕದ ಸೂಫಿಗಳು – ರಹಮತ್ ತರಿಕೆರೆ –ಅಭಿನವ ಪ್ರಕಾಶನ ೧೯೯೮
೩೯. ಗ್ರಾಮದೇವತೆಗಳು – ಸಿದ್ದಲಿಂಗಯ್ಯ– ಮೂಲಭಾರತಿ ಪ್ರಕಾಶನ ಬೆಂಗಳೂರು ೧೯೯೭
೪೦. ಚಂದ್ರಗುತ್ತಿ ರೇಣುಕಾಂಬಾ ಜಾತ್ರೆ – ಎಚ್.ಎಸ್.ಮೋಹನ ಚಂದ್ರಗುತ್ತಿ – ಬಡ್ತಿ ಪ್ರಕಾಶನ, ಸಾಗರ
೪೧. ಚಿತ್ರದುರ್ಗ ಜಿಲ್ಲೆಯ ಜಾತ್ರೆಗಳು : ಒಂದು ಸಮಾಜಶಾಸ್ತ್ರೀಯ ಅಧ್ಯಯನ – ಗೌಡಪ್ಪ.ಜಿ – ಮೈಸೂರು ವಿ.ವಿ.ಗೆ ಸಾದರಪಡಿಸಿದ ಪಿಹೆಚ್.ಡಿ ಪ್ರಬಂಧ ೨೦೧೪
೪೨. ಜನಪದ ದೈವಗಳು – ಮಂಟಪ ಮಾಲೆ ೧೬೫ ಡಾ.ಬಸವರಾಜ ಸಬರದ, ಪ್ರಸಾರಾಂಗ ಕನ್ನಡ ವಿವಿ ಹಂಪಿ ೨೦೦೯
೪೩. ಜಾತ್ರೆ – ವೈದೇಹಿ– ಕನ್ನಡ ಪ್ರಪಂಚ ಪ್ರಕಾಶನ – ದಾವಣಗೆರೆ ೧೯೯೭
೪೪. ಜಾತ್ರೆಗಳು ಕರೀಗೌಡ ಬೀಚನಹಳ್ಳಿ – ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೭೯

೪೫. ಜಾತ್ರೆಗಳು ಜಗನ್ನಾಥ ಹೆಬ್ಬಾಳೆ – ಪ್ರಸಾರಾಂಗ ಗುಲ್ಬರ್ಗ ವಿವಿ, ಗುಲ್ಬರ್ಗ ೧೯೯೨

೪೬. ಜಾತ್ರೆಗಳು ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ – ಭಾಗ೨ ಎಸ್.ಎಸ್.ಹಿರೇಮಠ – ಸಮತಾ ಪ್ರಕಾಶನ ಹೊಸಪೇಟೆ ೧೯೯೩

೪೭. ಜಾತ್ರೆ ಮತ್ತು ಇತರ ಸಂಶೋಧನಾತ್ಮಕ ಪ್ರಬಂಧಗಳು – ಚಂದ್ರಶೇಖರದಾಮ್ಲೆ – ನೆಹರು ಮೆಮೋರಿಯಲ್ ಕಾಲೇಜು ಸುಳ್ಯ ೧೯೯೦

೪೮ ಜಾತ್ರೆ ತಿಪ್ಪಣ್ಣ ಮರಿಕುಂಟೆ. ಬಿ.ಸಿ.ವಿ.ಜಿ ಪಬ್ಲಿಕೇಷನ್ಸ್ ಬೆಂಗಳೂರು ೨೦೦೫

೪೯. ಜಾನಪದ ಬನಸಿರಿ – ಹೆಬ್ಬಾಲೆ. ಕೆ.ನಾಗೇಶ್ – ರುಚಿರ ಪ್ರಕಾಶನ ಹೊಸಪೇಟೆ ೨೦೦೨

೫೦. ತೀರ್ಥಹಳ್ಳಿಯ ಎಳ್ಳಮವಾಸ್ಯೆ ಜಾತ್ರೆ– ಬಿ.ಗಣಪತಿ– ಕನ್ನಡ ಭಾರತಿ ಕುವೆಂಪು ವಿವಿ ೨೦೦೪

೫೧. ತುಮಕೂರು ಜಿಲ್ಲೆಯ ಜಾತ್ರೆಗಳು ಗ್ರಾಮಸಂಸ್ಕೃತಿ ಮಾಲೆ ೨(೭) ಚಿಕ್ಕಣ್ಣಯೆಣ್ಣಕಟ್ಟೆ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೩

೫೨. ತೇರು ಆಧುನಿಕ ಪುರಾಣ –ರಾಘವೇಂದ್ರ ಪಾಟೀಲ – ಆನಂದ ಕಂದ ಗ್ರಂಥ ಮಾಲೆ ಮಲ್ಲಾಡಿಹಳ್ಳಿ ೨೦೦೩

೫೩. ದೇವರು – ಒಂದು ವಿಚಾರ ಲಹರಿ – ಡಿ.ವಿ.ಜಿ. ಕಾವ್ಯಾಲಯ ಪ್ರಕಾಶಕರು ಜಯನಗರ, ಮೈಸೂರು ೧೯೯೨

೫೪. ನಮ್ಮ ಜನಪದ ನಂಬಿಕೆಗಳು – ಜಿ.ವಿ.ದಾಸೇಗೌಡ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ ಮೈಸೂರು ೧೯೭೩

೫೫. ಪರಿಸೆ v/s ಮಾನ್ಯೇವು ಡಾ.ಮಂಜುನಾಥ ಬೇವಿನಕಟ್ಟೆ – ಪ್ರಸಾರಾಂಗ ಕನ್ನಡ ವಿ.ವಿ ಹಂಪಿ ೨೦೧೦

೫೬. ಪ್ರತಿ ಸಂಸ್ಕೃತಿ – ರಹಮತ್ ತರೀಕರೆ – ಕನ್ನಡ ಸಂಘ ಕ್ರೈಸ್ಟ್ ಕಾಲೇಜ್ ಬೆಂಗಳೂರು ೧೯೯೩

೫೭. ಪುಣ್ಯಕ್ಷೇತ್ರಗಳ ಪರಿಚಯ – ಉಳುವಂಡ –ಕಾವೇರಿ ಉದಯ –ಕೊಡವ ಮಕ್ಕಡಕೂಟ, ಮಡಿಕೇರಿ –೨೦೧೯

೫೮. ಬಹುಸಂಸ್ಕೃತಿ ಮತ್ತು ದೇಸೀ ಜಾತ್ರೆಗಳ ಮಹಾ ಸಮನ್ವಯ– ಹೆಬ್ಬಾಲೆ. ಕೆ.ನಾಗೇಶ್ ಪ್ರಸಾರಾಂಗ ಕನ್ನಡ ವಿವಿ ಹಂಪಿ –೨೦೧೧

೫೯. ಭಾರತೀಯ ಹಬ್ಬಗಳು ಮತ್ತು ಸಂಪ್ರದಾಯಗಳು – ಬೆ.ಗೋ.ರಮೇಶ್ ವಾಸನ್ ಬುಕ್ ಡಿಪೋ ಬೆಂಗಳೂರು ೧೯೯೮

೬೦. ಮಂಟೆಸ್ವಾಮಿ ಮೂಮೆಂಟ್ ಚಿಕ್ಕಲೂರ ಜಾತ್ರೆ – ದಲಿತ ಸಂಸ್ಕೃತಿ ಪುಸ್ತಕ ಮಾಲೆ– ೨, ಮಹದೇವ ಶಂಕನಪುರ – ಪಿಎಂಎಸ್ಆರ್ ಸಂಸ್ಥೆ, ಕೊಳ್ಳೇಗಾಲ ೨೦೦೨

೬೧. ಮಂಡ್ಯ ಜಿಲ್ಲೆಯ ಜಾತ್ರೆಗಳು – ಗ್ರಾಮಸಂಸ್ಕೃತಿ ಮಾಲೆ –೭ ಜಿ.ವಿ.ದಾಸೇಗೌಡ – ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ೨೦೦೦

೬೨. ಮಹಿಳೆ ಮತ್ತು ಧರ್ಮ– ಶಿವಾನಂದ ಎಸ್.ವಿರಕ್ತ ಮಠ ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ೨೦೧೦

೬೩. ಮಳವಳ್ಳಿ ತಾಲೂಕಿನ ಜಾತ್ರೆಗಳು ಒಂದು ಸಾಂಸ್ಕೃತಿಕ ಅಧ್ಯಯನ – ಪಿ.ಮಹದೇವಯ್ಯ ಶ್ರೀ ರಾಘವೇಂದ್ರ ಪ್ರಿಂಟರ್ಸ್ ಹಾಸನ ೨೦೦೯

೬೪. ಮಲೇ ಮಹದೇಶ್ವರ (ಸಂ) ಕೆ.ಕೇಶವನ್ ಪ್ರಸಾದ್ – ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೧೯೯೭

೬೫. ಮಾರಿಹಬ್ಬಗಳು – ಮಹಾದೇವ ಶಂಕನಪುರ – ಪಿ.ಎಂ.ಎಸ್.ಆರ್. ಸಂಸ್ಥೆ ಕೊಳ್ಳೇಗಾಲ ೨೦೦೧

೬೬. ಮೈಲಾರದ ಜಾತ್ರೆಗಳು ಎಂ.ಎನ್.ವೆಂಕಟೇಶ್ ಅಭಿ ಆದರ್ಶ ಪ್ರಕಾಶನ ಭದ್ರಾವತಿ ೧೯೯೮

೬೭. ಶಿರಸಿಯ ಶ್ರೀ ಮಾರಿಕಾಂಬೆ ಮತ್ತು ಜಾತ್ರೆ ನಾಯಕ್ ಆರ್. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ೧೯೯೬

೬೮. ಹಬ್ಬಗಳು ಜಾತ್ರೆಗಳು ಬೆ.ಗೋ.ರಮೇಶ್ ಹಂಸಧ್ವನಿ ಪ್ರಕಾಶನ ಬೆಂಗಳೂರು ೧೯೮೪

೬೯. ಹೈದ್ರಾಬಾದ್ ಕರ್ನಾಟಕ ಜಾತ್ರೆಗಳು – ಒಂದು ಸಾಂಸ್ಕೃತಿಕ ಅಧ್ಯಯನ (ಪಿಹೆಚ್‌ಡಿ ಮಹಾಪ್ರಬಂಧ) ಡಾ. ಎಸ್.ಜಗನ್ನಾಥ ಹೆಬ್ಬಾಳೆ ಗುಲ್ಬಾರ್ಗಾ ವಿ.ವಿ ಗುಲ್ಬರ್ಗಾ ೧೯೯೬

೭೦. ಹೈದರಾಬಾದ್ ಕರ್ನಾಟಕದ ಗ್ರಾಮ ದೇವತೆಗಳ ಜಾನಪದೀಯ ಅಧ್ಯಯನ ( ಪಿಎಚ್‌ಡಿ ಮಹಾಪ್ರಬಂಧ) ಚೆನ್ನಣ್ಣ ವಾಲೀಕಾರ ಲಕ್ಷ್ಮಿ ಮುದ್ರಣಾಲಯ ಬೆಂಗಳೂರು ೧೯೯೮

71 . An introduction to social anthropology – Manumdar and Madan

72. All about hindu temples – swami harshananda- mysore 1981

73, Culture anthropology – Herskovits, Malville.J – Indian book house New Delhi 1994

74. Folk songs of southern india – Gover Charls E madras 1871

75. Folk Icons and Ritals in tribal life- Promod kumar – National book trust New Delhi -1984

76 God and man – periyar E.V.Ramaswamy – Madras 1983

77. Hindu Religion customs and mannars – P.Thomas 1975

80. Introducing Folkfore – Kenneth and mary Clarke – USA Hoil Rinehan Winston 1963

81. Karnataka stage Geztter –Surxananth kamath Banaglore 1983

82. Mysore gazetteer- hunga vadana Rao C Bangalore 1930

## ಅನುಬಂಧ-೨

## ವಕ್ತೃ ವಿವರ

| | ಹೆಸರು | ವೃತ್ತಿ | ಊರು | ವಯಸ್ಸು |
|---|---|---|---|---|
| ೧. | ಸರಸು ಹೆಚ್.ವೈ | ಮುಖ್ಯಶಿಕ್ಷಕಿ | ಅಮ್ಮತ್ತಿ | ೫೨ |
| ೨. | ಸತೀಶ್ | ಅರ್ಚಕರು | ಮಡಿಕೇರಿ | ೪೮ |
| ೩. | ಹೆಚ್.ಡಿ.ಶಿವಣ್ಣ | ಕೂಲಿಕಾರ್ಮಿಕ | ವಿರಾಜಪೇಟೆ | ೪೪ |
| ೪. | ಶರೀನ್ | ಗೃಹಿಣಿ | ಪೊನ್ನಂಪೇಟೆ | ೩೩ |
| ೫. | ಹೇಮಾವತಿ | ಶಾಲಾ ಶಿಕ್ಷಕಿ | ಹಾತೂರು | ೩೭ |
| ೬. | ಮನುಬಿದ್ದಪ್ಪ | ಕೂಲಿ ಕಾರ್ಮಿಕ | ಕಕ್ಕಬ್ಬೆ | ೩೮ |
| ೭. | ನವೀನ್ | ಆಟೋಡ್ರೈವರ್ | ಕಕ್ಕಬ್ಬೆ | ೩೦ |
| ೮. | ದೇವಿಪ್ರಸಾದ್ | ಅರ್ಚಕರು | ಪಾಲೂರು | ೪೦ |
| ೯. | ಹೆಚ್.ಎಸ್.ಗೋವಿಂದಸ್ವಾಮಿ | ಧರ್ಮದರ್ಶಿಗಳು | ಕಣಾಂಗೇರಿ | ೫೬ |
| ೧೦. | ಗುರುರಾಜರಾವ್ | ಅರ್ಚಕರು | ವಿರಾಜಪೇಟೆ | ೫೦ |
| ೧೧. | ಶಿವಪ್ರಸಾದ್ | ಅರ್ಚಕರು | ಗೋಣಿಕೊಪ್ಪ | ೫೦ |
| ೧೨. | ದಿ॥ಮಾದಮ್ಮಯ್ಯ | ಗ್ರಾಮಸ್ಥರು | ಶ್ರೀಮಂಗಲ | ೫೦ |
| ೧೩. | ಕಟ್ಟೆರ ಅಚ್ಚಪ್ಪ | ಗ್ರಾಮಸ್ಥರು | ಟಿ.ಶೆಟ್ಟಗೇರಿ | ೫೦ |
| ೧೪. | ಈಶ್ವರ | ಗ್ರಾಮಸ್ಥರು | ಟಿ.ಶೆಟ್ಟಿಗೇರಿ | ೫೦ |
| ೧೫. | ಚೆಟ್ಟಂಡ ಸೋಮಯ್ಯ | ಗ್ರಾಮಸ್ಥರು | ಟಿ.ಶೆಟ್ಟಿಗೇರಿ | ೫೦ |
| ೧೬. | ಗಿರೀಶ್ | ಅರ್ಚಕರು | ಬಾಡರಕೇರಿ | ೫೫ |
| ೧೭. | ಅರುಣ್ ಅಪ್ಪಣ್ಣ | ಅರ್ಚಕರು | ಟಿ.ಶೆಟ್ಟಿಗೇರಿ | ೪೫ |
| ೧೮. | ಮದ್ರರ ವಿಷ್ಣು | ಅರ್ಚಕರು | ಶ್ರೀಮಂಗಲ | ೩೮ |
| ೧೯. | ನಂದಕುಮಾರ್ | ಕೃಷಿಕ | ಚೇಲವಾರ | ೪೫ |
| ೨೦. | ರಾಘವೇಂದ್ರಚಾರ್ | ಅರ್ಚಕರು | ಕಣಿವೆ | ೫೦ |

| | | | |
|---|---|---|---|
| ೨೧. ಬಲಡಿ ಚಂಡ ಮುರುಳಿ | ಅರ್ಚಕರು | ನಂಜರಾಯಪಟ್ಟಣ | ೫೫ |
| ೨೨. ಚೋಕಂಡ ರಮೇಶ್ | ಕೃಷಿಕ | ಮಗ್ಗುಲ | ೫೦ |
| ೨೩. ನಾಚಪ್ಪ | ಕೃಷಿಕ | ಕಕ್ಕಬ್ಬೆ | ೩೦ |
| ೨೪. ಸುರೇಶ | ಖಾಸಗಿ ಉದ್ಯೋಗಿ | ಕೋತೂರು | ೩೦ |
| ೨೫. ವರದರಾಜು | ಸ್ವಂತ ಉದ್ಯೋಗಿ | ಹುಣಸೂರು | ೩೮ |
| ೨೬. ಲೋಕೇಶ | ಪೂಜಾರಿ | ಕಲ್‌ಮಡಗೇರಿ | ೩೦ |
| ೨೭. ಸದಾಶಿವ | ಕೃಷಿಕ | ಕಲ್‌ಮಡಗೇರಿ | ೫೫ |
| ೨೮. ಸುಜಿ | ಗೃಹಿಣಿ | ಒಂಟಿಯಂಗಡಿ | ೩೦ |
| ೨೯. ರಾಮಚ್ಚ | ಕೃಷಿಕ | ಬಿಟ್ಟಂಗಾಲ | ೭೧ |
| ೩೦. ವಿಷ್ಣುಮುಕ್ಕಾಟೀರ | ಕೃಷಿಕ | ಬಿಟ್ಟಂಗಾಲ | ೫೦ |

## ಅನುಬಂಧ-೩

## ಸಾಂಸ್ಕೃತಿಕ ಪದಕೋಶ

೧. ಪೊಮ್ಮಾಲೆ – ಹೊನ್ನುಮಾಲೆ

೨. ಪೂದನು – ಗುಳಿಗ, ತೆರೆಯಲ್ಲಿನ ಒಂದು ದೈವಕೋಲ

೩. ಕಾರೋಣ– ವಂಶದ ಹಿರಿಯ

೪. ವಕ್ಕ – ಮನೆತನ

೫. ಐನ್‌ಮನೆ – ಮೂಲಮನೆ

೬. ವಕ್ಕ ಪರಿಜೆ – ಕುಟುಂಬದ ಹೆಣ್ಣು ಮಕ್ಕಳಿಗಾಗಿ ತಂದೆ ಮನೆಯಲ್ಲೆ ವಾಸಿಸುವುದು

೭. ಕೊರುವುಕಾರ – ಕುಟುಂಬಗಳ ಹಿರಿಯ ಯಜಮಾನರು

೮. ತಕ್ಕ ಗ್ರಾಮದ ಮುಖ್ಯಸ್ಥ, ದೇವಾಲಯದ ಮುಖ್ಯಸ್ಥ

೯. ತಕ್ಕ – ಗ್ರಾಮದ ಮುಖ್ಯಸ್ಥ, ದೇವಾಲಯ ಮುಖ್ಯಸ್ಥ

೧೦. ಪೀಚೆಕತ್ತಿ – ಕೊಡವರು ಸೊಂಟದಲ್ಲಿ ಸಿಕ್ಕಿಸುವ ಅಲಂಕಾರಿಕ ಕತ್ತಿ

೧೧. ದೇವರಕಾಡು – ದೇವಸ್ಥಾನಗಳಿಗೆ ಮೀಸಲಾಗಿಟ್ಟ ಕಾಡು ಜಾಗ

೧೨. ದುಡಿಕೊಟ್ಟಪಾಟ್ – ಕೊಡವ ಜನಪದ ಸಾಹಿತ್ಯದ ಪ್ರಕಾರ

೧೩. ಕಚ್ಚೆದುಡಿ – ಕಿರಿಯ ಡೋಲು

೧೪. ಉಮ್ಮತ್ತಾಟ್ – ಕೊಡಗಿನ ಜನಪದ ನೃತ್ಯ

೧೫. ಜಟ್ಟಿ – ಬಲಶಾಲಿ

೧೬. ಸಾರುವುದು ಕೊಡುವುದು – ಹಬ್ಬ ಹಾಗೂ ಜಾತ್ರೆಯ ಬಗ್ಗೆ ಪ್ರಚಾರ ಮಾಡುವುದು

೧೭. ಭಂಡಾರ – ಹಣದ ಹುಂಡಿ, ಹುಂಡಿಗೆ ಹಾಕುವ ಹಣಪದಕೋಶ

೧೮. ಎಕ್ಕ – ಎರಡು

೧೯. ಮೂವ – ಮೂರು

೨೦. ಕಳ್ಳೂ – ಸಾರಾಯಿ, ಹೆಂಡ

೨೧. ಪಾಟ್ – ಹಾಡು

೨೨. ತಿರುವಳ್‌ಗಾರರು – ಮೈಮೇಲೆ, ದೇವರು ಬರುವವರನ್ನು ಹೀಗೆ ಕರೆಯುತ್ತಾರೆ.

೨೩. ಆಟ್‌ಬಣ್ಣರ್ – ತೆರೆಗಳನ್ನು ಕಟ್ಟುವ ಒಂದು ಜನಾಂಗ

೨೪. ತೆರೆ – ಗ್ರಾಮದೇವತೆಗಳ ಹಬ್ಬದ ವೇಳೆಗೆ ವೇಷತೊಟ್ಟು ಮೈ ಬಂದು ಕುಣಿಯುವ ದೇವಡ ತೆರೆ

೨೫. ಪರಂಬ್ – ದೇವಸ್ಥಾನಕ್ಕೆ ಒತ್ತಾಗಿರುವ, ಹಬ್ಬ ನಡೆಸುವ ಮೈದಾನ

೨೬. ಪೀಲಿಯಾಟ್ – ನವಿಲುಗರಿಯನ್ನು ಬೀಸುತ್ತಾ ಕುಣಿಯುವ ಕೊಡವ ನರ್ತನ

೨೭. ಪುತ್ತು – ಹುತ್ತ

೨೮. ಪೋಲಿಯಾಚೇಂಗಿ – ಕಳ್ಳನಾಗಿರು, ಅಶುಚಿಯಿಂದಿರುವವ

೨೯. ಮಕ್ಕಿ – ಸ್ಥಳ, ತೇವಭರಿತ ಪೊದರುಗಾಡಿನ ಸ್ಥಳ

ಅನುಬಂಧ-೪

ನಕ್ಷೆ

# ಅಧ್ಯಯನದ ಕಾರ್ಯ ಕ್ಷೇತ್ರ

## ಭಾರತ

## ಕರ್ನಾಟಕ ರಾಜ್ಯ







## ಕೊಡಗು ಜಿಲ್ಲೆ






# ಛಾಯಾಚಿತ್ರಗಳು



ಪನ್ನಂಗಾಲತಮ್ಮೆ ಉತ್ಸವಮೂರ್ತಿ, ಅರಮೇರಿ ಗ್ರಾಮ, ವಿರಾಜಪೇಟೆ ತಾಲ್ಲೂಕು



ಪನ್ನಂಗಾಲತಮ್ಮೆ ಜಾತ್ರೆಯಲ್ಲಿನ ಅಂಗಡಿಮುಂಗಟ್ಟುಗಳು



ಎಮ್ಮೆಮಾಡು ಉರುಸ್, ಮಡಿಕೇರಿ ತಾಲ್ಲೂಕು



ಮಕ್ಕಿ ಶಾಸ್ತಾವು ದೇವಸ್ಥಾನ, ಬೇತು ಗ್ರಾಮ, ಮಡಿಕೇರಿ ತಾಲ್ಲೂಕು



ಇಗ್ಗುತಪ್ಪ ದೇವಾಲಯ, ಪಾಡಿ ಗ್ರಾಮ, ಮಡಿಕೇರಿ ತಾಲ್ಲೂಕು



ಕುಟ್ಟತಮ್ಮ ದೇವಾಲಯ, ಕುಟ್ಟ, ವಿರಾಜಪೇಟೆ ತಾಲ್ಲೂಕು



ಜಾತ್ರೆಯಲ್ಲಿನ ವ್ಯಾಪಾರದ ದೃಶ್ಯ



ಪೊಟ್ಟನ್‌ತೆರೆ, ಅಮ್ಮತ್ತಿ, ವಿರಾಜಪೇಟೆ ತಾಲ್ಲೂಕು



ಪೊಟ್ಟನ್‌ತೆರೆ ವೀಕ್ಷಿಸುತ್ತಿರುವ ದೃಶ್ಯ, ಅಮ್ಮತ್ತಿ



ಕಾವೇರಿ ಸಂಕ್ರಮಣದ ದೃಶ್ಯ, ತಲಕಾವೇರಿ



ಕಣಿವೆ ರಾಮೇಶ್ವರ ದೇವಸ್ಥಾನ ಸೋಮವಾರಪೇಟೆ ತಾಲೂಕು



ಭಂಗಡೇಶ್ವರ ದೇವಸ್ಥಾನ ಭಾಗಮಂಡಲ ಮಡಿಕೇರಿ ತಾಲೂಕು



ಮೃತ್ಯುಂಜಯ ದೇವಸ್ಥಾನ ಬಾಡಗರಕೇರಿ ವಿರಾಜಪೇಟೆ ತಾಲೂಕು



ಇರ್ಪುರಾಮೇಶ್ವರ ದೇವಸ್ಥಾನ ವಿರಾಜಪೇಟೆ ತಾಲೂಕು

